# ಗ್ರಂಥಾಲಯ ಮತ್ತು ಇತರ ಜ್ಞಾನಸಂವಹನ ಮಾಧ್ಯಮಗಳಿಂದ ಕೈದಿಗಳ ಮನಪರಿವರ್ತನೆಯ ಪ್ರಕ್ರಿಯೆ : ಒಂದು ಅಧ್ಯಯನ

(ಕರ್ನಾಟಕದ ಬಂದಿಖಾನೆಗಳನ್ನು ಅನುಲಕ್ಷಿಸಿ)

ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ

ಸಂಶೋಧನೆ

ಎಚ್.ನಾಗವೇಣಿ

ಮಾರ್ಗದರ್ಶನ

ಡಾ. ಹಿ.ಚಿ.ಬೋರಲಿಂಗಯ್ಯ

ಪ್ರಾಧ್ಯಾಪಕರು ಹಾಗೂ ಮುಖ್ಯಸ್ಥರು

ಬುಡಕಟ್ಟು ಅಧ್ಯಯನ ವಿಭಾಗ



ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ - ೫೮೩ ೨೭೬

೨೦೦೨



# ಗ್ರಂಥಾಲಯ ಮತ್ತು ಇತರ ಜ್ಞಾನಸಂವಹನ ಮಾಧ್ಯಮಗಳಿಂದ ಕೈದಿಗಳ ಮನಪರಿವರ್ತನೆಯ ಪ್ರಕ್ರಿಯೆ : ಒಂದು ಅಧ್ಯಯನ

(ಕರ್ನಾಟಕದ ಬಂದಿಖಾನೆಗಳನ್ನು ಅನುಲಕ್ಷಿಸಿ)

ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ


ಸಂಶೋಧನೆ

ಎಚ್.ನಾಗವೇಣಿ

ಮಾರ್ಗದರ್ಶನ

ಡಾ. ಹಿ.ಚಿ.ಬೋರಲಿಂಗಯ್ಯ

ಪ್ರಾಧ್ಯಾಪಕರು ಹಾಗೂ ಮುಖ್ಯಸ್ಥರು

ಬುಡಕಟ್ಟು ಅಧ್ಯಯನ ವಿಭಾಗ



ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ - ೫೮೩ ೨೭೬

೨೦೦೨

# ದೃಢೀಕರಣ ಪತ್ರ

ಶ್ರೀಮತಿ ನಾಗವೇಣಿ ಎಚ್. ಇವರು 'ಗ್ರಂಥಾಲಯ ಮತ್ತು ಇತರ ಜ್ಞಾನಸಂವಹನ ಮಾಧ್ಯಮಗಳಿಂದ ಕೈದಿಗಳ ಮನಪರಿವರ್ತನೆಯ ಪ್ರಕ್ರಿಯೆ : ಒಂದು ಅಧ್ಯಯನ' ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಕನ್ನಡ ವಿಶ್ವವಿದ್ಯಾಲಯ, ಹಂಪಿಯ ವಿಜ್ಞಾನಗಳ ನಿಕಾಯಕ್ಕೆ ಪಿಎಚ್.ಡಿ ಪದವಿಗಾಗಿ ಸಲ್ಲಿಸುತ್ತಿರುವ ಈ ಮಹಾಪ್ರಬಂಧವನ್ನು ಈ ಮೊದಲು ಇವರು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

(ಡಾ. ಹಿ.ಚಿ.ಬೋರಲಿಂಗಯ್ಯ)
ಮಾರ್ಗದರ್ಶಕರು
ಪ್ರಾಧ್ಯಾಪಕರು ಮತ್ತು ಮುಖ್ಯಸ್ಥರು
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬

ದಿನಾಂಕ : ೧೨.೧೧.೨೦೦೨
ಸ್ಥಳ : ವಿದ್ಯಾರಣ್ಯ

# ಪ್ರಮಾಣ ಪತ್ರ

'ಗ್ರಂಥಾಲಯ ಮತ್ತು ಇತರ ಜ್ಞಾನಸಂವಹನ ಮಾಧ್ಯಮಗಳಿಂದ ಕೈದಿಗಳ ಮನಪರಿವರ್ತನೆಯ ಪ್ರಕ್ರಿಯೆ : ಒಂದು ಅಧ್ಯಯನ' ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಡಾ. ಹಿ.ಚಿ.ಬೋರಲಿಂಗಯ್ಯ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಕನ್ನಡ ವಿಶ್ವವಿದ್ಯಾಲಯ, ಹಂಪಿಯ ವಿಜ್ಞಾನಗಳ ನಿಕಾಯಕ್ಕೆ ಪಿಎಚ್.ಡಿ ಪದವಿಗಾಗಿ ಸಲ್ಲಿಸುತ್ತಿರುವ ಈ ಮಹಾಪ್ರಬಂಧವನ್ನು ಮತ್ತು ಇದರ ಯಾವುದೇ ಭಾಗವನ್ನು ಈ ಮೊದಲು ನಾನು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ದಿನಾಂಕ: ೧೨.೧೧.೨೦೦೨

(ಎಚ್.ನಾಗವೇಣಿ)
ಸಹಾಯಕ ಗ್ರಂಥಪಾಲಕಿ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬

# ಕೃತಜ್ಞತೆಗಳು

ಈ ಮಹಾಪ್ರಬಂಧದ ಬರವಣಿಗೆಯ ಸುಸ್ತು ಇಳಿಯುತ್ತಿದ್ದಂತೆ, ನನ್ನಲ್ಲಿನ ಕೃತಜ್ಞತಾ ಭಾರದ ಸುಸ್ತನ್ನೂ ಇಳಿಸಿಕೊಳ್ಳಬೇಕಾಗಿದೆ. ಈ ಅಧ್ಯಯನಕ್ಕೆ ಹಲವು ರೀತಿಯಲ್ಲಿ, ಹಲವು ರೂಪದಲ್ಲಿ ಸಹಕರಿಸಿದ ಸಹೃದಯರನ್ನು ಸ್ಮರಿಸಿಕೊಳ್ಳುವುದು ಸಜ್ಜನಿಕೆಯೆಂದು ಭಾವಿಸಿರುವೆ.

ನನ್ನ ಈ ಅಧ್ಯಯನಕ್ಕೆ ಅವಕಾಶ ಕಲ್ಪಿಸಿಕೊಟ್ಟ ಹಾಗೂ ಸಕಾಲದಲ್ಲಿ ಮಹಾಪ್ರಬಂಧ ಸಲ್ಲಿಸಲು ಸಹಕರಿಸಿದ ಮಾನ್ಯರುಗಳಾದ ಡಾ. ಎಂ.ಎಂ.ಕಲಬುರ್ಗಿ, ವಿಶ್ರಾಂತ ಕುಲಪತಿಗಳು; ಡಾ. ಎಚ್.ಜೆ.ಲಕ್ಕಪ್ಪಗೌಡ, ಕುಲಪತಿಗಳು; ಡಾ. ಕೆ.ವಿ.ನಾರಾಯಣ, ಕುಲಸಚಿವರು; ಡಾ. ಹಿ.ಚಿ.ಬೋರಲಿಂಗಯ್ಯ, ಅಧ್ಯಯನದ ಮಾರ್ಗದರ್ಶಕರು ಮತ್ತು ಪ್ರಾಧ್ಯಾಪಕರು; ಡಾ. ಕರೀಗೌಡ ಬೀಚನಹಳ್ಳಿ, ಅಧ್ಯಯನಾಂಗದ ನಿರ್ದೇಶಕರು ಮತ್ತು ಪ್ರಾಧ್ಯಾಪಕರು; ಪ್ರೊ. ಮಲ್ಲೇಪುರಂ ಜಿ.ವೆಂಕಟೇಶ್, ಪ್ರಾಧ್ಯಾಪಕರು ಇವರನ್ನು ಗೌರವಪೂರ್ವಕವಾಗಿ ಸ್ಮರಿಸಿಕೊಳ್ಳುತ್ತೇನೆ.

ಪ್ರಸ್ತುತ ಅಧ್ಯಯನಕ್ಕೆ ಪೂರಕ ಮಾಹಿತಿಗಳನ್ನು ಒದಗಿಸಿ, ಅಲಕ್ಷಿತ ಹಾಗೂ ಅನೂಹ್ಯವಾದ ಜಗತ್ತೆನಿಸಿರುವ ಬಂದಿಖಾನೆಗಳನ್ನು ನಿರ್ಭೀತಿಯಿಂದ ಪ್ರವೇಶಿಸಿ ಮಾಹಿತಿ ಸಂಗ್ರಹಿಸುವ ಅವಕಾಶಗಳನ್ನೂ ಕಲ್ಪಿಸಿಕೊಟ್ಟ ರಾಜ್ಯ ಬಂದಿಖಾನೆ ಇಲಾಖೆಯ ಮಹಾನಿರೀಕ್ಷಕರುಗಳಾದ ಶ್ರೀ ಎಲ್.ರೇವಣಸಿದ್ಧಯ್ಯ, ಡಾ. ಎಸ್.ಕೃಷ್ಣಮೂರ್ತಿ, ಉಪಮಹಾನಿರೀಕ್ಷಕರಾದ ಶ್ರೀ ಅಬ್ಬಾಯಿ ಹಾಗೂ ಮಹಾನಿರೀಕ್ಷಕರ ಆಪ್ತಸಹಾಯಕಿ ಶ್ರೀಮತಿ ಕಾತ್ಯಾಯಿನಿ ಇವರುಗಳಿಗೆ ಹೃತ್ಪೂರ್ವಕ ಕೃತಜ್ಞತೆಗಳು.

ಅಧ್ಯಯನಕ್ಕೆ ಕೆಲವು ಸಲಹೆ-ಮಾಹಿತಿಗಳನ್ನು ನೀಡಿ ನೆರವಾಗಿರುವ ಪ್ರೊ. ಲಕ್ಷ್ಮಣ್ ತೆಲಗಾವಿ, ಡಾ. ಮಾಧವ ಪೆರಾಜೆ, ಡಾ. ಎಂ.ಚಂದ್ರಪೂಜಾರಿ, ಡಾ. ಸ್ಟ್ಯಾನ್ಲಿ ಮದನ್ ಕುಮಾರ್ ಹಾಗೂ ಶ್ರೀ ಟಿ.ಆರ್.ಚಂದ್ರಶೇಖರ್ ಅವರುಗಳಿಗೆ ಕೃತಜ್ಞತೆಗಳು.

ನನ್ನ ಈ ಅಧ್ಯಯನಕ್ಕೆ ಸಹಕರಿಸಿದ ಸಂಗಾತಿ ಡಾ. ಮನೋಹರ ಜಿ.ವಿ. ಹಾಗೂ ಅಕ್ಷರ ಸಂಯೋಜಿಸಿ ಪ್ರಬಂಧವನ್ನು ಸಕಾಲದಲ್ಲಿ ಒದಗಿಸಿಕೊಟ್ಟ ಶ್ರೀ ಸೋಮನಾಥ ಕುಡಿತಿನಿ ಅವರಿಗೂ ನನ್ನ ಪ್ರೀತಿಯ ಕೃತಜ್ಞತೆಗಳು.

ಎಚ್.ನಾಗವೇಣಿ

ದಿನಾಂಕ :೧೨.೧೧.೨೦೦೨

ಸ್ಥಳ : ವಿದ್ಯಾರಣ್ಯ

# ಪರಿವಿಡಿ




● ಕೇಂದ್ರ ಬಂದಿಖಾನೆ
▲ ಜಿಲ್ಲಾ ಬಂದಿಖಾನೆ
◆ ಜಿಲ್ಲಾ ಕೇಂದ್ರ ಉಪ ಬಂದಿಖಾನೆ
✿ ವಿಶೇಷ ಉಪ ಬಂದಿಖಾನೆ
⌂ ಬಯಲು ಬಂದಿಖಾನೆ
☺ ಬಾಲಾಪರಾಧಿ ಶಾಲೆ
★ ತರುಣ ಬಂದಿಖಾನೆ

೧

# ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪ

## ಪ್ರಸ್ತಾವನೆ

ಮನುಕುಲದಲ್ಲಿ ಅಪರಾಧದ ಪರಿಕಲ್ಪನೆ ಜನ್ಯವಾದದ್ದು ಸಮಾಜ ಎಂಬ ವ್ಯವಸ್ಥೆ ಸ್ಪಷ್ಟಗೊಂಡ ನಂತರ; ಈ ಸಮಾಜಕ್ಕೆ ತನ್ನ ಮೂಲಬಿಂದುವಾದ ಮನುಷ್ಯನ ನಡವಳಿಕೆಯನ್ನು ಸುಧಾರಿಸಿ ಮುನ್ನಡೆಸುವ ಜವಾಬ್ದಾರಿಯಿದೆ. ಅದು ತನ್ನ ಆರೋಗ್ಯಕರ ಸುಸ್ಥಿತಿ ಮತ್ತು ಬೆಳವಣಿಗೆಗಾಗಿ ತಾನು ಕಟ್ಟಿಕೊಂಡಿರುವ ಸಂಸ್ಕೃತಿ - ನೀತಿ - ನಿಯಮ - ನಿಬಂಧನೆ ಹಾಗೂ ಸಾಮಾಜಿಕ, ಸಾಂವಿಧಾನಿಕ ಚೌಕಟ್ಟಿನಲ್ಲೇ ಮನುಷ್ಯನ ನಡವಳಿಕೆಯನ್ನು ನಿಯಂತ್ರಿಸುತ್ತಿತ್ತು. ಸಮಾಜದ ಈ ನೈತಿಕ - ಸಾಂಸ್ಕೃತಿಕ ಸಾಮಾಜಿಕ ಚೌಕಟ್ಟನ್ನು ಉದ್ದೇಶಪೂರ್ವಕವಾಗಿ ಅಥವ ಆಕಸ್ಮಿಕವಾಗಿ ಮೀರಿ ಬದುಕಲು ಹೊರಡುವವ ಅಪರಾಧಿ ಎನಿಸಿಕೊಳ್ಳುತ್ತಿದ್ದ. ಆಗ ಸಮಾಜ ಆ ಅಪರಾಧಿಯನ್ನು ತಾನು ಪಾಲಿಸಿಕೊಂಡು ಬಂದಿರುವ ನ್ಯಾಯತಕ್ಕಡಿಯಲ್ಲಿಟ್ಟು ಶಿಕ್ಷಿಸುತ್ತಿತ್ತು.

ಅಪರಾಧಿಗಳನ್ನು ಕ್ರೂರವಾಗಿ ದಂಡಿಸುತ್ತಿದ್ದ ಕಾಲವೊಂದಿತ್ತು. ಅದು ಧರ್ಮಮೂಲವೇ ನ್ಯಾಯಮೂಲವೆಂದು ನಂಬುತ್ತಿದ್ದ ಕಾಲ. ಭಾರತದಲ್ಲಿಯೂ ವೇದಕಾಲದಿಂದಲೇ ಅನೇಕ ಧರ್ಮಸೂತ್ರಗಳು - ಸ್ಮೃತಿಗಳು ನ್ಯಾಯತತ್ತ್ವಗಳಾಗಿ ರೂಪಗೊಂಡಿದ್ದವು. ಧರ್ಮಜ್ಞ ಸೂತ್ರಕಾರರು ನ್ಯಾಯಾಡಳಿತದಲ್ಲಿ ಮುಖ್ಯ ಪಾತ್ರ ವಹಿಸಿ ಅಪರಾಧಕ್ಕೆ ತಕ್ಕ ಶಿಕ್ಷೆಯನ್ನು ನಿಗದಿಪಡಿಸುತ್ತಿದ್ದರು. ಅಪರಾಧದ ಉದ್ದೇಶ, ಅದರ ತೀವ್ರತೆ, ಸ್ವರೂಪ, ಅಪರಾಧಿಯ ವಯಸ್ಸು, ಲಿಂಗ, ಶಕ್ತಿ, ಸಾಮರ್ಥ್ಯ, ನಡತೆ, ವರ್ಗಕ್ಕನುಗುಣವಾಗಿ ಶಿಕ್ಷೆ ವಿಧಿಸಲಾಗುತ್ತಿತ್ತು. ವಿಧಿಸಲಾಗುತ್ತಿದ್ದ ಶಿಕ್ಷೆಗಳೆಂದರೆ ಸೌಮ್ಯ ಎಚ್ಚರಿಕೆ, ಉಚ್ಚಾಟನೆ / ಧಿಕ್ಕಾರ, ಆರ್ಥಿಕ ದಂಡನೆ ಮತ್ತು ಕ್ರೂರವಾಗಿ ಅಂಗವಿಚ್ಛೇದನೆ ಅಥವ ಮರಣದಂಡನೆ.

ಆದರೆ ಕಾಲ ಬದಲಾಗುತ್ತಿದ್ದಂತೆ ಬದಲಾಗುತ್ತಿರುವ ಸಾಮಾಜಿಕ ಪರಿಸ್ಥಿತಿ, ಮೌಲ್ಯಕ್ಕನುಗುಣವಾಗಿ ಅಪರಾಧ ಮತ್ತು ಶಿಕ್ಷೆಯ ಕಲ್ಪನೆಯಲ್ಲೂ ಮಹತ್ತರ ಬದಲಾವಣೆಗಳಾದವು. ಹದಿನೇಳನೆಯ ಶತಮಾನದಲ್ಲಿ

ಭಾರತಕ್ಕೆ ಆಂಗ್ಲರು ಕಾಲಿಟ್ಟಾಗಿನಿಂದ ನ್ಯಾಯವ್ಯವಸ್ಥೆ ಮತ್ತು ದಂಡನಾ ವ್ಯವಸ್ಥೆಯಲ್ಲಿ ಅನೇಕ ಮಾರ್ಪಾಡುಗಳಾದವು. ಆಂಗ್ಲ ನ್ಯಾಯಾಧೀಶರು ಹಿಂದುಗಳ ನ್ಯಾಯ - ಶಿಕ್ಷೆಗಾಗಿ ಹಿಂದೂ ಧರ್ಮಶಾಸ್ತ್ರ ಪಂಡಿತರ ನೆರವು ಪಡೆದರೆ, ಮಹಮ್ಮದೀಯರ ನ್ಯಾಯ ವಿಚಾರ - ವಿವಾದಗಳನ್ನು ಮೌಲ್ವಿಗಳ ನೆರವಿನಿಂದ ಬಗೆಹರಿಸುತ್ತಿದ್ದರು.

ಮುಂದೆ ಲಾರ್ಡ್ ಮೆಕಾಲೆಯಂತಹ ಕಾನೂನು ತಜ್ಞರು ಇಡೀ ಭಾರತಕ್ಕೆ ಅನ್ವಯಿಸುವ ದಂಡಸಂಹಿತೆ, ದಂಡ ಪ್ರಕ್ರಿಯಾ ಸಂಹಿತೆ, ಸಾಕ್ಷಿ ಅಧಿನಿಯಮ ಸಂಹಿತೆಯನ್ನು ರಚಿಸಿದ ನಂತರ ಭಾರತೀಯ ನ್ಯಾಯ ವ್ಯವಸ್ಥೆಯಲ್ಲಿ ಮೂಲಭೂತ ಕಾನೂನುಗಳು ಜಾರಿಗೆ ಬಂದವು.

ಆಂಗ್ಲರ ಈ ನ್ಯಾಯ ವ್ಯವಸ್ಥೆಯಲ್ಲಿ ಪ್ರಾಚೀನ, ಮಧ್ಯಕಾಲೀನ ಸಮಾಜದಲ್ಲಿದ್ದಂತಹ ಕ್ರೂರ - ಅನಾಗರಿಕವಾದ ಅಂಗವಿಚ್ಛೇದನಾ ಶಿಕ್ಷೆಗೆ ಅವಕಾಶವಿಲ್ಲದಾಗಿ ಕೇವಲ ಆರ್ಥಿಕ ದಂಡನೆ, ಸೆರೆಮನೆವಾಸ, ಮರಣದಂಡನೆಯನ್ನು ಶಿಕ್ಷಾ ವಿಧಾನವಾಗಿ ಜಾರಿಗೆ ತರಲಾಯಿತು. ಆದರೂ ನಾಗರಿಕವೆನಿಸಿದ್ದ ಆಂಗ್ಲರ ಆಡಳಿತದಲ್ಲೂ ಘೋರಾಪರಾಧಿಗಳಿಗೆ ಹಾಗೂ ಶಿಕ್ಷೆಯನ್ನು ಪರಿಪಾಲಿಸದವರಿಗೆ ಕಾಲಿಗೆ ಬೇಡಿ, ಕೈಗೆ ಕೋಳ - ಸರಪಳಿ ಬಿಗಿದು, ಗಾಳಿ ಬೆಳಕಿಲ್ಲದ ಗೂಡಿನಂತಹ ಕೋಣೆಗಳಿಗೆ ತಳ್ಳಿ, ದಿನಗಟ್ಟಲೆ ಆಹಾರ ನೀಡದೆ ಹಸಿವಿನಿಂದ ಕಂಗೆಡಿಸಿ ಚಾಟಿ ಏಟು ನೀಡುವ ಶಿಕ್ಷೆ ಪ್ರಚಲಿತದಲ್ಲಿತ್ತು. ಅಂದಿನ ರಾಜಕೀಯ ವ್ಯವಸ್ಥೆಗೆ ಅದು ಅಗತ್ಯ ಮತ್ತು ಅನಿವಾರ್ಯ ಎಂದು ಆಂಗ್ಲ ಆಡಳಿತ ನಂಬಿದ್ದರೂ ಭಾರತೀಯ ರಾಜಕೀಯ ಧುರೀಣರು ಹಾಗೂ ಮಾನವತಾವಾದಿಗಳು ಅದನ್ನು ಪ್ರಬಲವಾಗಿ ವಿರೋಧಿಸಿದ್ದರು. ಕಾಲ ಉರುಳುತ್ತಿದ್ದಂತೆ ಈ ಶಿಕ್ಷೆಯಲ್ಲಿ ಬದಲಾವಣೆಯಾಗದಿದ್ದರೂ ಸಾಮಾಜಿಕ ಪರಿಸ್ಥಿತಿಯಲ್ಲಿ ಸಾಕಷ್ಟು ಬದಲಾವಣೆಗಳಾದವು. ಅಪರಾಧ ಹುಟ್ಟುವ ದಾರಿ, ಅದನ್ನು ನೋಡುವ ದೃಷ್ಟಿಕೋನವೂ ಬದಲಾಯಿತು. ಪ್ರಸ್ತುತ ಸಾಮಾಜಿಕ ಪರಿಸ್ಥಿತಿಯಲ್ಲಿ, ಸಮಾಜದಲ್ಲಿನ ಆರ್ಥಿಕ - ಸಾಮಾಜಿಕ ಅಸಮಾನತೆ, ಅನಕ್ಷರತೆ, ಜನಸಂಖ್ಯಾಸ್ಫೋಟ, ನಿರುದ್ಯೋಗ, ಬಡತನ, ಸೀಮಿತ ಅವಕಾಶಕ್ಕಾಗಿ ಪೈಪೋಟಿ, ತಪ್ಪುತ್ತಿರುವ ತಾಳ್ಮೆ, ಹೆಚ್ಚುತ್ತಿರುವ ಒತ್ತಡ, ನೈತಿಕ ಗುಣಮಟ್ಟದ ಇಳಿತ, ಕ್ಷೀಣಗೊಳ್ಳುತ್ತಿರುವ ಮನುಷ್ಯ ಸಂಬಂಧ ಹಾಗೂ ಸಾಮರಸ್ಯ, ಪರಸ್ಪರ ನಂಬಿಕೆಗಳ ಕೊರತೆ, ಅಪರಾಧ ತಡೆಯುವಲ್ಲಿ ಹಾಗೂ ಅಪರಾಧಿ ಮನಸ್ಸುಗಳಿಗೆ ಸೂಕ್ತ ಮಾರ್ಗದರ್ಶನ - ಚಿಕಿತ್ಸೆ ನೀಡುವಲ್ಲಿ ಸಮುದಾಯದ ಅನಾಸಕ್ತಿ, ತಮ್ಮ ಉಳಿವಿಗಾಗಿ ಆರೋಗ್ಯಪೂರ್ಣ ದಾರಿಯ ಬದಲು ಅಡ್ಡದಾರಿಯ ಆಯ್ಕೆ - ಇವೆಲ್ಲವೂ ಅಪರಾಧಿಯ ಸೃಷ್ಟಿಗೆ ಕಾರಣವಾಗಿದೆ.

ಈ ಸಮಾಜವಂತೂ ಚಲನಾತ್ಮಕ ಹಾಗೂ ನಿತ್ಯಪರಿವರ್ತನಶೀಲವಾದುದು. ಎಂದಿಗೆ ಮಾನವತಾವಾದ ವೆಂಬುದು ಈ ಸಮಾಜದೊಳಗೆ ನುಸುಳಿತೋ ಅಂದಿನಿಂದಲೇ ಅಪರಾಧಿಯಲ್ಲೂ ಮಾನವೀಯತೆಯ ಮೂಲದ್ರವ್ಯವಿದೆ; ಆತನನ್ನು ಬದಲಾಯಿಸಿ, ಮನಪರಿವರ್ತಿಸಿ, ಸಮಾಜದ ಮುಖ್ಯವಾಹಿನಿಗೆ ಸೇರಿಸುವ ಅಗತ್ಯವಿದೆ ಎಂದು ಮಾನವತಾವಾದಿಗಳು ತಮ್ಮ ವಾದ ಮಂಡಿಸುತ್ತಿದ್ದಂತೆ, ಬಂದಿಖಾನೆಗಳಲ್ಲಿ ಸುಧಾರಣೆಯ ಗಾಳಿ ಭಾರೀ ರಭಸದಿಂದ ಬೀಸತೊಡಗಿತ್ತು. ಭಾರತಕ್ಕೆ ಈ 'ಸುಧಾರಣಾ ಗಾಳಿ' ಮೊಟ್ಟ ಮೊದಲಿಗೆ ಬೀಸಿ ಬಂದದ್ದು, ಸರಕಾರದ ಆಡಳಿತದಲ್ಲಿ. ಕಂಪನಿ ಸರಕಾರವು ತಾಯ್ನಾಡು ಇಂಗ್ಲೆಂಡಿನಿಂದ ಬೀಸಿ ಬಂದ ಈ ಬಂದಿಖಾನೆ ಸುಧಾರಣಾ

ಅಲೆಯನ್ನು ದೂರಕ್ಕತ್ತ ತಳ್ಳಿ ಬಿಡಲಿಲ್ಲ. ತಮ್ಮ ತಾಯ್ನಾಡಿನಲ್ಲಿ ಆಂಗ್ಲರ ದುರಾಡಳಿತವೇಕೆಂಬ - ಅಸಹನೆಯಿಂದ, ಆಗ ತಾನೆ ದೇಶದೆಲ್ಲೆಡೆ ಹುಟ್ಟಿಕೊಂಡ ಸ್ವಾತಂತ್ರ್ಯ ಹೋರಾಟದ ಕಿಚ್ಚು ಈ ಸುಧಾರಣಾ ಗಾಳಿಯಿಂದ ನಂದಲೂಬಹುದು ಎಂಬ ದೂರದಾಸೆಯಿಂದ, ೧೮೩೬ ರಲ್ಲೇ ಗವರ್ನರ್ ಜನರಲ್ ಲಾರ್ಡ್ ವಿಲಿಯಂ ಬೆಂಟಿಂಕನು, ಲಾರ್ಡ್ ಮೆಕಾಲೆಯ ಸಲಹೆಯ ಮೇರೆಗೆ ಬಂದಿಖಾನೆ ಆಡಳಿತ ಸುಧಾರಣಾ ಸಮಿತಿಯೊಂದನ್ನು ನೇಮಿಸಿದ್ದ. ಮುಂದೆ ಕ್ವಿಟ್ ಇಂಡಿಯಾ ಚಳುವಳಿಯವರೆಗೂ ಬ್ರಿಟಿಷ್ ಸರಕಾರ ಬಂದಿಖಾನೆಗಳ ಆಡಳಿತ ಸುಧಾರಣೆ, ಕೈದಿ ಸುಧಾರಣೆ - ಶಿಸ್ತು ಪರಿಪಾಲನೆಗೆಂದು ಹಲವು ಸಮಿತಿ, ಆಯೋಗಗಳನ್ನು ನೇಮಿಸಿ ಬಂದಿಖಾನೆ ಆಡಳಿತ ತಜ್ಞರ ಸಮಾವೇಶವನ್ನೂ ಸಂಘಟಿಸಿತ್ತು.

ಆದರೂ ಭಾರತೀಯ ರಾಜಕೀಯ ಧುರೀಣರು ಹಾಗೂ ಮಾನವತಾವಾದಿಗಳು ನಿರೀಕ್ಷಿಸಿದಷ್ಟು ಮಟ್ಟದಲ್ಲಿ ಬಂದಿಖಾನೆಗಳಲ್ಲಿ ಕೈದಿಗಳ ಸುಧಾರಣೆ ಕಾಣದಾದಾಗ ಬ್ರಿಟಿಷ್ ಸರಕಾರ ಅವರಿಂದ ಅನೇಕ ರೀತಿಯ ವಿರೋಧ, ಒತ್ತಡಗಳನ್ನು ಎದುರಿಸಬೇಕಾಯಿತು. ಬರಿ ಬಂದಿಖಾನೆಗಳ ಸುಧಾರಣೆಯಾದರೆ ಸಾಕೆ? ಕೈದಿಗಳಲ್ಲಿ ಇನ್ನಷ್ಟು ಸುಧಾರಣೆ ಬೇಡವೆ? ಎಂಬ ಮೂಲಭೂತ ಪ್ರಶ್ನೆಗಳನ್ನೇ ಹಾಕುತ್ತ, ಬ್ರಿಟಿಷ್ ಸರಕಾರದ ಬಂದಿಖಾನೆಗಳ ಆಡಳಿತ ವೈಖರಿಯನ್ನು ಟೀಕಿಸತೊಡಗಿದಾಗ ಸರಕಾರವೂ ಜಿಜ್ಞಾಸೆಗೊಳಗಾಯಿತು. ಆದರೆ ಅದೇ ಸಮಯದಲ್ಲಿ, ದೇಶದಲ್ಲಿ ಸ್ವಾತಂತ್ರ್ಯ ಹೋರಾಟದ ಜ್ವಾಲೆ ಒಂದೇ ಸಮನೆ ಏರತೊಡಗಿದಾಗ ಕುಪಿತಗೊಂಡ ಬ್ರಿಟಿಷ್ ಸರಕಾರ ಭಾರತೀಯ ಕೈದಿಗಳಿರುವ ಬಂದಿಖಾನೆಗಳನ್ನು ಸುಧಾರಿಸಿ ಫಲವೇನು - ತಾನು ಸ್ವಾತಂತ್ರ್ಯ ಹೋರಾಟವನ್ನು ದಮನಿಸಿದರೆ ಸಾಕೆಂಬ ನಿಲುವಿನಿಂದ, ಬಂದಿಖಾನೆಗಳತ್ತ ನಿರ್ಲಕ್ಷ್ಯ - ನಿರ್ಲಿಪ್ತ ನೀತಿಯನ್ನು ಅನುಸರಿಸಿತು. ರಾಜಕೀಯ ಕೈದಿಗಳಾಗಿ ಬಂದಿಖಾನೆಗಳಲ್ಲಿದ್ದು ಕತ್ತಲ ಲೋಕದ ಭೀಕರತೆಯನ್ನು, ಅಲ್ಲಿನ 'ಸತ್ಯ'ಗಳನ್ನು ಕಣ್ಣಾರೆ ಕಂಡಂತಹ ರಾಷ್ಟ್ರನಾಯಕರು ಇದರಿಂದ ವ್ಯಗ್ರಗೊಂಡು, ಮಾನವತೆಯರಳದ ಬಂದಿಖಾನೆಗಳೊಳಗಿನ ದಾರುಣತೆ ಮತ್ತು ಕೈದಿಗಳ ಹೀನಸ್ಥಿತಿಯ ಬಗ್ಗೆ ಬರೆದ ಪ್ರತಿಭಟನಾ ಬರಹಗಳು ಮಾಧ್ಯಮದ ಮೂಲಕ, ಚಳವಳಿಗಳ ಮೂಲಕ ಬ್ರಿಟಿಷ್ ಸರಕಾರವನ್ನು ಎಚ್ಚರಿಸಿದೊಡನೆ ಸರಕಾರ ಮಣಿಯತೊಡಗಿತು. ಕೈದಿಗಳ ಸುಧಾರಣೆ ಹಾಗೂ ಶಿಕ್ಷೆಯ ಉದ್ದೇಶದ ಸಫಲತೆಗಾಗಿ ಕೈದಿಗಳ ಮನಪರಿವರ್ತನಾ ಪ್ರಕ್ರಿಯೆಯನ್ನು ಕೈಗೊಳ್ಳಲು ಪ್ರಾಂತೀಯ ಸರಕಾರಗಳಿಗೆ ಆದೇಶ ನೀಡಿ, ಹಿಂದಿನ ಬಂದಿಖಾನೆ ಸುಧಾರಣಾ ಸಮಿತಿಗಳ ಅನೇಕ ಶಿಫಾರಸ್ಸುಗಳನ್ನು ಚಾಲನೆಗೆ ತರಬೇಕೆನ್ನುವಷ್ಟರಲ್ಲಿ ಭಾರತೀಯರಿಗೆ ಸ್ವಾತಂತ್ರ್ಯ ಬಂದಾಗಿತ್ತು.

ಭಾರತೀಯರ ಕೈಗೆ ದೇಶದ ಆಡಳಿತದ ಚುಕ್ಕಾಣಿ ಬಂದೊಡನೆ ಬಂದಿಖಾನೆಗಳ ಅಧ್ಯಯನ ಸುಧಾರಣೆ ಹಾಗೂ ಕೈದಿಗಳ ಸುಧಾರಣೆಗಾಗಿ ಸಮಿತಿ - ಆಯೋಗಗಳು ರಚನೆಗೊಂಡವು. ಅವು ಕೈಗೊಂಡ ಅಧ್ಯಯನದ ಪ್ರಮುಖ ಗುರಿ - ಉದ್ದೇಶ ಈ ಎರಡು ಮೂಲಭೂತ ವಿಚಾರಗಳ ಬಗ್ಗೆ ಕೇಂದ್ರೀಕೃತಗೊಂಡಿತ್ತು.

೧. ಶಿಕ್ಷೆ ನೀಡುವುದರ ಉದ್ದೇಶ

೨. ಆ ಉದ್ದೇಶವನ್ನು ಸಾಧಿಸಲು ಮಾಡಬೇಕಾದ ಬದಲಾವಣೆಗಳು ಏನು? ಹೇಗೆ?

ಶಿಕ್ಷೆಯ ಸಿದ್ಧಾಂತಗಳಡಿ ನಿಂತು ಚರ್ಚಿಸುವುದಾದರೆ ಶಿಕ್ಷೆ ವಿಧಿಸುವುದು - ಸೇಡಿಗಾಗಿ, ಪ್ರತೀಕಾರವಾಗಿ,

ಪಶ್ಚಾತ್ತಾಪ ಪಡುವುದಕ್ಕಾಗಿ, ಭಯ ಹುಟ್ಟಿಸುವುದಕ್ಕಾಗಿ, ಸುಧಾರಣೆಗಾಗಿ ಎಂದು ಹೇಳಬಹುದು. ಆದರೆ ಮನಶ್ಶಾಸ್ತ್ರೀಯವಾಗಿ, ಸಮಾಜಶಾಸ್ತ್ರೀಯವಾಗಿ 'ಶಿಕ್ಷೆ'ಯನ್ನು ವಿಶ್ಲೇಷಿಸಿದರೆ ಶಿಕ್ಷೆ ವಿಧಿಸುವುದು ಕೈದಿಯ ಮನಸುಧಾರಣೆಗಾಗಿ ಎಂಬುದನ್ನು ಒಪ್ಪಬೇಕಾಗುತ್ತದೆ.

ನಮ್ಮ ನ್ಯಾಯಾಂಗವೂ, ಶಿಕ್ಷೆ ವಿಧಿಸುವುದರ ಮೂಲಕ ಪ್ರತಿ ನಾಗರಿಕನಿಗೂ ಸಮಾಜದಲ್ಲಿ ಅತ್ಯಂತ ಹೆಚ್ಚಿನ ಭದ್ರತೆಯನ್ನು ನೀಡಬಹುದು, ಹಾಗೂ ಆ ಮೂಲಕ ಪ್ರತಿಯೊಬ್ಬ ನಾಗರಿಕನೂ ಯಾವುದೇ ಅಡೆ ತಡೆಯಿಲ್ಲದೆ ತನ್ನ ಹಕ್ಕನ್ನು ಅನುಭವಿಸುತ್ತಾ ಕಾನೂನಿನ ಇರುವಿಕೆ, ಅದರ ಅವಶ್ಯಕತೆಯನ್ನು ಮನಗಾಣುತ್ತಾ ಕಾನೂನು ಪರಿಪಾಲನಾ ಮನಸ್ಸನ್ನು ಬೆಳೆಸಿಕೊಳ್ಳುತ್ತಾನೆ - ಎಂದು ಭಾವಿಸುತ್ತದೆ. ಆದರೆ ಒಬ್ಬ ಸುಧಾರಕ, ಮಾನವತಾವಾದವನ್ನು ಗೌರವಿಸುವಾತ, ಶಿಕ್ಷೆಯನ್ನು 'ಕೈದಿಯ ಮನಪರಿವರ್ತನೆ'ಯ ಉದ್ದೇಶವುಳ್ಳದ್ದು ಎಂದು ಭಾವಿಸುತ್ತಾನೆ. ಅದು ಶಿಕ್ಷೆಯ ಒಂದು ನಿಜವಾದ ಉದ್ದೇಶವೂ ಹೌದು.

ಸ್ವಾತಂತ್ರ್ಯಾನಂತರ ನೇಮಕಗೊಂಡ ಬಂದಿಖಾನೆ ಆಡಳಿತ ಸುಧಾರಣಾ ಆಯೋಗ ಮತ್ತು ಸಮಿತಿಗಳೆಲ್ಲವೂ ಶಿಕ್ಷೆಯ ಮೂಲ ಉದ್ದೇಶ ಮತ್ತು ಅದನ್ನು ಸಾಧಿಸಲು ಬಂದಿಖಾನೆಗಳನ್ನು ಸುಧಾರಣಾ ತಾಣಗಳಾಗಿ ಮಾರ್ಪಡಿಸುವ ಅಗತ್ಯದ ಬಗ್ಗೆಯೇ ಸುದೀರ್ಘ ಅಧ್ಯಯನ ನಡೆಸಿ, ಸರಕಾರಕ್ಕೆ ಒಪ್ಪಿಸಿದ ವರದಿಗಳೆಲ್ಲವೂ ಭಾಗಃಶ ಕೈದಿಗಳ ಮೇಲೆಯೇ ಕೇಂದ್ರೀಕೃತಗೊಂಡ ವರದಿಗಳಾಗಿದ್ದವು. ಕೈದಿಗಳ ಮನಪರಿವರ್ತನೆಯನ್ನೇ ಮೂಲವಾಗಿಟ್ಟುಕೊಂಡು, ಬಂದಿಖಾನೆ ಆಡಳಿತದ ಸಿಬ್ಬಂದಿಗಳಿಗೂ ಕೈದಿಗಳನ್ನು ಪರಿಣಾಮಕಾರಿಯಾಗಿ ತಿದ್ದುವ ಕಾರ್ಯಗಳ ಬಗ್ಗೆ ತಜ್ಞರಿಂದ ತರಬೇತಿ ಕೊಡಿಸಿ, ಅವರಲ್ಲಿ ಕರ್ತವ್ಯಪರತೆ, ಪ್ರಾಮಾಣಿಕತೆ, ಶಿಸ್ತನ್ನು ಬೆಳೆಸಬೇಕೆಂದು ಸಮಿತಿಗಳು ಶಿಫಾರಸ್ಸು ಮಾಡಿದವು. ಕೈದಿಗಳ ಮನಪರಿವರ್ತನೆಗೆ ಜ್ಞಾನ ಸಂವಹಿಸುವ ಅವಶ್ಯಕತೆಯಿದೆ ಎಂದು ಮನಗಂಡ ಸಮಿತಿಗಳು, ಬಂದಿಖಾನೆಯೊಳಗೆ ವ್ಯವಸ್ಥಿತ ಗ್ರಂಥಾಲಯ ಹಾಗೂ ಪರಿಣಾಮಕಾರಿಯಾದ ಇತರ ಜ್ಞಾನ ಸಂವಹನ ಮಾಧ್ಯಮಗಳನ್ನು ಪರಿಚಯಿಸಲೇಬೇಕೆಂದು ಶಿಫಾರಸು ಮಾಡಿದವು. ಹಾಗೆಯೇ ಒಂದು ನಿರ್ದಿಷ್ಟ ಉದ್ದೇಶದಿಂದಲೇ ಕೈದಿಗಳಿಗೆ ಸಾಂಪ್ರದಾಯಿಕ ಶಿಕ್ಷಣ, ಧಾರ್ಮಿಕ - ನೈತಿಕ ಶಿಕ್ಷಣ, ಸಾಂಸ್ಕೃತಿಕ ಶಿಕ್ಷಣ, ವೃತ್ತಿ ಶಿಕ್ಷಣ ತರಬೇತಿ ಜತೆಗೆ ಆ ವೃತ್ತಿಶಿಕ್ಷಣ ಸಂಬಂಧಿತ ಉದ್ಯೋಗವನ್ನು ಒದಗಿಸತಕ್ಕದ್ದು ಎಂದು ಸಲಹೆ ನೀಡಿದವು. ಆಧುನಿಕ ಸಮಾಜಕ್ಕೆ ತಕ್ಕಂತೆ ಹೊಸ ಹೊಸ ಉದ್ಯಮಗಳನ್ನು ಆರಂಭಿಸಿ, ಅಲ್ಲಿ ವಿಪುಲ ಉದ್ಯೋಗವಕಾಶಗಳನ್ನು ಕಲ್ಪಿಸಿ ಕೈದಿಗಳ ಬಿಡುಗಡೆಯ ನಂತರ ಅವರಿಗೆ ಬದುಕುವ ದಾರಿ ಸುಗಮವಾಗುವಂತೆ ಎಚ್ಚರಿಕೆ ವಹಿಸಬೇಕೆಂದು ಎಲ್ಲಾ ಸಮಿತಿಗಳು ವರದಿಯಲ್ಲಿ ಸ್ಪಷ್ಟಪಡಿಸಿದ್ದವು.

ಆಧುನಿಕ ಸಮಾಜಕ್ಕೆ ತಕ್ಕಂತೆ, ಕೈದಿಗಳ ಚಿಂತನೆ, ಆಲೋಚನೆ, ಬದುಕುವ ದಾರಿಯನ್ನು ಆಧುನೀಕರಣ ಗೊಳಿಸಿ, ಬಿಡುಗಡೆಯ ನಂತರದಲ್ಲಿ ಅವರು ಸಮಾಜಕ್ಕೆ ಮತ್ತು ಹೊಸ ಬದುಕಿಗೆ ಹೊಂದಿಕೊಳ್ಳುವಂತೆ ಅವರ ವ್ಯಕ್ತಿತ್ವವನ್ನು ರೂಪಿಸುವ ಹಾಗೂ ಪರಿವರ್ತಿಸುವ ಅಗತ್ಯವಿದೆ. ಈ ಕಾರ್ಯಕ್ಕಾಗಿ ಈಗಾಗಲೇ ಬಂದಿಖಾನೆಯೊಳಗೆ ಲಭ್ಯವಿರುವ ಜ್ಞಾನಸಂವಹನಾ ಮಾಧ್ಯಮಗಳನ್ನು ಮತ್ತಷ್ಟು ಆಧುನೀಕರಣಗೊಳಿಸುವುದರ ಜೊತೆಗೆ, ಆಧುನಿಕ ಸಮಾಜಕ್ಕೆ ತಕ್ಕಂತೆ ಹೊಸ ಜ್ಞಾನ ಸಂವಹನಾ ಮಾಧ್ಯಮಗಳನ್ನು ಬಂದಿಖಾನೆಯೊಳಗೆ ತರುವುದು ಹಾಗೂ ಕೈದಿಗಳಿಗೆ

ಅವು ಪರಿಣಾಮಕಾರಿಯಾಗಿ ತಲಪುವ ಹಾಗೆ ಎಲ್ಲ ವ್ಯವಸ್ಥೆಯನ್ನು ಮಾಡತಕ್ಕದು ಎಂದೂ ಸಮಿತಿಗಳು ಶಿಫಾರಸ್ಸು ಮಾಡಿರುವ ಹಿನ್ನೆಲೆಯಲ್ಲಿ, ಕೇಂದ್ರ ಸರಕಾರ ಎಲ್ಲ ರಾಜ್ಯಗಳಿಗೂ - ಬಂದಿಖಾನೆ ಸುಧಾರಣೆಯನ್ನು ಕೈದಿ ಪರಿವರ್ತನೆಯ ದೃಷ್ಟಿಕೋನವನ್ನಿಟ್ಟು ಆರಂಭಿಸಬೇಕು ಹಾಗೂ ತಕ್ಷಣವೆ ಮನಪರಿವರ್ತನಾ ಪ್ರಕ್ರಿಯೆಗೆ ಚಾಲನೆ ನೀಡಬೇಕೆಂದು ಆದೇಶಿಸಿತ್ತು. ಈ ನಿಟ್ಟಿನಲ್ಲಿ ರಾಜ್ಯ ಸರಕಾರಗಳ ನಿಲುವನ್ನು ಮತ್ತು ಕಾರ್ಯವೈಖರಿಯನ್ನು ಸೂಕ್ಷ್ಮವಾಗಿ ಅವಲೋಕಿಸುತ್ತಿದ್ದ ಕೇಂದ್ರ ಸರಕಾರ, ತನ್ನ ಮಧ್ಯಸ್ಥಿಕೆ ಹಾಗೂ ನೇರ ಪಾತ್ರ ಇಲ್ಲದಿದ್ದಲ್ಲಿ, ಸಮಿತಿಗಳ ಶಿಫಾರಸ್ಸುಗಳು ರಾಜ್ಯಗಳಲ್ಲಿ ಯಾವ ರೀತಿಯಲ್ಲೂ ಚಾಲನೆಗೆ ಬರಲಾರದು ಎಂದು ಯೋಚಿಸಿ ಬಂದಿಖಾನೆಗಳ ಸುಧಾರಣೆ ವಿಷಯವನ್ನು ತನ್ನ ಯೋಜನಾ ವಲಯದಲ್ಲಿ ಸೇರಿಸಿತು. ಪಂಚವಾರ್ಷಿಕ ಯೋಜನೆಯಡಿ 'ಬಂದಿಖಾನೆ ಆಡಳಿತ ಆಧುನೀಕರಣ' ಯೋಜನೆಯಲ್ಲಿ ತನ್ನ ಷರತ್ತಿನ ಮೇರೆಗೆ ಧನ ಸಹಾಯವನ್ನು ನೀಡತೊಡಗಿತು ಮತ್ತು ಪ್ರತಿಯೊಂದು ವಿವರವನ್ನು ನಿಯಮಿತವಾಗಿ ಪಡೆದುಕೊಳ್ಳತೊಡಗಿತು.

ಕೇಂದ್ರ ಸರಕಾರದ ಆಸಕ್ತಿ ಮತ್ತು ಆದೇಶ, ಹಾಗೂ ಬಂದಿಖಾನೆ ಸುಧಾರಣಾ ಸಮಿತಿಗಳ ಕೆಲವು ಅಮೂಲ್ಯ ಶಿಫಾರಸುಗಳನ್ನು ಜಾರಿಗೆ ತರಬೇಕೆಂಬ ಉದ್ದೇಶದಿಂದ ಕರ್ನಾಟಕ ಸರಕಾರವೂ ತನ್ನ ಬಂದಿಖಾನೆಗಳಲ್ಲಿ ಕೈದಿಗಳ ಮನಪರಿವರ್ತನಾ ಪ್ರಕ್ರಿಯೆಗೆ ಚಾಲನೆ ನೀಡಿದೆ; ಕೈದಿಗಳಿಗೆ ಹಲವು ಜ್ಞಾನ ಸಂವಹನಾ ಮಾಧ್ಯಮಗಳನ್ನು ಬಂದಿಖಾನೆಯೊಳಗೆ ಪರಿಚಯಿಸುತ್ತಿದೆ. ಇದನ್ನೇ ಈ ಅಧ್ಯಯನದ ವಸ್ತುವನ್ನಾಗಿ ಆಯ್ಕೆ ಮಾಡಿಕೊಳ್ಳಲಾಗಿದೆ.

## ಅಧ್ಯಯನದ ಉದ್ದೇಶ

ಮನುಷ್ಯ ಹುಟ್ಟು ಸಾವಿನ ಅನಿವಾರ್ಯತೆಗಳ ಏಳು ಬೀಳುಗಳ ಬಂದಿ. ಆತನ ಬದುಕು ಸಮಾಜದಲ್ಲಿ ಸರಾಗವಾಗಿ ಸರಿದರೆ ಸರಿ. ಆದರೆ ಆಕಸ್ಮಿಕವೋ... ಅನಿವಾರ್ಯವೋ... ಉದ್ದೇಶಿತವಾಗಿಯೋ... ದ್ರೋಹಿಯಾಗಿ, ಕ್ರೋಧಿಯಾಗಿ ಅಪರಾಧಿಯಾಗಿಯೂ ರೂಪಾಂತರಗೊಳ್ಳಬಹುದು. ಅಂದಿನಿಂದಲೆ ಆತನ ಅಧಃಪತನ ಆರಂಭಗೊಳ್ಳುತ್ತದೆ. ಶಿಕ್ಷೆಗೆಂದು ಹೊಕ್ಕ ಬಂದಿಖಾನೆಯ ಕತ್ತಲಲ್ಲಿ ಆತನ ವ್ಯಕ್ತಿತ್ವವನ್ನು ಬೆಳಗುವ, ಆತನಿಗೆ ಸರಿದಾರಿಯನ್ನು ತೋರುವ ಮಾನವತೆಯ ದಾರಿದೀಪವೇ ಇಲ್ಲವಾಗುತ್ತದೆ.

ಕರ್ನಾಟಕದ ಬಂದಿಖಾನೆಗಳಲ್ಲಿರುವ ಕೈದಿಗಳಲ್ಲಿ ಬಹಳಷ್ಟು ಮಂದಿ ಅಪರಾಧದ ಮನೋಭಾವವಿಲ್ಲದೆ, ಕ್ಷಣಿಕ ಭಾವೋದ್ವೇಗದಿಂದ ದುಡುಕಿದ ಫಲವಾಗಿ ಅಥವ ಬದುಕಿನ ಅನಿವಾರ್ಯತೆಗೆ ಸಿಲುಕಿ ಅಥವ ಸೂಕ್ತ ಮಾರ್ಗದರ್ಶನದ ಕೊರತೆಯಿಂದ ಸಂದರ್ಭದ ಆಮಿಷಕ್ಕೆ ಬಲಿಯಾಗಿ ಅಪರಾಧದ ಪಟ್ಟವೇರಿದವರು. ಬಂದಿಖಾನೆಗಳ ನಾಲ್ಕು ಗೋಡೆಗಳ ನಡುವಿನ ಕ್ರೂರ ಒಂಟಿತನದಲ್ಲಿ ಅವರ ಭವಿಷ್ಯದ ಬದುಕಿನ ಕನಸು ಮುದುಡುತ್ತದೆ. ದೀರ್ಘಕಾಲದ ಸೆರೆವಾಸದಿಂದ ಹೊರಬಂದಾಗ ಹೊಸ ಸಂದರ್ಭಕ್ಕೆ ಹೊಂದಿಕೊಂಡು ಹೊಸ ಬದುಕು ಆರಂಭಿಸಲು ಸ್ಥೈರ್ಯವಿಲ್ಲದಿರಬಹುದು. ಉದ್ಯೋಗದ ಸಮಸ್ಯೆಯೂ ಎದುರಾಗಬಹುದು. ಸುದೀರ್ಘ ಕೈದಿ ಜೀವನದ ಫಲವಾಗಿ ಸಮಾಜ ಮತ್ತು ಕುಟುಂಬದ ನಡುವಿನ ಸಲುಗೆ, ಸ್ನೇಹ, ಬಾಂಧವ್ಯದಲ್ಲೂ ವ್ಯತ್ಯಯ ಅಂತರ ಸೃಷ್ಟಿಯಾಗಬಹುದು. ಹಿಂದೆ ತಾನು ಅಪರಾಧ ಎಸಗಲು ಕಾರಣವಾದ ಸಾಮಾಜಿಕ ಸಮಸ್ಯೆಯೇ ಮತ್ತೆ ಆತನನ್ನು ಕಾಡತೊಡಗಿ ಒತ್ತಡ ತರಬಹುದು, ಹೊಸ ಅಪರಾಧಕ್ಕೆ ಪ್ರೇರೇಪಿಸಬಹುದು. ಈ ಕಾರಣಕ್ಕಾಗಿಯೇ

ಬಿಡುಗಡೆಯ ನಂತರದ ಸಮಸ್ಯೆಗಳನ್ನು ಎದುರಿಸುವಂತಹ ಆತ್ಮಸ್ಥೈರ್ಯವನ್ನು ತುಂಬಲು, ಜಗತ್ತೆಂದರೆ ಏನು - ಅದೆಷ್ಟು ಬದಲಾಗಿದೆ - ಅಲ್ಲಿ ಬದುಕುವ ಪರಿ ಹೇಗೆ - ಎಂಬ ಪ್ರಾಪಂಚಿಕ ಜ್ಞಾನವನ್ನು ತರುವಂತಾ ಜ್ಞಾನ ಧಾರೆಯನ್ನು ಕೈದಿಯತ್ತ ಹರಿಸುವ ಅವಶ್ಯಕತೆ ಇದೆ.

ಜ್ಞಾನದ ಬೆಳಕು ಹರಿಯದಂತಹ ಬಂದಿಖಾನೆಗಳ ಕತ್ತಲಲ್ಲಿರುವ ಕೈದಿಗಳಲ್ಲಿ ವಿವೇಚನಾ ಶಕ್ತಿ, ಬೌದ್ಧಿಕ ಶಕ್ತಿ, ಯಾವುದೇ ಸಮಸ್ಯೆಯನ್ನು ಹೊಸ ದೃಷ್ಟಿಕೋನದಿಂದ ಬಗೆದು ವಿಶ್ಲೇಷಿಸುವ ಸಾಮರ್ಥ್ಯವನ್ನು ಬೆಳಗಿಸಲು ಜ್ಞಾನಕ್ಕಿಂತ ಪ್ರಬಲ ಶಕ್ತಿ ಬೇರೊಂದಿಲ್ಲ. ಜ್ಞಾನವೇ ಬೆಳಕು. ಅದುವೇ ಸ್ವಾತಂತ್ರ್ಯಕ್ಕೆ ದಾರಿ. ಮೃಗತ್ವದಿಂದ ನರತ್ವಕ್ಕೆ ದಾರಿತೋರುವ ದೀಪವೇ ಜ್ಞಾನ. ಇಂತಹ ಜ್ಞಾನವನ್ನು ಕೈದಿಗಳತ್ತ ಸಂವಹಿಸಿ ಅವರ ಮನಪರಿವರ್ತಿಸುವ ಕಾರ್ಯವನ್ನು ಕೈಗೊಳ್ಳಬೇಕೆಂದು ಸಮಾಜವಾದಿ/ಮಾನವತಾವಾದಿಗಳ ನಿಲುವು. ಬಂದಿಖಾನೆ ಸುಧಾರಣಾ ಸಮಿತಿಗಳೂ ನಮ್ಮ ಬಂದಿಖಾನೆಗಳ ಸ್ಥಿತಿ - ಗತಿಗಳನ್ನು, ಅಲ್ಲಿ ಕೈದಿಗಳು ಬದುಕುತ್ತಿರುವ ಪರಿಸರ - ಅಲ್ಲಿನ ಹೀನ ಪರಿಸ್ಥಿತಿಗಳನ್ನು ಕಂಡು ಮರುಗಿ ಬಂದಿಖಾನೆಗಳ ಸುಧಾರಣೆಯ ಜತೆಗೆ ಕೈದಿ ಪರಿವರ್ತನಾ ಕಾರ್ಯದ ಅಗತ್ಯ, ಅನಿವಾರ್ಯತೆಯ ಬಗ್ಗೆ ಸರಕಾರಕ್ಕೆ ಸಲಹೆಯಲ್ಲದೆ, ದೀರ್ಘಾವಧಿ ಜೀವಾವಧಿ / ಸೆರೆವಾಸದ ಸಜೆಯಲ್ಲಿರುವ ಕೈದಿಗೆ ಈ ಪರಿವರ್ತನಾ ಚಿಕಿತ್ಸೆಯ ಅಗತ್ಯವೆಷ್ಟಿದೆ - ಯಾಕೆ - ಎಂಬುದನ್ನೂ ಸ್ಪಷ್ಟಪಡಿಸಿದೆ.

ಜೀವಾವಧಿ ಶಿಕ್ಷೆಗೊಳಗಾದ ಕೈದಿ ತನ್ನ ಬದುಕಿನ ಅಮೂಲ್ಯ ವರ್ಷಗಳನ್ನು ಸೆರೆಮನೆಯಲ್ಲೇ ಕಳೆದು ಭವಿಷ್ಯದ ಕನಸುಗಳನ್ನು ಅಲ್ಲೇ ಬೂದಿ ಮಾಡಿಕೊಳ್ಳುತ್ತಾ ಆ ಚಿಂತೆಯಲ್ಲೇ ಮಾನಸಿಕ ರೋಗಿಯಾಗುವ ಎಲ್ಲಾ ಸಾಧ್ಯತೆಗಳಿವೆ ಎಂಬ ಆತಂಕವನ್ನೂ ವ್ಯಕ್ತಪಡಿಸಿದೆ. 'ಕೆಲವೇ ಕೆಲವು ದಿನಗಳನ್ನು ಕಳೆಯಲೂ ಬಂದಿಖಾನೆಯಲ್ಲಿ ಸಾಧ್ಯವಿಲ್ಲ, ಇಲ್ಲಿನ ಏಕಾಂತ ಓದು - ಬರಹವನ್ನು ಪ್ರೇರೇಪಿಸಬಹುದೆ ವಿನಾ ಒಳ್ಳೆಯ ಚಿಂತನೆಗಳನ್ನಲ್ಲ.' ಎಂಬುದನ್ನು ಜವಾಹರಲಾಲ್ ನೆಹರೂ ತಮ್ಮ 'ಡಿಸ್ಕವರಿ ಆಫ್ ಇಂಡಿಯಾ' [೧] ಗ್ರಂಥದಲ್ಲಿ ಹೇಳಿಕೊಂಡಿದ್ದಾರೆ.

ಜೀವಾವಧಿ ಕೈದಿಗಳಿಗೆ ಶಿಕ್ಷೆ ವಿಧಿಸಿ ಗಾಳಿ ಬೆಳಕಿರದ ಗೂಡಿನಂತಹ ಕೊಠಡಿಯಲ್ಲಿ ಬಂದಿಸಿಡುವುದನ್ನು ಮಹಾತ್ಮಾಗಾಂಧಿ ಅವರು, ೯.೨.೧೯೨೯ರ 'ಯಂಗ್ ಇಂಡಿಯಾ' ಸಂಚಿಕೆಯಲ್ಲಿ ಈ ರೀತಿ ವರ್ಣಿಸಿದ್ದಾರೆ. 'ಜೀವಾವಧಿ ಕೈದಿಗೆ ಇಲ್ಲಿ ಏಕಾಂತದ ಶಿಕ್ಷೆ (Solitary Confinement) ವಿಧಿಸುವುದು ಎಂದರೆ, ಪೆಟ್ಟಿಗೆಗೆ ಗಾಳಿ ಬೆಳಕಿಗಾಗಿ ಕೆಲವು ತೂತು ಹೊಡೆದು ಅದರಲ್ಲಿ ಕೈದಿಯನ್ನು ತುರುಕಿಸಿಡುವಂಥ ಸ್ಥಿತಿ' [೨] ಎಂದು ಶಿಕ್ಷೆಯ ಭೀಕರತೆಯನನ್ನು ಬಿಡಿಸಿಟ್ಟಿದ್ದಾರೆ.

೧೯೨೨ರ ಮಾರ್ಚ್ ೨೦ ರಿಂದ ಯರವಾಡ ಬಂದಿಖಾನೆಯಲ್ಲಿ ಶಿಕ್ಷೆಗೊಳಗಾಗಿದ್ದ ಗಾಂಧಿಯವರು, ಅಲ್ಲಿ ತಮ್ಮ ಕಠಿಣ ಶಿಕ್ಷೆ ಅನುಭವಿಸುತ್ತ ಅಲ್ಲಿನ ಬಂದಿಖಾನೆ ವ್ಯವಸ್ಥೆಯ ಬಗ್ಗೆ 'ನಮ್ಮ ಜೈಲು ವ್ಯವಸ್ಥೆಯಲ್ಲಿ ಮಾನವೀಯತೆಗೆ ಸ್ಥಳವಿಲ್ಲ ಎಂಬುದು ಸ್ಪಷ್ಟವಾಗುತ್ತದೆ. ಕೈದಿಗಳ ಭೌತಿಕ ಅವಶ್ಯಕತೆಗಳ ಪೂರೈಕೆ ಸಮರ್ಪಕವಾದರೆ ಸಾಕು, ಅವರ ಮಾನವೀಯ ಅವಶ್ಯಕತೆಗಳ ಬಗ್ಗೆ ಇಲ್ಲಿ ಯಾರೂ ಚಿಂತಿಸುವುದಿಲ್ಲ. ಸೆರೆಮನೆಗಳ ನಿಯಮಗಳೇ ಹಾಗೆ.

ಇಲ್ಲಿನ ಯಾವ ಕೈದಿಗಳೂ ನನ್ನಂತೆ ಇಂಥ ಏಕಾಂತ (Solitary Confinement) ಸೆರೆಯಲ್ಲಿರಲು ಬಯಸರು. ಈ ಶಿಕ್ಷೆ ಅಮಾನುಷವಾದುದು. ನಿಜವಾಗಿ ಕೈದಿಗಳಿಗೆ ಅದರ ಅಗತ್ಯವೂ ಇಲ್ಲ. ಈಗ ಇಲ್ಲಿ ಎಲ್ಲ ರೀತಿಯ ಕೈದಿಗಳನ್ನು ಸುಮ್ಮನೆ ಒಟ್ಟು ಸೇರಿಸಿ ಸೆರೆಹಾಕಲಾಗುತ್ತಿದೆ. ಇಲ್ಲಿನ ಮೇಲಾಧಿಕಾರಿ ಎಷ್ಟೇ ಮಾನವೀಯ ದೃಷ್ಟಿ ಉಳ್ಳವನಾದರೂ ಈ ಕೈದಿಗಳನ್ನು ನ್ಯಾಯೋಚಿತವಾಗಿ ನೋಡಿಕೊಳ್ಳುವುದು ಕಷ್ಟಸಾಧ್ಯ. ಆತ ಕೈದಿಗಳ ದೈಹಿಕ ವ್ಯವಸ್ಥೆಯನ್ನಷ್ಟೇ ಮಾಡಿ ಅವರ ಆತ್ಮದ ಅವಶ್ಯಕತೆಗಳನ್ನು ಅಸಡ್ಡೆ ಮಾಡುತ್ತಾನೆ.'[೩] ಎಂದು ಕೈದಿಗಳಿಗೆ ತೀರಾ ಅವಶ್ಯವಿರುವ ಮನಸ್ಸಿನ ಚಿಕಿತ್ಸೆಯ ಬಗ್ಗೆ ಆತಂಕದಿಂದ ಹೇಳುತ್ತಾರೆ.

'ದೀರ್ಘಕಾಲದ ಶಿಕ್ಷೆಗೊಳಗಾಗುವ ಕೈದಿ, ವಿಶಾಲ ಪ್ರಪಂಚದಿಂದ ಬೇರ್ಪಟ್ಟು ಎತ್ತರೆತ್ತರದ ಗೋಡೆ, ಕಬ್ಬಿಣದ ಬಲಾಢ್ಯ ಗೇಟು, ಅಪರಾಧಿ ಲೋಕವೆಂಬ ಶಾಶ್ವತವಾದ ಹಣೆಪಟ್ಟಿ ಬಿಗಿದಿರುವ ದುರಾದೃಷ್ಟವಂತರ ಪುಟ್ಟ ಪ್ರಪಂಚದಲ್ಲಿ - ನಂಬಿಕೆಯಿಲ್ಲದ, ಸಂತೋಷವಿಲ್ಲದ, ಭರವಸೆಯಿಲ್ಲದ ಜೀವನದ ಭೀಕರ ಏಕತಾನತೆಗೆ ಬಲಿಯಾಗಿ ಜಡವಾಗಿ ಹೋಗಿ, ಕೊನೆಯ ಪಕ್ಷ ಆತನ ನೋವಿನ ಧ್ವನಿಯೂ ಹೊರಬರದಂತಾ ಸ್ಥಿತಿಯಲ್ಲಿ ನರಳುತ್ತಿರುತ್ತಾನೆ' ಎಂದು ನೆಹರೂ ಅವರು ತನ್ನ 'ಪ್ರಿಸನ್ ಲ್ಯಾಂಡ್ ' ಎಂಬ ಲೇಖನದಲ್ಲಿ ಹೇಳಿಕೊಂಡಿದ್ದಾರೆ.[೪] ಇಂಥ ಹೀನಾಯ ಪರಿಸ್ಥಿತಿಯಲ್ಲಿರುವ ರೆಕ್ಕೆ ಮುರಿದ ಹಕ್ಕಿಯಂತಿರುವ ಕೈದಿಯನ್ನು ಮನಪರಿವರ್ತನೆಯತ್ತ ಕರೆದೊಯ್ಯದಿದ್ದಲ್ಲಿ ಆತ ಮಾನಸಿಕ ಸ್ಥಿಮಿತ ಕಳೆದುಕೊಂಡು ನಿಜಕ್ಕೂ ಜೀವನವಿಡೀ ಅಪರಾಧಿಯೇ ಆಗಿ ಮಾರ್ಪಡುವುದರಲ್ಲಿ ಆಶ್ಚರ್ಯವಿಲ್ಲ.

ಸರ್ ಅಲೆಕ್ಸಾಂಡರ್ ಪ್ಯಾಟರ್‌ಸನ್ ಅವರು ೧೯೩೦ ರಲ್ಲಿ 'ರಾಯಲ್ ಆಯೋಗ'ದ ಎದುರಲ್ಲಿ ಜೀವಾವಧಿ ಶಿಕ್ಷೆ ಬಗ್ಗೆ ನೀಡಿದ್ದ ತಮ್ಮ ಅನಿಸಿಕೆ ರೂಪದ ವಿವರಣೆ ಜೀವಾವಧಿ ಶಿಕ್ಷೆಯ ಭೀಕರತೆಯನ್ನು ವಿಶದಪಡಿಸುತ್ತದೆ. 'ಯಾವುದೇ ರೀತಿಯ ಶಿಕ್ಷಣದಿಂದಾಗಲಿ ಅಥವ ಮನಸ್ಸನ್ನು ಪ್ರಚೋದಿಸಿ ಚೈತನ್ಯ ನೀಡುವ ಯಾವುದೇ ಕಾರ್ಯಕ್ರಮದಿಂದಾಗಲಿ ಅಥವ ಮನೋವಿಕಾಸ ಮಾಡುವ ಭಾಷಣ - ಬರವಣಿಗೆ - ಕರಕುಶಲ ಕಲೆಯಿಂದಾಗಲಿ ಅಷ್ಟೊಂದು (೨೦ ವರುಷ) ದೀರ್ಘ ಸೆರೆವಾಸ ಅನುಭವಿಸುವ ಜೀವಾವಧಿ ಕೈದಿಯು ತನ್ನ ಮನಸ್ಥಿತಿಯನ್ನು ಹತೋಟಿಯಲ್ಲಿಟ್ಟುಕೊಳ್ಳಲು ಅಥವ ಮಾನಸಿಕ ಸ್ಥಿತಿಯನ್ನು ಕಾಪಾಡಿಕೊಳ್ಳಲು ಖಂಡಿತ ಅಸಾಧ್ಯ. ಹಾಗೇನಾದರೂ ಹತೋಟಿಯಲ್ಲಿಡಲು ಆ ಕೈದಿಗೆ ಸಾಧ್ಯವಾದರೆ ಆತ ಒಬ್ಬ ಅತಿಮಾನವನೇ ಸರಿ. ಒಬ್ಬ ವ್ಯಕ್ತಿಯು ೧೦ ವರುಷಗಳಿಗಿಂತಲೂ ಹೆಚ್ಚು ಕಾಲ ಸೆರೆಯಲ್ಲಿದ್ದು ತನ್ನ ಮನಸ್ಥಿತಿಯನ್ನು ಕಾಪಾಡಿಕೊಳ್ಳುತ್ತಾನೆನ್ನುವ ಬಗ್ಗೆ ನನಗೆ ತೀವ್ರ ಅನುಮಾನವಿದೆ'[೫] ಎಂದು ಪ್ಯಾಟರ್‌ಸನ್ ಜೀವಾವಧಿ ಶಿಕ್ಷೆ ಅನುಭವಿಸುವ ಕೈದಿಯ ಬಗ್ಗೆ ತಮ್ಮ ಮಿಡಿತವನ್ನು ವ್ಯಕ್ತಪಡಿಸಿದ್ದರು.

ಕಳೆದು ಹೋಗುತ್ತಿರುವ ತಮ್ಮ ಅಮೂಲ್ಯ ಭವಿಷ್ಯದ ಬಗ್ಗೆ ಚಿಂತಿಸುವ, ಬರಡು ಬದುಕನ್ನು ದೂಡುವ ಕೈದಿಗಳತ್ತ ಮಾನವತೆಯ ಸಿಂಚನವನ್ನು ಮೊದಲು ಹನಿಸಬೇಕಾದವರು ಅವರ ಸಾಮೀಪ್ಯದಲ್ಲೇ ಇರುವ ಬಂದಿಖಾನೆ ಸಿಬ್ಬಂದಿಗಳು. ಅದು ಅವರ ಕರ್ತವ್ಯವೂ ಹೌದು. ಬಂದಿಖಾನೆ ಸುಧಾರಣಾ ಸಮಿತಿಗಳು ಜ್ಞಾನ ಸಂವಹನ ಮಾಧ್ಯಮಗಳನ್ನು ಬಳಸಿ ಕೈದಿಗಳ ಮನಪರಿವರ್ತನೆಯನ್ನು ಸಾಧಿಸಬೇಕು - ಎಂದು ತಮ್ಮ ವರದಿಗಳಲ್ಲಿ ಶಿಫಾರಸ್ಸು

ಮಾಡಿರುವ ಹಿನ್ನೆಲೆಯಲ್ಲಿ, ರಾಜ್ಯ ಹಾಗೂ ಕೇಂದ್ರ ಸರಕಾರ ಈ ವಿಚಾರದಲ್ಲಿ ತೋರುವ ಅಸ್ಥೆಯಿಂದಾಗಿ ರಾಜ್ಯ ಬಂದಿಖಾನೆ ಇಲಾಖೆ ಸರಕಾರದ ಆದೇಶದಂತೆ ಆ ಕಾರ್ಯದಲ್ಲಿ ಪ್ರವೃತ್ತವಾಗಿದೆ.

ಜ್ಞಾನ ಸಂವಹನ ಮಾಧ್ಯಮಗಳು ಕೈದಿಗಳ ಮನಪರಿವರ್ತನೆಗೆ ಸಹಕರಿಸುವ ದಾರಿಯನ್ನು ಸೂಕ್ಷ್ಮವಾಗಿ ಅವಲೋಕಿಸಿ, ಅಧ್ಯಯನ ಮಾಡುವುದು ಅತ್ಯಂತ ಆಸಕ್ತಿಪೂರ್ಣವಾದುದು. ಪ್ರಸ್ತುತ ಸಾಮಾಜಿಕ ಪರಿಸ್ಥಿತಿಯಲ್ಲಿ ಕೈದಿಗಳ ಮನಪರಿವರ್ತನೆಗೆ ಜ್ಞಾನ ಸಂವಹನ ಮಾಧ್ಯಮಗಳನ್ನು ಬಳಸುತ್ತಿರುವುದು ಪ್ರಜ್ಞಾವಂತ - ಮಾನವೀಯ ವಲಯದಲ್ಲಿ ಬಹುಮುಖ್ಯ ಚರ್ಚೆಯ ವಿಷಯವಾಗಿದ್ದು, ಸಮಾಜವೂ ಈ ಪ್ರಕ್ರಿಯೆಯ ಒಟ್ಟಾರೆ ಫಲಿತವನ್ನು ಕುತೂಹಲದಿಂದ ನಿರೀಕ್ಷಿಸುತ್ತಿರುವ ಸಂದರ್ಭದಲ್ಲಿ ಈ ವಿಷಯವನ್ನು ಅಧ್ಯಯನಕ್ಕೆ ಯೋಗ್ಯವೆಂದು ಪರಿಗಣಿಸಿ ಈ ಕೆಳಗಿನ ಮುಖ್ಯ ಉದ್ದೇಶಗಳನ್ನಿಟ್ಟುಕೊಂಡು ಅಧ್ಯಯನವನ್ನು ಕೈಗೊಳ್ಳಲಾಗಿದೆ.

### ಉದ್ದೇಶಗಳು

೧. ಕೈದಿಗಳತ್ತ ಜ್ಞಾನ ಸಂವಹಿಸುವ ಈ ಪ್ರಕ್ರಿಯೆಯಲ್ಲಿ ಯಾವ ಯಾವ ಜ್ಞಾನ ಸಂವಹನಾ ಮಾಧ್ಯಮಗಳು ಕಾರ್ಯಪ್ರವೃತ್ತವಾಗಿವೆ?

೨. ಈ ಎಲ್ಲ ಜ್ಞಾನಸಂವಹನಾ ಮಾಧ್ಯಮಗಳು ಕೈದಿಗಳತ್ತ ಸಮರ್ಪಕವಾಗಿ ಜ್ಞಾನಸಂವಹಿಸಿ, ಪರಿಣಾಮಕಾರಿಯಾಗಿ ಕಾರ್ಯನಿರ್ವಹಿಸುತ್ತಿವೆ?

೩. ಸಮರ್ಪಕವಾಗಿ ಜ್ಞಾನಸಂವಹನೆಯಾಗದಿದ್ದಲ್ಲಿ ಯಾಕಾಗಿ ಆಗುತ್ತಿಲ್ಲ? ಎಲ್ಲಿ ಅಡೆತಡೆಗಳಿವೆ? ಅವುಗಳನ್ನು ನಿವಾರಿಸಿ - ಸುಧಾರಿಸುವ ಬಗೆ ಹೇಗೆ?

೪. ಈ ಜ್ಞಾನ ಸಂವಹನಾ ಮಾಧ್ಯಮಗಳನ್ನು ಆದುನಿಕ ಸಮಾಜ ಮತ್ತು ಸಮಾಜದ ಬದಲಾಗುತ್ತಿರುವ ಪರಿಸ್ಥಿತಿಗನುಗುಣವಾಗಿ ಮಾರ್ಪಡಿಸಿ ಆಧುನೀಕರಣಗೊಳಿಸ ಲಾಗುತ್ತಿದೆಯೆ?

೫. ಈ ಪ್ರಕ್ರಿಯೆಯಲ್ಲಿ ಸರಕಾರಗಳ (ಕೇಂದ್ರ - ರಾಜ್ಯ) ಕಾಳಜಿ - ಪ್ರೋತ್ಸಾಹ ಎಷ್ಟು? ಹೇಗೆ?

೬. ಈ ಜ್ಞಾನ ಸಂವಹನಾ ಮಾಧ್ಯಮಗಳು ಕೈದಿಗಳ ಮನಪರಿವರ್ತನಾ ಕಾರ್ಯದಲ್ಲಿ ಎಷ್ಟು ಸಫಲತೆ ಗಳಿಸಿಕೊಂಡಿವೆ?

ಈ ಮುಖ್ಯ ಪ್ರಶ್ನೆಗಳನ್ನು ಅಧ್ಯಯನದ ಮುಖ್ಯ ಉದ್ದೇಶಗಳನ್ನಾಗಿಟ್ಟುಕೊಂಡು ಹೊಸ ಸತ್ಯಗಳನ್ನು ಕಂಡುಕೊಳ್ಳುವ ಪ್ರಯತ್ನ ಮಾಡಲಾಗಿದೆ.

### ಅಧ್ಯಯನದ ಸ್ವರೂಪ

ಈ ಅಧ್ಯಯನವು 'ಜ್ಞಾನ ಸಂವಹನೆ' ಮತ್ತು 'ಪರಿವರ್ತನೆ' ಎಂಬ ಎರಡು ಮುಖ್ಯ ವಿಷಯಗಳನ್ನು ಒಳಗೊಂಡಿರುವುದರಿಂದ, ಅಧ್ಯಯನದ ಚೌಕಟ್ಟನ್ನು ಕೇವಲ ಗ್ರಂಥಾಲಯ ಮತ್ತು ಮಾಹಿತಿ ವಿಜ್ಞಾನದ ಶಿಸ್ತಿಗೆ ಅಳವಡಿಸಿಕೊಳ್ಳದೆ, ಸಮಾಜ ವಿಜ್ಞಾನದ ಶಿಸ್ತಿಗೂ ಚೌಕಟ್ಟನ್ನು ವಿಸ್ತರಿಸಿಕೊಳ್ಳಲಾಗಿದೆ. ಇದು ಕ್ಷೇತ್ರ ಕಾರ್ಯವನ್ನು

ಆಧರಿಸಿದ ಎಂಪಿರಿಕಲ್ ಅಧ್ಯಯನವಾಗಿದ್ದು, ಪ್ರಶ್ನಾವಳಿ ಅಂಕಿ ಅಂಶ ಮತ್ತು ಸಂದರ್ಶನ ಮೂಲಕ ಮಾಹಿತಿಗಳನ್ನು ಸಂಗ್ರಹಿಸಲಾಗಿದೆ.

## ವ್ಯಾಪ್ತಿ

ಅಧ್ಯಯನದ ಆರಂಭಿಕ ಹಂತದಲ್ಲಿ ಕರ್ನಾಟಕದ ಎಲ್ಲ ಬಂದಿಖಾನೆಗಳ ಕೈದಿಗಳನ್ನು ಅಧ್ಯಯನದ ವ್ಯಾಪ್ತಿಗೆ ತೆಗೆದುಕೊಳ್ಳಲಾಗಿತ್ತು. ಆದರೆ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಕೈದಿಗಳ ಸಂಖ್ಯೆ ಹತ್ತು ಸಾವಿರಕ್ಕೂ ಮೀರಿದ್ದುದರಿಂದ ಹಾಗೂ ಕೈದಿಗಳ ಮನಪರಿವರ್ತಿಸಬಲ್ಲ ಹೆಚ್ಚಿನ ಜ್ಞಾನ ಸಂವಹನ ಮಾಧ್ಯಮಗಳು, ಜೀವಾವಧಿ ಹಾಗೂ ದೀರ್ಘಾವಧಿ ಕೈದಿಗಳಿರುವ ಕೇಂದ್ರ ಬಂದಿಖಾನೆ, ತರುಣ ಬಂದಿಖಾನೆ ಹಾಗೂ ಬಯಲು ಬಂದಿಖಾನೆಯಲ್ಲಿ ಮಾತ್ರವೇ ಲಭ್ಯ ಎಂಬ ಮಾಹಿತಿಯನ್ನು ರಾಜ್ಯ ಬಂದಿಖಾನೆ ಇಲಾಖೆಯಿಂದ ಪಡೆದ ನಂತರ, ಅಧ್ಯಯನದ ವ್ಯಾಪ್ತಿಯನ್ನು ರಾಜ್ಯದ ಎಲ್ಲ ಕೇಂದ್ರ ಬಂದಿಖಾನೆಗಳಿಗೆ ಮತ್ತು ಬಯಲು ಬಂದಿಖಾನೆಗೆ ಮಾತ್ರವೇ ಸೀಮಿತಗೊಳಿಸಲಾಯಿತು.

ಜೀವಾವಧಿ ಕೈದಿಗಳ ಜತೆಗೆ ೫ ವರ್ಷಕ್ಕೂ ಮೇಲ್ಪಟ್ಟು ಶಿಕ್ಷೆಯಾದ ದೀರ್ಘಾವಧಿ ಕೈದಿಗಳನ್ನು ಅಧ್ಯಯನವ್ಯಾಪ್ತಿಗೆ ತೆಗೆದುಕೊಂಡು, ಪ್ರತಿ ಕೇಂದ್ರ ಬಂದಿಖಾನೆಯಲ್ಲಿ ಐದು ವರ್ಷಕ್ಕೆ ಮೇಲ್ಪಟ್ಟು ಶಿಕ್ಷೆಗೊಳಗಾದ ದೀರ್ಘಾವಧಿ ಕೈದಿಯ ಪಟ್ಟಿಯನ್ನು ಕೋರಿದಾಗ, ಆ ಬಂದಿಖಾನೆಗಳ ಆಡಳಿತ ವರ್ಗ ತೋರಿದ ಅಸೀಮ ನಿರ್ಲಕ್ಷ್ಯ, ಉದಾಸೀನಭಾವ ಹಾಗೂ ಈ ಅಧ್ಯಯನದ ಸೀಮಿತ ಕಾಲಾವಧಿಯಿಂದ ಆ ಕೈದಿಗಳನ್ನೆ ಅಧ್ಯಯನದಿಂದ ಕೈಬಿಟ್ಟು ಕೇವಲ ಜೀವಾವಧಿ ಕೈದಿಗಳನ್ನು ಮಾತ್ರವೇ ಅಧ್ಯಯನದ ವ್ಯಾಪ್ತಿಗೊಳಪಡಿಸಲಾಯಿತು. ರಾಜ್ಯದ ಎಲ್ಲಾ ಆರು ಕೇಂದ್ರ ಬಂದಿಖಾನೆಗಳು ಹಾಗೂ ಒಂದು ಬಯಲು ಬಂದಿಖಾನೆಯಲ್ಲಿರುವ ಜೀವಾವಧಿ ಕೈದಿಗಳಲ್ಲಿ, ರ್‍ಯಾಂಡಮ್ ಪದ್ಧತಿಯನ್ನು ಅನುಸರಿಸಿ ಒಟ್ಟು ಶೇಕಡಾ ೧೦ ರಷ್ಟು ಕೈದಿಗಳನ್ನು, ಸಂದರ್ಶನ - ಪ್ರಶ್ನಾವಳಿಗಾಗಿ ಆಯ್ಕೆ ಮಾಡಲಾಯಿತು.

ಜೀವಾವಧಿ ಶಿಕ್ಷೆಗೊಳಗಾದ ಎಲ್ಲ ಕೈದಿಗಳಿಂದಲೂ ಅಧ್ಯಯನಕ್ಕಾಗಿ ಅಭಿಪ್ರಾಯ, ಮಾಹಿತಿಯನ್ನು ಪಡೆಯಲಾಗಲಿಲ್ಲ. ಇದಕ್ಕೆ ಕಾರಣ ರಾಜ್ಯ ಬಂದಿಖಾನೆ ಇಲಾಖೆಯ ಮಹಾನಿರೀಕ್ಷಕರು, ಸಂಶೋಧಕಿಯ ಭದ್ರತೆಯ ಬಗ್ಗೆ ಕಾಳಜಿ ವಹಿಸಿ, ಆದಷ್ಟು ಶೀಘ್ರವಾಗಿ ಕಡಿಮೆ ಕೈದಿಗಳ ಸಂದರ್ಶನಕ್ಕೆ ಶಿಫಾರಸು ಮಾಡಿದ್ದು ಹಾಗೂ ಇದು ಸೀಮಿತ ಕಾಲಾವಕಾಶವುಳ್ಳ ಸಂಶೋಧನೆಯ ವಿಧಾನ ಮತ್ತು ಮಿತಿಯೂ ಹೌದು. ಈ ಅಧ್ಯಯನದ ಸಮಯಾವಧಿ ಮೂರು ವರುಷಗಳಲ್ಲೂ, ಪ್ರತೀ ವರುಷಕ್ಕೆರಡು ಬಾರಿ ಪ್ರತೀ ಕೇಂದ್ರ ಬಂದಿಖಾನೆ ಹಾಗೂ ಬಯಲು ಬಂದಿಖಾನೆಯ ಕೈದಿಗಳನ್ನು ಭೇಟಿಮಾಡಿ ಮಾತುಕತೆಯ ರೂಪದಲ್ಲಿ ಸಂದರ್ಶನ (Unstructured Interview) ನಡೆಸಲಾಗಿದೆ.

ಈ ಅಧ್ಯಯನದ ಪ್ರಾಥಮಿಕ ಹಂತದಲ್ಲಿ ರಾಜ್ಯ ಬಂದಿಖಾನೆ ಇಲಾಖೆಯ ಮಹಾ ನಿರೀಕ್ಷಕರನ್ನು, ಉಪನಿರೀಕ್ಷರನ್ನು ಸಂದರ್ಶಿಸಿ, ನಂತರ ಕೇಂದ್ರ ಬಂದಿಖಾನೆಗಳ ಅಧೀಕ್ಷಕರು, ಆಯ್ದ ಸಹಾಯಕ ಅಧೀಕ್ಷಕರು, ಜೈಲರ್ಸ್, ಹೆಡ್ ವಾರ್ಡರ್ಸ್ (ಮಹಿಳೆಯರು), ವಾರ್ಡರ್ಸ್ (ಮಹಿಳೆಯರು)ಗಳ ಜತೆ ಮಾತುಕತೆಯಾಡುವ

ಮೂಲಕ ಬಂದಿಖಾನೆ ಮತ್ತು ಕೈದಿಗಳ ಬಗ್ಗೆ ಪ್ರಾಥಮಿಕ ಮಾಹಿತಿಯನ್ನು ಪಡೆಯಲಾಯಿತು. ಬಂದಿಖಾನೆ - ಕೈದಿಗಳ ಸಮಸ್ಯೆಗೆ ಸ್ಪಂದಿಸುವ ಹಲವು ಸ್ವಯಂ ಸೇವಾ ಕಾರ್ಯಕರ್ತ (NGO)ರನ್ನೂ ಮುಂದಿನ ಕ್ಷೇತ್ರಕಾರ್ಯಕ್ಕೆ ಹಾಗೂ ಅಧ್ಯಯನಕ್ಕೆ ಪೂರಕವಾದ ಮಾಹಿತಿ - ಅಭಿಪ್ರಾಯಗಳನ್ನು ಪಡೆಯುವುದಕ್ಕಾಗಿ ಮಾತುಕತೆ ನಡೆಸಲಾಯಿತು. ಕೈದಿಗಳು ಲಿಖಿತ ಪ್ರಶ್ನಾವಳಿ ಹಾಗೂ ನೇರ ಸಂದರ್ಶನಕ್ಕೆ ಸ್ಪಂದಿಸುವ ರೀತಿ ಅಸಹಜವಾಗಿದ್ದುದರಿಂದ ಮತ್ತು ನೀಡುವ ಮಾಹಿತಿಗಳಲ್ಲಿ ವಾಸ್ತವಾಂಶ ಕಡಿಮೆ ಇರುವದನ್ನು ಗಮನಿಸಿ, ವಾಸ್ತವ ಮಾಹಿತಿಗಳನ್ನು ಪಡೆಯುವುದಕ್ಕಾಗಿ, ಮೊದಲಿಗೆ ಅವರ ಜತೆ ನಂಬಿಕೆ ವಿಶ್ವಾಸವನ್ನು ಗಳಿಸಲು ಬಳ್ಳಾರಿ - ಬೆಂಗಳೂರು - ಮೈಸೂರು ಕೇಂದ್ರ ಬಂದಿಖಾನೆಗಳನ್ನು ಒಡನಾಟದ ಬಂದಿಖಾನೆಗಳನ್ನಾಗಿ ಆಯ್ಕೆ ಮಾಡಿಕೊಳ್ಳಲಾಯಿತು.

ಈ ಅಧ್ಯಯನದಲ್ಲಿ ಕಂಡು ಬಂದ ಫಲಿತಗಳು ಅಂತಿಮವಾದುದಲ್ಲ. ಇದು ಸೀಮಿತ ಸಂಶೋಧನಾ ಅವಧಿಯಲ್ಲಿ, ಆಯ್ಕೆ ಮಾಡಿಕೊಂಡ ಸಂಶೋಧನಾ ವಿಧಿ ವಿಧಾನದ ಮಿತಿಯಲ್ಲಿ ಕಂಡುಕೊಂಡ ಫಲಿತಗಳಷ್ಟೆ. ಬಂದಿಖಾನೆಗಳಲ್ಲಿ ಕೈದಿಗಳು ಬದಲಾಗುತ್ತಲೇ ಇರುತ್ತಾರೆ - ಕೈದಿಗಳ ಒಳ ಹರಿವು, ಹೊರ ಹರಿವು ಇದ್ದೇ ಇದೆ. ಒಬ್ಬ ಕೈದಿಯ ಮನಸ್ಥಿತಿ - ಅಭಿಪ್ರಾಯದಲ್ಲೂ ವ್ಯತ್ಯಾಸವಿರುವುದು ಸಹಜ. ಈ ಅಧ್ಯಯನದ ಅವಧಿಯಲ್ಲಿದ್ದ ಕೈದಿಗಳನ್ನು ಅಧ್ಯಯನ ಮಾಡಿ ಕಂಡುಕೊಂಡ ಫಲಿತವೇ ಅಂತಿಮವಲ್ಲ. ಅದು ಬದಲಾಗಬಹುದು.

## ಅಧ್ಯಯನದ ವಿಧಾನಗಳು

ಗ್ರಂಥಾಲಯ ಮತ್ತು ಇತರ ಜ್ಞಾನ ಸಂವಹನ ಮಾಧ್ಯಮಗಳಿಂದ ಕೈದಿಗಳ ಮನಪರಿವರ್ತನಾ ಪ್ರಕ್ರಿಯೆಯ ಬಗ್ಗೆ ಅಧ್ಯಯನ ಮಾಡುವ ಉದ್ದೇಶದಿಂದ ಅಧ್ಯಯನಕ್ಕೆ ಅಳವಡಿಸಿಕೊಳ್ಳಲಾದ ವಿಧಾನಗಳನ್ನು ಇಲ್ಲಿ ವಿವರಿಸಲಾಗಿದೆ.

'ಮನಪರಿವರ್ತನೆ' ಎಂಬ ಪ್ರಕ್ರಿಯೆ ಮೊಗ್ಗು ಅರಳುವಷ್ಟೇ ನವಿರಾದ ಅಗೋಚರವಾದ, ಸದ್ದಿಲ್ಲದ ಪ್ರಕ್ರಿಯೆ. ಇದು ಮಾನಸಿಕವಾದುದು. ಈ ಪ್ರಕ್ರಿಯೆಯಲ್ಲಿ ಮನಪರಿವರ್ತನೆಗೊಳಗಾಗುವ ಕೈದಿಗಳ ಜತೆಗೆ ಆಡಳಿತದ ಸಿಬ್ಬಂದಿ, ಮನಪರಿವರ್ತನಾ ಪರಿಕರಗಳು ಅಥವ ಜ್ಞಾನಸಂವಹನಾ ವ್ಯವಸ್ಥೆ, ಕೈದಿ ಬದುಕುವ ವಾತಾವರಣ, ಹೊರಗಿನ ಸಮಾಜ ಎಲ್ಲವೂ ಒಂದಕ್ಕೊಂದು ಪೂರಕವಾಗಿ ಹೊಸೆದು ಕೊಂಡಿದೆ. ಈ ಅಧ್ಯಯನವನ್ನು ಕೈಗೊಳ್ಳುವಾಗ ಇವೆಲ್ಲವನ್ನೂ ಗಮನದಲ್ಲಿಟ್ಟುಕೊಂಡು, ಅಧ್ಯಯನದಲ್ಲಿ ವಾಸ್ತವಾಂಶಗಳನ್ನು ಪಡೆಯುವುದಕ್ಕಾಗಿ ಅಧ್ಯಯನಕ್ಕೆ ತಕ್ಕಂತಾ ವಿಧಾನಗಳನ್ನು ಹಾಗೂ ಕ್ಷೇತ್ರ ಕಾರ್ಯದಲ್ಲಿ ಹೊಸ ತಂತ್ರಗಳನ್ನು ಅಳವಡಿಸಿಕೊಳ್ಳಲಾಗಿದೆ.

ಬಂದಿಖಾನೆಯೆಂಬುದು ಸಾಮಾಜಿಕ ವ್ಯವಸ್ಥೆಯ ಒಂದು ಅಂಗವಾಗಿದ್ದರೂ, ಅದು ಸಮಾಜದಿಂದ ಮಾನಸಿಕವಾಗಿ ದೂರವಿರುವ ಒಂದು ವ್ಯವಸ್ಥೆ. ಕೈದಿಗಳೆಂದರೆ ಕ್ರೂರ ಮೃಗಗಳೆಂಬ ಚಿತ್ರಣವನ್ನು ಸಮಾಜಕ್ಕೆ ಬಂದಿಖಾನೆ ವ್ಯವಸ್ಥೆಯೇ ಕೊಟ್ಟಿತೋ... ಅಥವ ಸಮಾಜವೇ ಆ ಚಿತ್ರಣವನ್ನು ಆವಾಹಿಸಿಕೊಂಡಿತೋ...! ಒಟ್ಟಿನಲ್ಲಿ ಆ ವ್ಯವಸ್ಥೆಯ ಒಳ ಹೊಕ್ಕು ಅದರ ಅಂತರಂಗದೊಳು ನೆಲೆನಿಂತು ಅಧ್ಯಯನವನ್ನು ಕೈಗೊಳ್ಳಲು ಮೊದಲಿಗೆ ಮಾನಸಿಕವಾದ ಪೂರ್ವಭಾವಿ ಸಿದ್ಧತೆಗಳನ್ನು ಮಾಡಿಕೊಳ್ಳಲಾಯಿತು.

ಈ ಅಧ್ಯಯನವು ಕ್ಷೇತ್ರಕಾರ್ಯ ಆಧಾರಿತ ಅಧ್ಯಯನವಾಗಿರುವುದರಿಂದ, ಕ್ಷೇತ್ರಕಾರ್ಯದ ಆರಂಭದಲ್ಲಿ, ಪ್ರಶ್ನಾವಳಿ' ಮತ್ತು ಧ್ವನಿಮುದ್ರಕವನ್ನು ಬಳಸಿಕೊಳ್ಳುವುದೆಂದು ನಿರ್ಧರಿಸಲಾಗಿತ್ತು. ಧ್ವನಿಮುದ್ರಕದ ಬಳಕೆಗೆ ರಾಜ್ಯ ಬಂದಿಖಾನೆ ಇಲಾಖೆಯ ಮಹಾನಿರೀಕ್ಷಕರು ಮೌಖಿಕ ಒಪ್ಪಿಗೆ ನೀಡಿದ್ದರೂ, ಕೆಲವು ಕೇಂದ್ರ ಬಂದಿಖಾನೆಗಳ ಅಧೀಕ್ಷಕರು ತಮ್ಮ 'ಭದ್ರತೆ'ಯ ಮುನ್ನೆಚ್ಚರಿಕೆಯಾಗಿ, ಈ ಅಧ್ಯಯನದಲ್ಲಿ ಧ್ವನಿ ಮುದ್ರಕದ ಬಳಕೆಗೆ ಒಪ್ಪಿಗೆ ನೀಡಲಿಲ್ಲ. ಮಹಾನಿರೀಕ್ಷಕರ ಲಿಖಿತ ಒಪ್ಪಿಗೆ ಬೇಕೆಂದು ಒತ್ತಾಯಿಸಿದ ಕಾರಣ, ಅಧ್ಯಯನದ ಕಾಲಾವಕಾಶವನ್ನು ಗಮನದಲ್ಲಿರಿಸಿಕೊಂಡು ಧ್ವನಿಮುದ್ರಕದ ಬಳಕೆಯನ್ನು ನಿಲ್ಲಿಸಲಾಯಿತು. ಕೆಲವು ಬಂದಿಖಾನೆಗಳಲ್ಲಿ ಕೈದಿಗಳು ಧ್ವನಿಮುದ್ರಕದಲ್ಲಿ ತಮ್ಮ ಅಭಿಪ್ರಾಯ ದಾಖಲಿಸುವ ಬಗ್ಗೆ ಭಯ - ಅಸಮಧಾನ - ಅಸಹನೆ ವ್ಯಕ್ತ ಪಡಿಸಿದ್ದರಿಂದಲೂ ಧ್ವನಿಮುದ್ರಕದ ಬಳಕೆ ನಿಲ್ಲಿಸಲಾಯಿತು.

ಕೈದಿಗಳಿಗಾಗಿ ಸಿದ್ಧಪಡಿಸಿದ್ದ ಪ್ರಶ್ನಾವಳಿಗಳು ಕೂಡಾ ಪ್ರತೀ ಬಂದಿಖಾನೆ ಆಡಳಿತವರ್ಗದ ತಪಾಸಣೆಗೊಳಗಾಗಿ, ಕೆಲವು ಬಂದಿಖಾನೆ ಅಧಿಕಾರಿಗಳಿಂದ ಆ ಪ್ರಶ್ನಾವಳಿಯ ಪ್ರಶ್ನೆಗಳ ಬಗ್ಗೆ ಅಸಮಧಾನ ವ್ಯಕ್ತವಾಯಿತು. ಅಧಿಕಾರಿಗಳ ಅಸಮಧಾನ ಕೈದಿಗಳ ಮೇಲೆ ಪ್ರಭಾವ ಬೀರಿ ಕೆಲವು ಕೈದಿಗಳು ಪ್ರಶ್ನಾವಳಿಯನ್ನು ಸ್ವೀಕರಿಸಲಿಲ್ಲ. ಮತ್ತೆ ಕೆಲವರು ಸ್ವೀಕರಿಸಿದರೂ ತುಂಬಿ ಕೊಡಲಿಲ್ಲ. ಇನ್ನು ಕೆಲವರು 'ನೀವೇ ತುಂಬಿ' ಎಂದು ಹಿಂದಿರುಗಿಸಿ, ವಾಸ್ತವಾಂಶಗಳನ್ನು ಮರೆಮಾಚಿ ಕಾಟಾಚಾರಕ್ಕೆಂಬಂತೆ ಆ ಪ್ರಶ್ನೆಗಳಿಗೆಲ್ಲ ಉತ್ತರಿಸಿದರು. ಈ ರೀತಿಯ ವಾಸ್ತವಾಂಶವಿರದ ಹಾಗೂ ಅಪೂರ್ಣ ಪ್ರಶ್ನಾವಳಿ ಅಧ್ಯಯನಕ್ಕೆ ಪೂರಕ ಮಾಹಿತಿಗಳನ್ನು ನೀಡದಾದಾಗ, ಆ ಲಿಖಿತ ಪ್ರಶ್ನಾವಳಿಯ ವಿಧಾನವನ್ನೇ ರದ್ದು ಮಾಡಿ - ಕೈದಿಗಳ ಜತೆ ಸ್ನೇಹಪೂರ್ವಕವಾಗಿ ಮಾತುಕತೆಯಾಡುವ ಮೂಲಕ ಮಾಹಿತಿ, ಅಭಿಪ್ರಾಯ ಸಂಗ್ರಹಿಸುವುದೆಂದು ನಿರ್ಧರಿಸಲಾಯಿತು. ಕೈದಿಗಳ ಮುಕ್ತ ಸಂದರ್ಶನಕ್ಕೆ ಇಲಾಖಾ ಮಹಾನಿರೀಕ್ಷಕರ ಲಿಖಿತ ಒಪ್ಪಿಗೆ ಸಿಕ್ಕಿದ್ದರೂ, ಬಂದಿಖಾನೆಗಳ ಅಧಿಕಾರಿಗಳು ಮತ್ತೆ ಭದ್ರತೆಯ ನೆಪವೊಡ್ಡಿ, ಸಂದರ್ಶನ ತಾಣವೊಂದನ್ನು ನಿರ್ಧರಿಸಿ, ಅಲ್ಲಿಗೆ ಸೆರೆಯೊಳಗಿಂದ ಕೈದಿಗಳನ್ನು ಕರೆತರುವಾಗಲೇ ಅವರ ಮಾತಿಗೆ ಹಾಗೂ ನೀಡುವ ಮಾಹಿತಿಗೆ ಹಾಕಬೇಕಾದ ಕಡಿವಾಣದ ಬಗ್ಗೆ ಮುನ್ನೆಚ್ಚರಿಕೆ ನೀಡಿದ್ದರ ಫಲವಾಗಿ ಹಾಗೂ ಮಹಿಳಾ ಸಂದರ್ಶಕಿ ಎಂಬ ಕಾರಣವೊಡ್ಡಿ ಭದ್ರತೆಗಾಗಿ ಅಧಿಕಾರಿಗಳೂ ಸಂದರ್ಶನದ ತಾಣದಲ್ಲೇ ಮೊಕ್ಕಾಂ ಹೂಡಿದ್ದರಿಂದ ಯಾವ ಕೈದಿಯೂ ಸಂದರ್ಶನದ ವೇಳೆ ಸಹಜವಾಗಿ ಮಾತನಾಡಲಿಲ್ಲ. ಬಂದಿಖಾನೆಯಲ್ಲಿ ಲಭ್ಯವಿರುವ ಜ್ಞಾನ ಸಂವಹನಾ ಮಾಧ್ಯಮಗಳ ಬಗ್ಗೆ ಯಾವುದೇ ಸ್ಪಷ್ಟ ಅನಿಸಿಕೆ - ಅಭಿಪ್ರಾಯ ವ್ಯಕ್ತಪಡಿಸದೆ, ತಮ್ಮ ವೈಯಕ್ತಿಕ ವಿವರ, ಅಪರಾಧದ ಹಿನ್ನೆಲೆಯನ್ನೂ ನೀಡದೆ ಅಧಿಕಾರಿಗಳ ಮುಖಭಾವನೆ ನೋಡಿ ಕೈದಿಗಳು ತಣ್ಣಗಾದರು. ಮಾಹಿತಿ ಸಂಗ್ರಹಣೆಗೆ ಈ ವಿಧಾನವೂ ಫಲಿಸದಿದ್ದಾಗ ಕೊನೆಗೆ ಮತ್ತೊಂದು ವಿಧಾನವನ್ನು ಆರಿಸಿಕೊಳ್ಳುವುದು ಅನಿವಾರ್ಯವಾಯಿತು. ಎಲ್ಲ ಬಂದಿಖಾನೆಗಳನ್ನು ಹಲವು ಬಾರಿ ಸಂದರ್ಶಿಸುವುದರ ಮೂಲಕ ಬಂದಿಖಾನೆ ಅಧಿಕಾರಿಗಳ ಮತ್ತು ಕೈದಿಗಳ ಸ್ನೇಹ - ವಿಶ್ವಾಸ ಸಂಪಾದಿಸುವುದು ನಂತರ ನಿಧಾನಕ್ಕೆ ಸಹಜವಾಗಿ ಕೈದಿಗಳ ಕಷ್ಟ ಸುಖ ವಿಚಾರಿಸುತ್ತ ಮಾತುಕತೆಗೆಳೆದು ಅಧ್ಯಯನಕ್ಕೆ ಬೇಕಾದ ಮಾಹಿತಿಗಳನ್ನು ಸಂಗ್ರಹಿಸುವುದು. ಇದು ಈ ಅಧ್ಯಯನಕ್ಕೆ ಬೇಕಾದ ಅಭಿಪ್ರಾಯ ಮಾಹಿತಿ ಸಂಗ್ರಹಕ್ಕಾಗಿ ಅನುಸರಿಸಿದ ಹೊಸ ವಿಧಾನ. ಒಂದು

ವರ್ಷದಲ್ಲಿ ಹಲವು ಸಲ ಬಂದಿಖಾನೆಗಳನ್ನು ಸಂದರ್ಶಿಸಿದ ಫಲವಾಗಿ ಸಂಶೋಧನೆಯ ಬಗ್ಗೆ ಹಾಗೂ ಸಂಶೋಧಕಿ ಬಗ್ಗೆ ಅಧಿಕಾರಿಗಳಿಗೆ ನಂಬಿಕೆ - ವಿಶ್ವಾಸ ಬೆಳೆಯಿತಲ್ಲದೆ ಕೈದಿಗಳೂ ಪರಿಚಿತರಾದರು. ಬಂದಿಖಾನೆ ಉದ್ಯಮಗಳಲ್ಲಿ ದುಡಿಯುವ, ಕೃಷಿಯಲ್ಲಿ ತೊಡಗಿರುವ ಹಾಗೂ ಬಂದಿಖಾನೆ ಕಚೇರಿಯ ಸಹಾಯಕ ಕೆಲಸಕ್ಕೆ ಮತ್ತು ಕಾವಲುಗಾರಿಕೆಗೆ ನಿಯುಕ್ತರಾಗಿರುವ ಕೈದಿಗಳೆಲ್ಲರ ಪರಿಚಯದಿಂದ ಉಳಿದ ಕೈದಿಗಳೂ ಕೂಡಾ ಸಲಿಗೆಯಿಂದ ವಿಶ್ವಾಸದಿಂದ ಮಾತನಾಡುವ ಹಂತಕ್ಕೆ ಬರುವಾಗ ಅಧ್ಯಯನ ಕೈಗೊಂಡು ವರುಷ ಉರುಳಿತ್ತು. ಕ್ಷೇತ್ರಕಾರ್ಯದ ಎರಡನೆಯ ವರುಷದಿಂದ ಅಧಿಕಾರಿಗಳಲ್ಲಿ ಸಂಶೋಧನೆ ಬಗ್ಗೆ ನಂಬಿಕೆ - ವಿಶ್ವಾಸಗಳು ಹುಟ್ಟಿದ್ದರ ಫಲವಾಗಿ, ಕೈದಿಗಳೂ ನನ್ನಲ್ಲಿ ವಿಶ್ವಾಸವಿಟ್ಟು ಮಾತುಕತೆಗೆ ತೊಡಗಿದ್ದರಿಂದ ಅಧ್ಯಯನಕ್ಕೆ ಬೇಕಾದ ಮಾಹಿತಿಗಳು ಲಭ್ಯವಾಗತೊಡಗಿದ್ದವು. ಈ ಮಾತುಕತೆಯನ್ನು ಸಂಶೋಧನಾ ಭಾಷೆಯಲ್ಲಿ Unstructred Interview ಅಥವ Unstructured Questionaire ಎಂದೆನ್ನಬಹುದು.

ಈ ಮಾತುಕತೆಯ ಮಧ್ಯೆ ಕೈದಿಗಳಿಂದ ಬಂದಿಖಾನೆಯ ಅವ್ಯವಸ್ಥೆ, ಅಧಿಕಾರಿಗಳ ಅಸಡ್ಡೆ, ಅಲಕ್ಷ್ಯ, ಅಮಾನವೀಯತೆ ಬಗ್ಗೆಯೂ ಪ್ರಸ್ತಾಪವಾದಾಗ, ಅಂತಹ ಅಧಿಕಾರಿಗಳ ಪರಿಚಯವನ್ನು ಮನಸ್ಸಲ್ಲೇ ದಾಖಲಿಸಿಕೊಂಡು ಮತ್ತೆ ಅದೇ ಅಧಿಕಾರಿಗಳನ್ನು ಸೂಕ್ಷ್ಮವಾಗಿ ಮಾತುಕತೆಗೆಳೆದು ಅಧ್ಯಯನಕ್ಕೆ ಅವಶ್ಯಕವಾದ ಅಂಶಗಳನ್ನು ದಾಖಲಿಸಿಕೊಳ್ಳಲಾಗುತ್ತಿತ್ತು. ಅಧಿಕಾರಿಯೂ ಕೈದಿಗಳ ಮನಪರಿವರ್ತನೆಯ ಬಗ್ಗೆ ತನ್ನ ಮೇಲಧಿಕಾರಿಗಳು ತೋರುವ ಅಸಡ್ಡೆ - ಅಸಹಕಾರದ ಬಗ್ಗೆ ಮಾಹಿತಿ ನೀಡಿದ್ದಲ್ಲಿ, ಆ ಮಾಹಿತಿಯ ಮೂಲಕ 'ಮೇಲಾಧಿಕಾರಿ'ಯನ್ನು ಸಂದರ್ಶಿಸಲಾಗುತಿತ್ತು. ಕ್ಷೇತ್ರಕಾರ್ಯದ ವೇಳೆ ಬಂದಿಖಾನೆಗೆ ಸಂದರ್ಶನ ನೀಡಿದಾಗಲೆಲ್ಲ, ಅಲ್ಲಿನ ದಿನನಿತ್ಯದ ಕಾರ್ಯಚಟುವಟಿಕೆಗಳಲ್ಲಿ ಕೈದಿ ಮತ್ತು ಬಂದಿಖಾನೆಯ ಸಿಬ್ಬಂದಿ ನಡುವಣ ಸಂಬಂಧ - ಸಾಮರಸ್ಯ - ಬಿರುಕು - ಮಾತುಕತೆಗಳನ್ನು ಸೂಕ್ಷ್ಮವಾಗಿ ಗಮನಿಸಲಾಗುತ್ತಿತ್ತು.

ಕೈದಿಗಳು ಕೊಟ್ಟ ಮಾಹಿತಿಗಳನ್ನು ಬಂದಿಖಾನೆಯ ಅಧಿಕಾರಿಗಳ ಜತೆ ನೇರವಾಗಿ ಚರ್ಚಿಸದೆ, ಮಾತುಕತೆಯ ಸಂದರ್ಭದಲ್ಲಿ ಪ್ರಸ್ತಾಪಿಸಿ ಆ ಮಾಹಿತಿಗಳ ವಾಸ್ತವಾಂಶಗಳ ಬಗ್ಗೆ ಖಚಿತ ಪಡಿಸಿಕೊಳ್ಳಲಾಗುತ್ತಿತ್ತು. ಎಲ್ಲವನ್ನೂ ಮನಸ್ಸಲ್ಲಿ ಮುದ್ರಿಸಿಕೊಳ್ಳಲು ಸಾಧ್ಯವಾಗದಾಗ, ಹಲವು ಬಾರಿ ಅಧಿಕಾರಿಗಳ ಮಾತುಕತೆಯನ್ನು ಅವರಿಗೆ ತಿಳಿಯದಂತೆಯೇ ಧ್ವನಿಮುದ್ರಿಸಿಕೊಳ್ಳಲಾಯಿತು.

ಈ ಅಧ್ಯಯನಕ್ಕೆ ಇನ್ನಷ್ಟು ಅಂಕಿ ಅಂಶಗಳ ಹಾಗೂ ಅಧಿಕೃತ ಮಾಹಿತಿಗಳನ್ನು ಪಡೆಯಲು ರಾಜ್ಯ ಬಂದಿಖಾನೆ ಇಲಾಖೆಯ ಮಹಾನಿರೀಕ್ಷರನ್ನು ಮತ್ತೊಮ್ಮೆ ಕ್ಷೇತ್ರಕಾರ್ಯದ ಕೊನೆಯ ಹಂತದಲ್ಲಿ ಭೇಟಿ ಮಾಡಲಾಯಿತು; ಅವರಿಂದ ಪಡೆಯಲಾದ ಹಲವು ಮೌಖಿಕ ಮಾಹಿತಿಗಳು, ಲಿಖಿತ ಮಾಹಿತಿಗಳು, ಇಲಾಖಾ ವರದಿಗಳು, ಕೇಂದ್ರ - ರಾಜ್ಯ ಸರಕಾರದ ಆದೇಶಗಳು, ಅಮೂಲ್ಯವಾದ ದಾಖಲಾತಿಗಳು, ಬ್ರಿಟಿಷ್ ಪೂರ್ವ ಹಾಗೂ ನಂತರದ ಬಂದಿಖಾನೆ ಸುಧಾರಣಾ ಸಮಿತಿಗಳ ವರದಿಗಳು, ಪತ್ರಿಕಾ ತುಣುಕುಗಳು, ಅಪರೂಪದ ಛಾಯಾಚಿತ್ರಗಳು, ಆಡಿಯೋ - ವಿಡಿಯೋ ಕ್ಯಾಸೆಟ್‌ಗಳು... ಇವೆಲ್ಲವನ್ನೂ ಮಾಹಿತಿ ಮೂಲಗಳನ್ನಾಗಿ ಬಳಸಿಕೊಳ್ಳಲಾಗಿದೆ.

ಹಲವು ಪತ್ರಿಕಾಲಯಗಳಿಗೆ ಭೇಟಿಮಾಡಿ, ಹಳೆಯ ಸಂಚಿಕೆಗಳನ್ನು ಮಾಹಿತಿ ಮೂಲಕ್ಕಾಗಿ ಪರಾಮರ್ಶಿಸಲಾಗಿದೆ. ರಾಜ್ಯದ ಮೂರು ವಿಶ್ವವಿದ್ಯಾಲಯಗಳ ಗ್ರಂಥಾಲಯವನ್ನು ಈ ಅಧ್ಯಯನಕ್ಕೆ ಸಂಬಂಧಿಸಿದ ಮಾಹಿತಿಗಾಗಿ ಆಶ್ರಯಿಸಲಾಗಿದೆ.

ಬಿಡುಗಡೆಯಾಗಿ ಸಂತೃಪ್ತ ಜೀವನವನ್ನು ಸಾಗಿಸುತ್ತಿರುವ ಹಲವು ಮಂದಿ ಮಾಜಿ ಕೈದಿಗಳನ್ನು ಭೇಟಿಮಾಡಿ ಮನಪರಿವರ್ತನೆಯ ಸಾಧ್ಯತೆಯ ಬಗ್ಗೆ ಚರ್ಚಿಸುವುದರ ಮೂಲಕ ಈ ಅಧ್ಯಯನಕ್ಕೆ ಪೂರಕ ಮಾಹಿತಿಗಳನ್ನು ಪಡೆಯಲಾಗಿದೆ. ಅವರು ಉದ್ಯೋಗಕ್ಕಾಗಿ ಕಂಡುಕೊಂಡ ದಾರಿಯನ್ನು ಅವಲೋಕಿಸಿ, ಬಂದಿಖಾನೆಯಲ್ಲಿ ಕೈದಿಗಳಿಗೆ ಜ್ಞಾನ ಸಂವಹನೆಯ ಅವಶ್ಯಕತೆಯನ್ನು ಅರ್ಥೈಸಿಕೊಳ್ಳಲಾಗಿದೆ.

ಈ ಅಧ್ಯಯನದಲ್ಲಿ ಗ್ರಂಥಾಲಯ ಮತ್ತು ಮಾಹಿತಿ ವಿಜ್ಞಾನ, ಸಮೂಹ ಮಾಧ್ಯಮ, ಅಪರಾಧಶಾಸ್ತ್ರ, ಮನಶ್ಶಾಸ್ತ್ರದಂಥ ಸಮಾಜವಿಜ್ಞಾನಕ್ಕೆ ಅನೇಕ ಸಂಬಂಧಿಸಿದ ವಿಷಯಗಳು ಅಡಕವಾಗಿರುವುದರಿಂದ ಅದಕ್ಕೆ ಸಂಬಂಧಿಸಿದಂತೆ ಹಲವು ವಿದ್ವಾಂಸರು ಹಾಗೂ ಕ್ಷೇತ್ರತಜ್ಞರಿಂದ ಅನೇಕ ಮಾಹಿತಿ ಮತ್ತು ವಿಷಯಗಳನ್ನು ತಿಳಿದುಕೊಳ್ಳಲು ಪ್ರಯತ್ನಿಸಲಾಗಿದೆ.

ಜ್ಞಾನ ಸಂವಹನಾ ಮಾಧ್ಯಮಗಳಲ್ಲಿ ಬಹಳ ಪ್ರಭಾವಶಾಲಿ ಪಾರಂಪರಿಕ ಮಾಧ್ಯಮವೆಂದು ಪರಿಗಣಿತವಾದ 'ನಾಟಕ ಮಾಧ್ಯಮ'ವನ್ನು ಆಯ್ಕೆಮಾಡಿಕೊಂಡು, ಬಂದಿಖಾನೆಗಳಲ್ಲಿ ನಾಟಕಗಳನ್ನು ಆಯೋಜಿಸುತ್ತಿರುವ ಕಲಾ ಕಮ್ಮಟಗಳನ್ನು ಏರ್ಪಡಿಸುತ್ತಿರುವ ನಾಟಕ ನಿರ್ದೇಶಕರು ಕಲಾವಿದರನ್ನು ಸಂದರ್ಶಿಸಿ, ಅಧ್ಯಯನಕ್ಕೆ ಬೇಕಾಗಿರುವ ಮಾಹಿತಿಗಳನ್ನು ಪಡೆಯಲಾಗಿದೆ.

ಕ್ಷೇತ್ರ ಕಾರ್ಯದ ಕೊನೆಯ ಹಂತದಲ್ಲಿ ಬಂದಿಖಾನೆ ಸಮಸ್ಯೆಗಳಿಗೆ ಮತ್ತು ಕೈದಿಗಳ ಕಲ್ಯಾಣಕ್ಕಾಗಿ ಹಲವು ರೀತಿಯಲ್ಲಿ ಸ್ಪಂದಿಸುವ ಕೆಲವು ಮುಖ್ಯ ಸ್ವಯಂಸೇವಕ ಸಂಘಗಳ ಕಾರ್ಯಕರ್ತರನ್ನು ಮುಖತಃ ಮಾತನಾಡಿಸಿ ಕೈದಿ ಮನಪರಿವರ್ತನಾ ಪ್ರಕ್ರಿಯೆಯ ದಾರಿಯಲ್ಲಿರುವ ಹಲವು ಅಡ್ಡಿ ಆತಂಕಗಳ ಬಗ್ಗೆ ಚರ್ಚಿಸಲಾಗಿದೆ. ಈ ಎಲ್ಲ ಮಾಹಿತಿಗಳಿಂದಲೂ ಸಂಗ್ರಹಿಸಿದ ಮಾಹಿತಿ, ಅಂಕಿ ಅಂಶಗಳನ್ನು ಕೋಷ್ಟಕಗಳ ಮೂಲಕ ವಿಶ್ಲೇಷಿಸಿ ಅಧ್ಯಯನದಲ್ಲಿ ಬಳಸಿಕೊಳ್ಳಲಾಗಿದೆ. ಉಳಿದ ಮಾಹಿತಿಗಳನ್ನು ಬರವಣಿಗೆಯಲ್ಲಿ ವೇಳೆ ಸಂದರ್ಭೋಚಿತವಾಗಿ ಬಳಸಿಕೊಳ್ಳಲಾಗಿದೆ.

## ಅಧ್ಯಾಯಗಳ ವಿನ್ಯಾಸ

ಈ ಸಂಶೋಧನಾ ಪ್ರಬಂಧವು ಒಟ್ಟು ಎಂಟು ಅಧ್ಯಾಯವನ್ನು ಒಳಗೊಂಡಿದೆ. ಮೊದಲ ಅಧ್ಯಾಯ, ಸಂಶೋಧನಾ ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ ಮತ್ತು ವಿಧಾನವನ್ನು ಸಾದರಪಡಿಸುತ್ತದೆ. ಎರಡನೆ ಅಧ್ಯಾಯ 'ಅಪರಾಧ ಮತ್ತು ಶಿಕ್ಷೆ ನಡೆದು ಬಂದ ದಾರಿ'. ಇದು ಮನುಕುಲದಲ್ಲಿ ಅಪರಾಧ ಮತ್ತು ಶಿಕ್ಷೆ ಸಾಗಿ ಬಂದ ದಾರಿಯನ್ನು ವಿಶದಪಡಿಸುತ್ತದೆ. ಮೂರನೇ ಅಧ್ಯಾಯ 'ಕರ್ನಾಟಕದ ಬಂದಿಖಾನೆಗಳ ಇತಿಹಾಸ ಮತ್ತು ವರ್ತಮಾನ'ವು, ಕರ್ನಾಟಕದಲ್ಲಿ ಬಂದಿಖಾನೆ ವ್ಯವಸ್ಥೆ ಬೆಳೆದು ಬಂದ ಬಗೆ ಹಾಗೂ ವರ್ತಮಾನ ಸ್ಥಿತಿಯ

ಸೂಕ್ಷ್ಮ ಚಿತ್ರಣ ನೀಡುತ್ತದೆ. ಕೈದಿಗಳ ಮನಪರಿವರ್ತನೆಯ ಪರಿಕಲ್ಪನೆ ಹಾಗೂ ವಾಸ್ತವ ಸ್ಥಿತಿಯ ಬಗ್ಗೆ ನಾಲ್ಕನೇ ಅಧ್ಯಾಯವಾದ 'ಕೈದಿಗಳ ಮನಪರಿವರ್ತನೆಯ ಪರಿಕಲ್ಪನೆ ಮತ್ತು ವಾಸ್ತವ'ವು ಬೆಳಕು ಚೆಲ್ಲಿದರೆ, ಐದನೇ ಅಧ್ಯಾಯ 'ಕರ್ನಾಟಕದ ಬಂದಿಖಾನೆಗಳಲ್ಲಿ ಜ್ಞಾನಸಂವಹನ ಮಾಧ್ಯಮಗಳ ಸ್ಥಿತಿ-ಗತಿ'ಯು ಕರ್ನಾಟಕದ ಬಂದಿಖಾನೆಯಲ್ಲಿರುವ ಎಲ್ಲ ಜ್ಞಾನ ಸಂವಹನಾ ಮಾಧ್ಯಮಗಳ ಬಗ್ಗೆ ಸಮಗ್ರ ವಿವರ ನೀಡುವುದಲ್ಲದೆ, ಕೈದಿಗಳತ್ತ ಅವು ಜ್ಞಾನ ಸಂವಹಿಸುವ ಸಂದರ್ಭದಲ್ಲಿ ಎದುರಿಸುವ ಎಡರುತೊಡರುಗಳನ್ನು ವಿವರಿಸುತ್ತದೆ. ಆರನೇ ಅಧ್ಯಾಯ 'ಕೈದಿಗಳ ಮನಪರಿವರ್ತನಾ ಪ್ರಕ್ರಿಯೆಯಲ್ಲಿ ಬಂದಿಖಾನೆ ಸುಧಾರಣಾ ಸಮಿತಿಗಳ ಪಾಲುದಾರಿಕೆ' -ಇದು ಸ್ವಾತಂತ್ರ್ಯಪೂರ್ವ ಹಾಗೂ ಸ್ವಾತಂತ್ರ್ಯಾನಂತರದಲ್ಲಿ ಸರಕಾರದಿಂದ ನೇಮಕಗೊಂಡ ಬಂದಿಖಾನೆ ಸುಧಾರಣ ಸಮಿತಿ ಮತ್ತು ಆಯೋಗಗಳ ಬಗ್ಗೆ ಸಂಪೂರ್ಣ ಮಾಹಿತಿ ನೀಡುವುದಲ್ಲದೆ, ಕೈದಿಗಳ ಮನಪರಿವರ್ತನಾ ಕಾರ್ಯದ ಬಗ್ಗೆ ಅವು ತೋರಿಸಿದ್ದ ಆಸ್ಥೆ - ಶಿಫಾರಸ್ಸುಗಳ ಬಗ್ಗೆ ಕೂಲಂಕಷ ಚಿತ್ರಣವನ್ನು ನೀಡುತ್ತದೆ.

ಸಂಶೋಧನಾ ಪ್ರಬಂಧದ, ಏಳನೇ ಅಧ್ಯಾಯ 'ಕರ್ನಾಟಕದ ಬಂದಿಖಾನೆಗಳಲ್ಲಿರುವ ಕೈದಿಗಳು' (ಆರ್ಥಿಕ ಮತ್ತು ಸಾಮಾಜಿಕ ಹಿನ್ನೆಲೆ) ಅಪರಾಧಕ್ಕೆ ಕಾರಣವಾಗುವ ಅಂಶಗಳ ಬಗ್ಗೆ ವಿವರ ನೀಡುವುದಲ್ಲದೆ, ಕರ್ನಾಟಕದ ಬಂದಿಖಾನೆಗಳಲ್ಲಿರುವ ಕೈದಿಗಳ ಆರ್ಥಿಕ ಸ್ಥಿತಿ ಹಾಗೂ ಸಾಮಾಜಿಕ ಸ್ಥಿತಿಯ ಚಿತ್ರಣ ನೀಡುತ್ತದೆ ಹಾಗೂ ಉದ್ದೇಶರಹಿತವಾಗಿ ಭಾವೋದ್ವೇಗದಿಂದ ಅಪರಾಧಗಳು ಹೇಗೆ ಜನ್ಯವಾಗುತ್ತವೆ ಹಾಗೂ ಮನಪರಿವರ್ತನೆಯ ಅವಶ್ಯಕತೆ ಇವರಿಗೆ ಯಾಕಾಗಿ ಅಗತ್ಯ - ಎಂಬುದರ ಬಗ್ಗೆ ಅನೇಕ ಒಳನೋಟಗಳನ್ನೂ ನೀಡುತ್ತದೆ.

ಎಂಟನೆಯ ಅಧ್ಯಾಯ 'ಸಮಾರೋಪ'ವು ಈ ಅಧ್ಯಯನದಲ್ಲಿ ಕಂಡುಕೊಂಡ ಸತ್ಯಗಳನ್ನು, ಸಮಸ್ಯೆಗಳನ್ನು ಹಾಗೂ ಕೆಲವು ಸಲಹೆಗಳನ್ನು ಒಳಗೊಂಡಿದೆ.

❑ ❑

## ಅಡಿಟಿಪ್ಪಣಿ

೧. Nehru, Jawaharlal, 1995 (1946). The Discovery of India. New Delhi, OUP. Pp.1.

೨. Gandhi, M.K., 1929. My Jail Experience. Young India (February 9) Cited in All India Committee on Jail Reforms 1980-83. Pp. VI.

೩. ತೆಂಡುಲ್ಕರ್, ಡಿ.ಜಿ., ೧೯೭೫. ಮಹಾತ್ಮ, ಪ್ರಸಂ., ಎಚ್.ತಿಪ್ಪೇರುದ್ರಸ್ವಾಮಿ. ಮೈಸೂರು, ಮೈಸೂರು ವಿಶ್ವವಿದ್ಯಾಲಯ. ಪುಟ ೧೫೯-೧೬೦.

೪. Nehru, Jawaharlal, 1934. Prison Land. Cited in India and World. Pp. 126.

೫. Mulla, A.N., Chairman, 1983. All India Committee on Jail Reforms, 1980-83. Pp. VI.

## ೨

# ಅಪರಾಧ ಮತ್ತು ಶಿಕ್ಷೆ ನಡೆದು ಬಂದ ದಾರಿ

ಮನುಷ್ಯನು ಹುಟ್ಟುವಾಗ ಸ್ವತಂತ್ರ, ಮುಂದೆ ಬೆಳೆಯುತ್ತಿದ್ದಂತೆ ಆತ ಸಮಾಜದ ಹಲವು ನೀತಿ-ನಿಯಮಗಳ ಸಂಕೋಲೆಯಿಂದ ಬಿಗಿಯಲ್ಪಡುತ್ತಾನೆ - ಎಂಬ ತತ್ವಜ್ಞಾನಿ ರೂಸೋನ ಮಾತು ಸಾರ್ವಕಾಲಿಕ ಸತ್ಯ. ಯಾವುದೇ ಸಮಾಜ ಅಥವ ರಾಷ್ಟ್ರ ತನ್ನ ಸುರಕ್ಷೆ ಹಾಗೂ ಸರ್ವತೋಮುಖವಾದ ಆರೋಗ್ಯಕರ ಬೆಳವಣಿಗೆಗಾಗಿ, ಕಟ್ಟಿಕೊಂಡು ಪಾಲಿಸಿಕೊಂಡು ಬಂದಿರುವಂತಾ ನೀತಿ - ನಿಯಮ, ಕಟ್ಟಳೆ, ಶಾಸನ ಅಥವ ಕಾನೂನುಗಳನ್ನು ಮುರಿಯುವುದು, ನಿರ್ಲಕ್ಷಿಸುವುದು ಅಥವ ಪಾಲಿಸದೇ ಇರುವುದು ಅಪರಾಧವೆನಿಸುತ್ತದೆ.

ಮಾನವನು ಮೂಲತ ಸಮಾಜಜೀವಿ ಎಂದು ಖ್ಯಾತ ಗ್ರೀಕ್ ತತ್ತ್ವಜ್ಞಾನಿ ಅರಿಸ್ಟಾಟಲ್ ಹೇಳಿದ್ದಾನೆ. ಸಮಾಜ ನಿತ್ಯ ಪರಿವರ್ತನಶೀಲ ಹಾಗೂ ಚಲನಾತ್ಮಕವಾಗಿರುವುದರಿಂದ ಮಾನವ ಈ ಸಮಾಜದ ಪರಿವರ್ತನೆಗೆ ಹೊಂದಿಕೊಂಡು ಹೋಗಬೇಕಾದುದು ಅಗತ್ಯ. ತನ್ನ ಸುತ್ತಲ ಸಮಾಜದ ಮಾನವಜೀವಿಗಳೊಡನೆ ಸಾಮರಸ್ಯವುಳ್ಳ, ಮನುಷ್ಯತ್ವವುಳ್ಳ ಪರಸ್ಪರ ಸಂಬಂಧ ಏರ್ಪಟ್ಟಾಗಲೇ ಅದು ಸುಖೀ ಅಥವ ಆರೋಗ್ಯಕರ ಸಮಾಜವೆನಿಸುತ್ತದೆ.

ಈ ಸುಖೀ ಸಮಾಜಕ್ಕಾಗಿ - ಮಾನವ ಸಮಾಜದ ವಿಕಾಸದೊಂದಿಗೆ ಸಾಮಾಜಿಕ ಅವಶ್ಯಕತೆಯಾಗಿ ಮೂಡಿಬಂದ ಆಚಾರ-ವಿಚಾರ, ರೀತಿ - ರಿವಾಜುಗಳು ಮುಂದೆ ಸಂಪ್ರದಾಯಗಳಾಗಿ ಪ್ರಾದೇಶಿಕ ಧರ್ಮಗಳಾಗಿ ಹಾಗೆಯೇ ಯುಗ ಧರ್ಮಗಳಾಗಿ ರೂಪುಗೊಳ್ಳುತ್ತಾ ಬಂದವು. 'ಧರ್ಮ'ವೇ 'ನ್ಯಾಯ'ವೆಂಬ ಪ್ರಬಲ ನಂಬಿಕೆ ಪ್ರಾಚೀನರಲ್ಲಿ ಮೊಳೆತದ್ದು ಆಗಲೆ. ಧಾರ್ಮಿಕ, ಸಾಮಾಜಿಕ, ನೈತಿಕ ಮತ್ತು ನ್ಯಾಯಿಕ ನಿಯಮಗಳೆಲ್ಲವೂ ಆ ಕಾಲದಲ್ಲಿ ಬೇರೆ ಬೇರೆಯಾಗಿರದೆ ಆಚರಣಾ ಧರ್ಮವೆಂಬ ಒಂದೇ ಚೌಕಟ್ಟಿನಲ್ಲಿ ಸೇರಿದ್ದವು.[೧] ಈ ಸಂದರ್ಭದಲ್ಲಿ ಆ ಕಾಲಘಟ್ಟದ ಧಾರ್ಮಿಕ ಶಾಸ್ತ್ರಗಳ ಜತೆಗೆ ಆಗಿನ ನೀತಿಶಾಸ್ತ್ರ, ದರ್ಶನ ಶಾಸ್ತ್ರಗಳೂ ಆಯಾ ಸಮಾಜದ ಆದರ್ಶಗಳಿಗೆ ಬೆಳಕು ಬೀರಬಲ್ಲವಾದ್ದರಿಂದ ಅವು ಸಮಾಜದ ಜನಜೀವನವನ್ನು ರೂಪಿಸುವ, ಶಾಂತಿ - ಸುರಕ್ಷೆಯನ್ನು ಕಾಪಾಡಬಲ್ಲ ಶಾಸನಗಳಂತೆ ಕಾರ್ಯ ನಿರ್ವಹಿಸತೊಡಗಿದವು. ಗ್ರೀಕರ ನ್ಯಾಯವಾಗಲಿ, ರೋಮನ್ನರ ನ್ಯಾಯವಾಗಲಿ, ಹಿಂದೂ - ಇಸ್ಲಾಮಿ ನ್ಯಾಯವಾಗಲಿ ಶಾಸನಗಳ ರೂಪದಲ್ಲಿ ವಿಕಾಸಗೊಂಡಿದ್ದು ಹೀಗೆಯೇ.

ಪ್ರಾಚೀನ ಈಜಿಪ್ಟಿನ ದಿವ್ಯಫಾರೋ ನಿರ್ಮಿತ ಶಾಸನ, ಕ್ರಿ.ಪೂ. ೨೨೭೦ರ ಹಮ್ಮೂರಬಿಯ ಕ್ರೋಢೀಕೃತ ಶಾಸನ, ಮೋಸೆಸ್ ವಿಧಿಸಿದ ಶಾಸನ, ಹಿಟ್ಟೈಟು ಶಾಸನ, ಹಿಂದೂ ಶ್ರುತಿ ಧರ್ಮ ಸೂತ್ರಗಳು, 'ಸ್ಮೃತಿಗಳು, ವೇದಗಳೊಳಗಿನ ನ್ಯಾಯಿಕ ತತ್ತ್ವಗಳು ಸಮಾಜದ ಆರಂಭಿಕ ನ್ಯಾಯವ್ಯವಸ್ಥೆಗೆ ಒಂದು ಸ್ಥೂಲ ರೂಪವನ್ನು ಒದಗಿಸಿದ್ದು ಹೀಗೆ. ಅಂದಿನ ಸಮಾಜ ತಾನು ವಿಧಿಸಿದ್ದ ನಿಯಮ ನಿಬಂಧನೆಗಳನ್ನು ಮುರಿದವರನ್ನು ನೇರ ಅಪರಾಧಿ ಎಂದು ಪರಿಗಣಿಸಿ, ಪರಂಪರಾಗತವಾಗಿ ಸಾಗಿಬಂದ ಧಾರ್ಮಿಕ ನೀತಿ, ನ್ಯಾಯಸಂಹಿತೆಗಳಡಿ ಆ ಅಪರಾಧಿಯನ್ನು ವಿಚಾರಣೆಗೊಳಪಡಿಸಿ ಶಿಕ್ಷಿಸುವುದರ ಮೂಲಕ ಆ ಸಮಾಜದ ಸ್ವಾಸ್ಥ್ಯವನ್ನು ಕಾಪಾಡಿಕೊಂಡು ಬರುತ್ತಿತ್ತು.

ಜಗತ್ತಿನ ಅತಿ ಪ್ರಾಚೀನ ಎನ್ನಲಾದ ಈಜಿಪ್ಟಿನ ನ್ಯಾಯವ್ಯವಸ್ಥೆ ಅಥವ ಕಾನೂನು ಸಂಪೂರ್ಣವಾಗಿ ಧಾರ್ಮಿಕ ದೊರೆ ದಿವ್ಯ ಫಾರೋವಿನ ಹತೋಟಿಯಲ್ಲಿತ್ತು. ಆತ 'ಸತ್ಯಾಂಶ ತಿಳಿಯುವ ಪ್ರಾಮಾಣಿಕ ಪ್ರಯತ್ನವೆಂದು' ಇನ್ನೂ ಅಪರಾಧಿ ಎನಿಸದ ಕ್ರಿಮಿನಲ್ ಆರೋಪಿಗಳನ್ನು ಚಿತ್ರಹಿಂಸೆ ನೀಡಿ ಅಂಗವೈಕಲ್ಯವುನ್ನುಂಟುಮಾಡಿ ಸತ್ಯವನ್ನು ಹೊರಗೆಳೆಯಲು ಪ್ರಯತ್ನಿಸಿ, ಅಪರಾಧ ಸಾಬೀತಾದರೆ ನೀರಲ್ಲಿ ಮುಳುಗಿಸುವುದು, ಶೂಲಕ್ಕೇರಿಸುವುದು, ಸುಡುವುದು... ಇತ್ಯಾದಿ ಶಿಕ್ಷೆಯನ್ನು ವಿಧಿಸುತ್ತಿದ್ದ. ಕ್ರಿ.ಪೂ. ೨೨೭೦ ರ ಬೆಬಿಲೋನಿಯದ ಹಮ್ಮೂರಬಿಯ ಕಾಲದಲ್ಲೂ ಆತ ತನ್ನದೇ ಆದ ದೃಷ್ಟಿಕೋನವುಳ್ಳ ಧರ್ಮಾಧಾರಿತ ಶಾಸನಗಳನ್ನು ಸಮಾಜದಲ್ಲಿ ಹೇರಿ, ಹಲ್ಲಿಗೆ ಹಲ್ಲು, ಕಣ್ಣಿಗೆ ಕಣ್ಣು ಎಂಬ ಶಿಕ್ಷೆಯನ್ನು ಜಾರಿಗೆ ತಂದಿದ್ದ. ಆತನ ಶಾಸನದಲ್ಲಿ ಹದಿಹರೆಯದ ಬಾಲಕ ತಂದೆಯನ್ನು ಹೊಡೆದನೆಂದರೆ, ಅದು ದೇವರನ್ನು ಹೊಡೆದಂತೆಯೇ ಎಂದು ಭಾವಿಸಿ, ಶಾಸನದಲ್ಲಿ ವಿಧಿಸಿದಂತೆ ಹೊಡೆದ ಆ ಕೈಯನ್ನೇ ಕತ್ತರಿಸಲಾಗುತ್ತಿತ್ತು.'[೨] ಹಮ್ಮೂರಾಬಿಯ ಶಾಸನದಲ್ಲಿ ದೇವಸ್ಥಾನದ ಆಸ್ತಿ ಕದ್ದರೆ, ಕದ್ದವನಿಗೂ ಕದ್ದಮಾಲನ್ನು ಕೊಂಡವನಿಗೂ ಮರಣದಂಡನೆ ವಿಧಿಸಲಾಗುತ್ತಿತ್ತು. ಆದರೆ ಆತನ ಶಾಸನ ಧರ್ಮಪ್ರೇರಿತವಾಗಿದ್ದರೂ, ಆತ ಪುರೋಹಿತರ ಪ್ರಾಬಲ್ಯದಲ್ಲಿದ್ದ ನ್ಯಾಯವನ್ನು ಬಿಡಿಸಿಕೊಂಡ. ಈತನಿಗಿಂತಲೂ ಹಿಂದೆ ಪ್ರಚಲಿತದಲ್ಲಿದ್ದ ಪ್ರಾಚೀನ ಸುಮೇರ್ ನ್ಯಾಯದಲ್ಲಿ ಪುರೋಹಿತ ವರ್ಗವು ನ್ಯಾಯವನ್ನು ನೀಡುವ ವಿಶೇಷ ಅಧಿಕಾರವನ್ನು ಹೊಂದಿತ್ತು.[೩] ಆದರೆ ಈ ರೀತಿಯ ನ್ಯಾಯದಾನದಿಂದ ಸರ್ವರಿಗೂ ಸಮಾನ ನ್ಯಾಯ ಸಿಗಲಾರದು ಎಂದು ಹಮ್ಮೂರಬಿ ತೀರ್ಮಾನಿಸಿ, 'ಧರ್ಮಸಂಬಂಧವಿಲ್ಲದ ನ್ಯಾಯಾಧೀಶರಿಂದ ಕೂಡಿದ ಪೌರನ್ಯಾಯಾಲವನ್ನು ಸ್ಥಾಪಿಸಿ, ನ್ಯಾಯಾಧೀಶರು ಬಹಳ ಹೊಣೆಯುಳ್ಳವರೆಂದು ಭಾವಿಸಿದ್ದ ಆತ, ಅವರೇನಾದರೂ ದಾರಿ ತಪ್ಪಿದಲ್ಲಿ ಅಧಿಕಾರದಿಂದ ಇಳಿಸುವಷ್ಟು ನ್ಯಾಯನಿಷ್ಠುರನಾಗಿದ್ದ.

ಧರ್ಮಮೂಲವೇ ನ್ಯಾಯಮೂಲವೆಂದು ಪರಿಪಾಲಿಸುತ್ತಿದ್ದ ಕಾಲವದು. ಧರ್ಮಮೂಲವೇ ನ್ಯಾಯಮೂಲವೆಂದು ನಂಬಿದ್ದ ಪ್ರಾಚೀನ ಭಾರತೀಯ ಸಮಾಜದಲ್ಲೂ ವೇದಕಾಲದಷ್ಟು ಪೂರ್ವದಿಂದಲೇ ಅನೇಕ ನ್ಯಾಯಿಕ ತತ್ತ್ವಗಳು ರೂಪಗೊಂಡಿದ್ದವು. 'ಋಗ್ವೇದ ಸಂಹಿತೆ, ಐತರೇಯ, ತೈತರೇಯ, ಬ್ರಾಹ್ಮಣ, ಶತಪಥ ಬ್ರಾಹ್ಮಣ, ಅರಣ್ಯಕ ಮೊದಲಾದುವುಗಳಲ್ಲಿ ಅನೇಕ ಲೌಕಿಕ ನ್ಯಾಯದ ಅಂಶ ನಿರೂಪಿತವಾಗಿವೆ'. ಇವುಗಳಲ್ಲಿ ವಿವಾಹ, ದಾಂಪತ್ಯ, ಕ್ಷೇತ್ರಜಪುತ್ರ, ದತ್ತಕ, ದಾಯವಿಭಾಗ, ಜಾರತನ, ಜೂಜು, ಕಳ್ಳತನ, ವ್ಯಭಿಚಾರ'

ಮುಂತಾದ ಅನೇಕ ಅಪರಾಧ ವಿಷಯಗಳ ಬಗ್ಗೆ ನಿರೂಪಣೆಯಿದೆ.[೪] ಅಂದರೆ ಶ್ರುತಯುಗದ ಸಾಹಿತ್ಯ ಮಾಧ್ಯಮಗಳಾದ ವೇದ, ಬ್ರಾಹ್ಮಣ, ಅರಣ್ಯಕ, ಉಪನಿಷತ್ತು, ಗಾಥಾ, ಸೂತ್ರಗಳು ಆ ಯುಗದ ಅಂತ್ಯದ ಹೊತ್ತಿಗೆ ನ್ಯಾಯವ್ಯವಸ್ಥೆಯ ಒಂದು ಸ್ಥೂಲರೂಪವನ್ನು ಪಡೆದಿತ್ತು ಎಂದಾಯ್ತು. ಆ ಹೊತ್ತಿನ ಧರ್ಮಜ್ಞ ಸೂತ್ರಕಾರನಾದ ಆಪಸ್ತಂಭ, ಗೌತಮ, ಬೌಧಾಯನ, ವಸಿಷ್ಠ, ವಿಷ್ಣು, ವೃದ್ಧ ಹಾರೀತ ಮುಂತಾದವರು ತಮ್ಮ ಸೂತ್ರ ಸಾಹಿತ್ಯದಲ್ಲಿ ನ್ಯಾಯಿಕ ಅಂಶಗಳನ್ನು ಒಗ್ಗೂಡಿಸಿ ನ್ಯಾಯಾಡಳಿತದಲ್ಲಿ ಮುಖ್ಯ ಪಾತ್ರವಹಿಸಿದ್ದರು. ಈ ಧರ್ಮಸೂತ್ರಗಳಲ್ಲದೆ ಅನೇಕ ಸ್ಮೃತಿಗಳೂ ಹಿಂದೂ ನ್ಯಾಯತತ್ತ್ವದ ಬೆಳವಣಿಗೆಯಲ್ಲಿ ಮಹತ್ತರ ಪಾತ್ರ ವಹಿಸಿದ್ದವು. ಮನು, ಯಾಜ್ಞವಲ್ಕ್ಯ, ನಾರದ, ಬೃಹಸ್ಪತಿ, ಕಾತ್ಯಾಯನ ಮೊದಲಾದ ಅನೇಕ ಸ್ಮೃತಿಕಾರರು ತಮ್ಮ ಧರ್ಮ ಶಾಸ್ತ್ರಗಳಲ್ಲಿ ನ್ಯಾಯ ಪದ್ಧತಿ ಹಾಗೂ ದಂಡನೀತಿಗೆ ಭದ್ರವಾದ ಬುನಾದಿಯನ್ನು ನಿರ್ಮಿಸಿದ್ದರು. ಒಂದು ಸುವ್ಯವಸ್ಥಾ ಸಮಾಜದಲ್ಲಿ ಯಾವುದು ಅಪರಾಧ, ಯಾವುದಲ್ಲ ಎಂಬುದನ್ನು ನಿರ್ಧರಿಸುವುದರ ಜತೆಗೆ, ಯಾವ ಅಪರಾಧಕ್ಕೆ ಯಾವ ಶಿಕ್ಷೆ, ಎಂಬುದು ಕೂಡಾ ಈ ಧರ್ಮಶಾಸ್ತ್ರದಲ್ಲಿ ಸ್ಪಷ್ಟಗೊಂಡಿತ್ತು.

'ಕಳ್ಳತನ, ಹಲ್ಲೆ, ಜಾರತನ, ಅತ್ಯಾಚಾರ, ಕೊಲೆಯಂತಾ ಅಪರಾಧಗಳಿಗೆ ಮೊದಲು ಅಪರಾಧಿಯ ದೇಹ ದಂಡಿಸಿ, ಅನಂತರ ಅಪರಾಧಕ್ಕೆ ತುತ್ತಾದವರಿಗೆ ಅಥವ ಅವರ ಕುಟುಂಬ ವರ್ಗಕ್ಕೆ ಪರಿಹಾರ ಕೊಡಿಸಬೇಕು ಎಂದು ಮನು, ಯಾಜ್ಞವಲ್ಕ್ಯ, ಕಾತ್ಯಾಯನರು ತಮ್ಮ ಸ್ಮೃತಿಗಳಲ್ಲಿ ಹೇಳುತ್ತಾರೆ. ಧರ್ಮಶಾಸ್ತ್ರಜ್ಞ ಕಾಮಂದಕ ಕೂಡಾ ತನ್ನ ಧರ್ಮಶಾಸ್ತ್ರದಲ್ಲಿ ಮನುಷ್ಯನ ಮನೋಪ್ರಕೃತಿಗನುಗುಣವಾಗಿ ಅಪರಾಧಕ್ಕೆ ತಕ್ಕ 'ದಂಡ' ಬಳಸುವ ಅಗತ್ಯವನ್ನು ಎತ್ತಿಹಿಡಿದಿದ್ದಾನೆ. 'ದೊಡ್ಡ ಮೀನು, ಸಣ್ಣಮೀನನ್ನು ಕಬಳಿಸುವ ಸಂದರ್ಭದಲ್ಲಿ ರಾಜನು ಅಸಹಾಯಕರು ಮತ್ತು ದುರ್ಬಲರನ್ನು ಮೇಲೆತ್ತಲು ಈ 'ದಂಡ' ಬಳಸಬೇಕೆಂದು ಕಾಮಂದಕ ಸೂಚಿಸುತ್ತಾನೆ.'[೫] ವಿಷವಿಡುವವರು, ಕೈಯಲ್ಲಿ ಸದಾ ಮಾರಕಾಸ್ತ್ರಗಳನ್ನು ಹಿಡಿದುಕೊಂಡು ಅಪಾಯಕಾರಿಯಾಗಿರುವವರು, ದ್ರವ್ಯ ಹೊಲಮನೆ ಹೆಂಗಸರನ್ನು ಅಪಹರಿಸುವವರು ಘೋರ ಕಂಟಕರು. ಅವರು ಎಲ್ಲಿಯೇ ಇರಲಿ ಹಿಡಿದು ತಂದು ಮರಣದಂಡನೆ ವಿಧಿಸಬೇಕೆಂದು ಮನು ತನ್ನ ಸ್ಮೃತಿಯಲ್ಲಿ ಉಲ್ಲೇಖಿಸಿದ್ದಾನೆ.

ಈ ಧರ್ಮಶಾಸ್ತ್ರಜ್ಞರು ಅಪಚಾರ, ಚೌರ್ಯ, ನಿಂದೆ, ಮಾನಹಾನಿ, ಹತ್ಯೆ, ವಿತ್ತಾಪಹಾರ, ಗರ್ಭಪಾತ, ಸ್ತ್ರೀಹತ್ಯೆ, ರಾಜದ್ರೋಹ, ಪಿತೂರಿ, ದಂಗೆ ಮುಂತಾದ ಕೃತ್ಯಗಳನ್ನು ಹೀನಾಪರಾಧವೆಂದು ಪರಿಗಣಿಸಿ ಉಗ್ರದಂಡನೆಗಳನ್ನು ಸೂಚಿಸಿದ್ದರೂ, ಈ ಎಲ್ಲ ಅಪರಾಧಗಳ ಸಂದರ್ಭದಲ್ಲಿ ಸ್ತ್ರೀಯರಿಗೆ ಪುರುಷರ ಅರ್ಧದಷ್ಟು ಮಾತ್ರ ದಂಡನೆಯನ್ನು ವಿಧಿಸಬೇಕೆಂದು ಸ್ಪಷ್ಟವಾಗಿ ಸೂಚಿಸಿದ್ದಾರೆ.

ದಂಡನ ನೀತಿಯಲ್ಲಿ ಯಾಜ್ಞವಲ್ಕ್ಯರು, ನಾರದರು ಮತ್ತು ಕಾತ್ಯಾಯನರು ಸ್ತ್ರೀಯರಿಗೆ, ಮಕ್ಕಳಿಗೆ, ವೃದ್ಧ ನಿರ್ಗತಿಕರಿಗೆ, ಅವರ ಅಸಹಾಯಕತೆ ದುರ್ಬಲತೆ ಮೇಲೆ ಅನುಕಂಪ ತೋರಿ ಶಿಕ್ಷೆ ವಿಧಿಸುವಂತೆ ಸೂಚಿಸಿದ್ದಾರೆ. ಪುರುಷನಿಗೆ ಮರಣದಂಡನೆ ವಿಧಿಸುವಂತಾ ಕೃತ್ಯವನ್ನು ಸ್ತ್ರೀ ಮಾಡಿದ್ದರೆ ಆಕೆಯ ಅಂಗವಿಚ್ಛೇದನ ಮಾಡಿದರೆ ಸಾಕು ಎಂದು ಕಾತ್ಯಾಯನರು ತನ್ನ ಶಾಸ್ತ್ರದಲ್ಲಿ ಉಲ್ಲೇಖಿಸಿದ್ದಾರೆ.[೬] ಗುರುಪತ್ನಿ ಸಹವಾಸ, ಸುರಪಾನ, ಕಳ್ಳತನ, ಬ್ರಾಹ್ಮಣನ ಹತ್ಯೆ ಮಾಡುವುದು ಮಹಾಪರಾಧ. ಹಾಗೆ ಮಾಡಿದವನ ಹಣೆಯ ಮೇಲೆ ಸ್ತ್ರೀಯೋನಿ, ಮಧ್ಯದಂಗಡಿ, ನಾಯಿಕಾಲು, ರುಂಡವಿಲ್ಲದ ಮುಂಡ ಇವುಗಳ ಸಂಕೇತಾಕ್ಷರಗಳ ಬರೆ ಹಾಕಿಸಬೇಕೆಂದು ಯಾಜ್ಞವಲ್ಕ್ಯರ ಸೂಚನೆ.

ಒಟ್ಟಿನಲ್ಲಿ ಈ ಎಲ್ಲ ಧರ್ಮಶಾಸ್ತ್ರ ಪ್ರೇರಿತ ನ್ಯಾಯಿಕ ತತ್ತ್ವಗಳು, ಪ್ರತಿಪಾದಿಸುತ್ತಿದ್ದುದು ಯಾವುದೇ ಅಪರಾಧದ ಉದ್ದೇಶ, ಸ್ವರೂಪ, ಅಪರಾಧಿಯ ವಯಸ್ಸು, ಶಕ್ತಿ ಸಾಮರ್ಥ್ಯ, ವರ್ಗ, ನಡತೆ, ವಿದ್ಯಾರ್ಹತೆ ಮತ್ತು ಆರ್ಥಿಕ ಸ್ಥಿತಿಗನುಗುಣವಾಗಿ ನ್ಯಾಯ ಮತ್ತು ದಂಡನೆಯನ್ನು ವಿಧಿಸಬೇಕು ಎಂದು. ಆದರೆ ಈ ನ್ಯಾಯ - ದಂಡನಾ ನೀತಿಯಲ್ಲಿ ಉಚ್ಚ - ನೀಚ ಭಾವನೆಯ ತಾರತಮ್ಯ ಇದೆ ಎಂಬ ಆರೋಪ ಇದೆಯಾದರೂ, ಹಿಂದೂ ಧರ್ಮದ ನಂತರದಲ್ಲಿನ ಬೌದ್ಧಧರ್ಮ ಪ್ರಾಬ್ಯಲ್ಯದಲ್ಲೂ ಅದು ಹಿಂದೂ ನ್ಯಾಯವನ್ನೇ ಅನುಸರಿಸತೊಡಗಿತ್ತಲ್ಲದೆ, ಅದು ಬರ್ಮಾ, ಜಾವಾ, ಬಾಲಿ, ಸಯಾಮ ದ್ವೀಪಗಳಲ್ಲಿ ಬಲು ಪ್ರಚಲಿತಗೊಂಡಿತು. 'ಅಲ್ಲಿ ಮನುಸ್ಮೃತಿಯನ್ನು ಧರ್ಮಶಾಸ್ತ್ರವನ್ನಾಗಿ ಅಂಗೀಕರಿಸಿ ಅದನ್ನು 'ದಮ್ಮಸತ್ತ', 'ದಮ್ಮಥಟ್ ' ಮೊದಲಾದ ಹೆಸರಿನಿಂದ ಆಯಾ ದೇಶದ ಭಾಷೆಗೆ ಅನುವಾದ ಮಾಡಲಾಯಿತು.[೭] '

ಮುಂದೆ ಭಾರತವನ್ನು ಬಹಳಷ್ಟು ಕಾಲ ಆಳಿದ ದಿಲ್ಲಿಸುಲ್ತಾನರು, ಔಧ್‌ನವಾಬರು, ಆದಿಲ್‌ಶಾಹಿ, ನಿಜಾಮಶಾಹಿ, ಕುತುಬ್‌ಶಾಹಿ, ಅರ್ಕಾಟ್ ನವಾಬ್, ಹೈದರಾಲಿ - ಟಿಪ್ಪು ಇವರೆಲ್ಲರೂ ಈ ಹಿಂದೂ ಧರ್ಮಶಾಸ್ತ್ರಾಧಾರಿತ ನ್ಯಾಯವ್ಯವಸ್ಥೆಯತ್ತ ಹೊರಳದೆ ತಮ್ಮದೇ ಆದ ಇಸ್ಲಾಮಿ ಧರ್ಮಶಾಸ್ತ್ರಪ್ರೇರಿತ ನ್ಯಾಯ ವ್ಯವಸ್ಥೆಯನ್ನು ಅನುಸರಿಸಿದರು. ಮೊಗಲರ ಕಾಲದ ದಿವಾನೀ ಅದಾಲತ್, ಫೌಜ್ದಾರೀ ಅದಾಲತ್ ನ್ಯಾಯವ್ಯವಸ್ಥೆ, ಇಸ್ಲಾಮಿ ದಂಡನಾ ನೀತಿ ಭಾರತದಲ್ಲಿ ಪ್ರಚಲಿತವಾಗಿತ್ತು.

ಪ್ರಾಚೀನ ಭಾರತೀಯ ಸಮಾಜಕ್ಕೆ ನ್ಯಾಯ, ದಂಡನಾನೀತಿ ಹಾಗೂ ಅದರ ಮಹತ್ವದ ಬಗ್ಗೆ ಸ್ಪಷ್ಟ ಅರಿವಿತ್ತು. ಕಾಲ ಉರುಳಿದಂತೆ ವಿಭಿನ್ನ ಸಂಘರ್ಷ ವ್ಯವಸ್ಥೆ - ಸಮಸ್ಯೆಯನ್ನು ಹೊಂದಿದ್ದ ಆ ಸಮಾಜ ವಿಕಾಸದ ಹಾದಿಯನ್ನು ಕ್ರಮಿಸಿತು. ಅಂದಿನ ಸಾಮಾಜಿಕ ಮೌಲ್ಯ, ನಂಬಿಕೆ, ಪದ್ಧತಿ, ಸಂಪ್ರದಾಯ, ಆಲೋಚನಾ ಕ್ರಮಗಳು ಒಟ್ಟಾರೆ ಬದಲಾಗಿ, ಬದುಕುವ ರೀತಿಯಲ್ಲೆ ಮಹತ್ತರ ಬದಲಾವಣೆಗಳಾಗಿ ಆಧುನಿಕ ಚಿಂತನೆ, ವಿಚಾರ, ವೈಚಾರಿಕ ಮನೋಭಾವಗಳು ಮೊಳೆಯತೊಡಗಿದ್ದವು.

ನೂರಾರು ವರ್ಷಗಳ ಕಾಲ ರೂಢಿ ಪದ್ಧತಿಯಲ್ಲಿ ಸಾಗಿ ಬರುತ್ತಾ ಒಂದು ನೈತಿಕ ಆಧಾರವನ್ನು ಪಡೆದ ಪ್ರಾಚೀನ ಸಮಾಜದ ಅಪರಾಧ ಕಾನೂನುಗಳು, ಸಮಾಜ ಆಧುನಿಕಗೊಳ್ಳುತ್ತಿದ್ದಂತೆ ಇನ್ನಷ್ಟು ನವೀಕೃತಗೊಂಡು ಹೊಸ ರೂಪವನ್ನು ಪಡೆದುಕೊಂಡವು. ನ್ಯಾಯಿಕ ಕಾನೂನು ಹೊಸ ರೂಪ ಪಡೆಯುತ್ತಿದ್ದಂತೆ ಅಪರಾಧಗಳು ಕೂಡಾ ಹೊಸ ರೂಪವನ್ನು ಪಡೆದುಕೊಳ್ಳತೊಡಗಿದವು. ಪ್ರಾಚೀನ ಸಮಾಜದಲ್ಲಿದ್ದ ಅಪರಾಧಕ್ಕೆ 'ಸೈತಾನನ ಪ್ರೇರಣೆ' (Demonistic) ಕಾರಣ ಎಂಬ ತೀರಾ ಪ್ರಾಚೀನ ಸಿದ್ಧಾಂತದಿಂದ, ಇದೀಗ ಆಧುನಿಕ ಸಮಾಜ ಅಪರಾಧವನ್ನು ಮನಃಶಾಸ್ತ್ರ, ಸಮಾಜ ವಿಜ್ಞಾನ, ಸಮಾಜವಾದ, ಜೈವಿಕ ಮಾನವಶಾಸ್ತ್ರದ ಸೈದ್ಧಾಂತಿಕ ತಕ್ಕಡಿಯಲ್ಲಿಟ್ಟು ತೂಗಿ ವಿಶ್ಲೇಷಿಸುವ ಮಟ್ಟಕ್ಕೆ ಬೆಳೆದು ನಿಂತಿದೆ.

ಈ ಎಲ್ಲ ಸೈದ್ಧಾಂತಿಕ ವಿಶ್ಲೇಷಣೆ, ವಿಚಾರಗಳ ಫಲವೇ ಸಮಾಜಶಾಸ್ತ್ರದ ಅಂಗವಾಗಿ 'ಅಪರಾಧ ಶಾಸ್ತ್ರ' ವೆಂಬ ಪ್ರತ್ಯೇಕ ಶಾಸ್ತ್ರವೊಂದು ಬೆಳೆದುಬರಲು ಸಾಧ್ಯವಾಗಿದೆ. ಅಪರಾಧ ಶಾಸ್ತ್ರದ ಬೆಳವಣಿಗೆಯೊಂದಿಗೆ 'ಅಪರಾಧ' ಪರಿಕಲ್ಪನೆಯೆ ಬದಲಾಯಿತು. ಧರ್ಮಸಮ್ಮತಿ ಯಲ್ಲದ ಕೃತ್ಯವದು ಎಂಬುದರ ಬದಲಿಗೆ, ಕಾನೂನಿನ ದೃಷ್ಟಿಯಲ್ಲಿ

ಯಾವುದೇ ವ್ಯಕ್ತಿಯು ಯಾವುದೇ ಕಾರ್ಯವನ್ನು ಕೈಗೊಳ್ಳುವುದರಿಂದ ಅಥವ ಬಿಡುವುದರಿಂದ ಶಾಸನ ಭಂಗವಾಗಿ ಅಪರಾಧ ಕಾನೂನಿನನ್ವಯ (Criminal Law) ದಂಡನೆಗೆ ಯಾ ಶಿಕ್ಷೆಗೆ ಗುರಿಯಾಗುವ ಎಲ್ಲ ಕೃತ್ಯಗಳು 'ಅಪರಾಧ'ವೆಂದು ಪರಿಗಣಿತವಾಗುತ್ತವೆ. ಕಾನೂನು ಉಲ್ಲಂಘಿಸಿ ಅಪರಾಧವೆಸಗಿದ ವ್ಯಕ್ತಿಗೆ ದಂಡ ಸಂಹಿತೆಯ ಅನುಗುಣವಾಗಿ ಶಿಕ್ಷೆ ವಿಧಿಸಲಾಗುತ್ತದೆ.

ಈ ಶಿಕ್ಷೆ ವಿಧಿಸುವುದರ ಹಿಂದಿರುವ ಚಿಂತನೆಯೆಂದರೆ ಕಾನೂನು ಕಟ್ಟಳೆಗಳನ್ನು ಮುರಿದು ಅಪರಾಧಿ ಎಂದು ಸಾಬೀತಾದ ವ್ಯಕ್ತಿಗೆ, ಆತನ ಅಪರಾಧದ ತೀವ್ರತೆಯನ್ನು ಪರಿಗಣಿಸಿ, ಆತನಿಗೆ ಶಾರೀರಿಕ ಅಥವ ಮಾನಸಿಕ ನೋವನ್ನುಂಟುಮಾಡುವುದು ಅಥವ ಆರ್ಥಿಕ ಹೊರೆಯಾಗುವಂತಹ ದಂಡವನ್ನು ವಿಧಿಸುವುದು. ಅಂದರೆ ಶಿಕ್ಷೆ ಅಪರಾಧಕ್ಕೆ ಕಾನೂನು ವ್ಯವಸ್ಥೆ ತೆಗೆದುಕೊಳ್ಳುವ ಕಾನೂನು ಕ್ರಮ ಎಂದಾಗುತ್ತದೆ. ಆದರೆ ಗ್ರೀನ್ ಹಟ್ಸ್ ಅವರ ಪ್ರಕಾರ 'ಶಿಕ್ಷೆ' ಎಂದರೆ ಅಪರಾಧಕ್ಕೆ ಪ್ರತೀಕಾರವನ್ನು ತೆಗೆದುಕೊಳ್ಳುವುದರ ಬದಲಿಗೆ ಅದು ಅಪರಾಧವನ್ನು ನಿಯಂತ್ರಿಸುವ ಸಾಧನ ಅಥವ ಮಾರ್ಗವಾಗಬೇಕು; ಹಾಗೆಯೇ ಅದು ಅಪರಾಧಿಗೆ ಹೊಸ ಜೀವನ ನಡೆಸಲು ಉತ್ತಮ ಅವಕಾಶವನ್ನು ಕಲ್ಪಿಸಬೇಕು ಎಂಬುದಾಗಿದೆ.

ಅಪರಾಧ ಶಾಸ್ತ್ರದ ಪ್ರಕಾರ ಯಾವುದೇ ದೇಶದ ಅಥವ ಯಾವುದೇ ರೂಪದ ಶಿಕ್ಷೆಯ ಹಿಂದಿರುವ ಪ್ರಮುಖ ಉದ್ದೇಶವೆಂದರೆ

೧. ಅನುಭವಿಸುವ ಶಿಕ್ಷೆಯ ಮೂಲಕ ಅಪರಾಧಿ ತನ್ನಿಂದ ಘಟಿಸಿದ ಅಪರಾಧದ ಬಗ್ಗೆ ಪಶ್ಚಾತ್ತಾಪ ಪಡುವಂತೆ ಮಾಡುವುದು.

೨. ಶಿಕ್ಷೆಯ ಮೂಲಕ ಸಮಾಜದ ಕಾನೂನು ಕಟ್ಟಳೆಗಳನ್ನು ರಕ್ಷಿಸುವುದು.

೩. ಮುಂದೆ ಅಪರಾಧ ಮಾಡದಂತೆ ತಡೆಯುವುದು.

೪. ಹಾಗೂ ಒಬ್ಬನನ್ನು ಆತನ ಅಪರಾಧಕ್ಕೆ ಶಿಕ್ಷಿಸುವ ಮೂಲಕ ಸಮಾಜದ ಇತರರು ಆ ಶಿಕ್ಷೆಯಿಂದ ಭಯಗೊಂಡು ಅಪರಾಧ ಕೃತ್ಯಕ್ಕೆ ತೊಡಗದಂತೆ ತಡೆಯುವುದು.

ಪುರಾತನ ನ್ಯಾಯಪದ್ಧತಿಯಲ್ಲೂ ದಂಡನೆಯ ಮುಖ್ಯ ಉದ್ದೇಶವೆಂದರೆ ಅಪರಾಧವನ್ನು ತಡೆಗಟ್ಟುವುದೇ ವಿನಾ ಸೇಡುತೀರಿಸಿಕೊಳ್ಳುವುದಲ್ಲ. ಅದೊಂದು ಸಮಾಜ ಸಂರಕ್ಷಣೆಯ ಸಾಧನವಾಗಿದ್ದು, ಶಿಕ್ಷೆಯ ಮೌಲ್ಯ ಅಡಗಿರುವುದು - ಸಮಾಜ ಕಲ್ಯಾಣಕ್ಕೆ ಆ ಶಿಕ್ಷೆ ಎಷ್ಟು ಮಟ್ಟಿಗೆ ಪೋಷಕವಾಗಬಲ್ಲದು ಎಂಬುದರ ಮೂಲಕ.

ನಮ್ಮ ಪ್ರಾಚೀನ ಭಾರತದಲ್ಲಂತೂ ಸಮಾಜ ಸಂರಕ್ಷಣೆ ಹಾಗೂ ಅಪರಾಧ ತಡೆಯನ್ನು ಗಮನದಲ್ಲಿರಿಸಿಕೊಂಡು ಶಿಕ್ಷೆ ವಿಧಿಸಲಾಗುತ್ತಿತ್ತು ಎಂದು ಸ್ಮೃತಿಗಳಿಂದ ತಿಳಿದು ಬರುತ್ತಿದೆ. ಜಾರತನದ ಸಂದರ್ಭದಲ್ಲಿ ಸವರ್ಣ ಸ್ತ್ರೀಯಾಗಿದ್ದರೆ ಆಕೆಗೆ ಅತ್ಯಧಿಕ ದಂಡ (೫೦೦ ರಿಂದ ೧೦೦೦ ಪಣ); ಗಂಡು ಉತ್ತಮ ವರ್ಣದವನಾಗಿದ್ದರೆ ಮಧ್ಯಮ ದಂಡ (೨೦೦ ರಿಂದ ೫೦೦ ಪಣ); ಗಂಡು ಕೆಳವರ್ಗದವನಾಗಿದ್ದರೆ ಆತನಿಗೆ ಮರಣದಂಡನೆ ಮತ್ತು ಆ ಹೆಂಗಸಿನ ಕಿವಿಗಳನ್ನು ಕೊಯ್ಯಬೇಕೆಂದು ಯಾಜ್ಞವಲ್ಕ್ಯರು ತಮ್ಮ ಸ್ಮೃತಿಯಲ್ಲಿ

ವಿಧಿಸಿದ್ದಾರೆ. ಹಾಗೆಯೇ ಮನುಸ್ಮೃತಿ ಹೇಳುತ್ತದೆ - ಇಂಥಾ ಶಿಕ್ಷೆಗೆ ಒಳಗಾದವರನ್ನು ಯಾತನೆಯನ್ನುಂಟು ಮಾಡುವಂತೆ ದೇಹದಂಡನೆಯ ಶಿಕ್ಷೆಯನ್ನು ನೀಡಿ ಕಾರಾಗೃಹದಲ್ಲಿ ಬಂದಿಸಿಟ್ಟು ಹೊಡೆದು, ಬಡಿದು, ಸಂಕೋಲೆ ತೊಡಿಸಿ, ತಲೆಬೋಳಿಸಿ, ಈತ ಅಪರಾಧಿಯೆಂದು ಊರೆಲ್ಲ ಡಂಗುರ ಹೊಡೆಸಿ, ಕತ್ತೆಯ ಮೇಲೆ ಊರೆಲ್ಲ ಮೆರೆಸಿ, ಆತನ ಹಣೆಯ ಮೇಲೆ ಅಪರಾಧದ ಸಂಕೇತಾಕ್ಷರಗಳ ಬರೆ ಹಾಕಬೇಕು. ಶೂದ್ರ, ವೈಶ್ಯ, ಕ್ಷತ್ರಿಯ ವರ್ಗದ ಅಪರಾಧಿಗಳಿಗೆ ದೇಹದ ಹತ್ತು ಭಾಗಗಳಲ್ಲಿ, ಅಂದರೆ ಗುಪ್ತಾಂಗ, ಹೊಟ್ಟೆ, ನಾಲಿಗೆ, ಕೈಗಳು, ಅಡಿ, ಕಣ್ಣು, ಮೂಗು, ಮೊದಲಾದ ಅಂಗಗಳನ್ನು ಛೇದಿಸಿ ಅಥವ ಬರೆ ಹಾಕುವ ಮೂಲಕ ದಂಡಿಸಿ, ಅವರ ಸಂಪತ್ತನ್ನೆಲ್ಲ ಹರಣ ಮಾಡಿ ಊರು ಬಿಟ್ಟೋಡಿಸಬೇಕು. ಆದರೆ ಇದೇ ಅಪರಾಧಗೈದ ಬ್ರಾಹ್ಮಣನಿಗೆ ಮಾತ್ರ ಇದ್ಯಾವುದೇ ರೀತಿಯ ದೇಹದಂಡನೆ ವಿಧಿಸಕೂಡದು. ಬರಿ ಆತನ ತಲೆಬೋಳಿಸಿ ದೇಶದಿಂದ ಹೊರತಳ್ಳಬೇಕೆಂದು ಮನು, ಗೌತಮ, ಕಾತ್ಯಾಯನ, ವಸಿಷ್ಠ, ಯಾಜ್ಞವಲ್ಕ್ಯ, ಬೃಹಸ್ಪತಿ, ವಿಷ್ಣು, ವೃದ್ಧಹಾರೀತ ಸ್ಪಷ್ಟ ಪಡಿಸಿದ್ದಾರೆ. ಆದರೆ ಈ ನ್ಯಾಯವಿತರಣೆಯಲ್ಲಿ ಉಚ್ಚ - ನೀಚ ಭಾವನೆಯ ತಾರತಮ್ಯವಿರುವುದರಿಂದ ನಾರದ ಸ್ಮೃತಿಯಲ್ಲಿ ನಾರದರು, ಅಪರಾಧಿ 'ಬ್ರಾಹ್ಮಣನಾದರೂ ಚಿಂತೆಯಿಲ್ಲ ಆತನ ಹಣೆಯ ಮೇಲೆ ಘೋರಾಪರಾಧಿ ಎಂಬ ಸಂಕೇತಾಕ್ಷರದ ಬರೆ ಹಾಕಿ, ಕತ್ತೆಯ ಮೇಲೆ ಕೂರಿಸಿ ಊರೆಲ್ಲ ಮೆರೆಸಬೇಕು -ಎಂಬ ಶಿಕ್ಷೆ ವಿಧಿಸಿದ್ದಾರೆ. ಹಾಗೆಯೆ ಕೌಟಿಲ್ಯನು, ವೇಶ್ಯೆಯೊಂದಿಗೆ ಆಕೆಯ ಇಚ್ಛೆಗೆ ವಿರುದ್ಧವಾಗಿ ಬಲತ್ಕಾರ ಮಾಡುವವನಿಗೆ ಉಗ್ರ ದಂಡ ವಿಧಿಸಬೇಕೆಂದು ಹೇಳುತ್ತಾನೆ.[೮]

ಪ್ರಾಚೀನ ಭಾರತದಲ್ಲಿದ್ದ ದಂಡನಾನೀತಿಯ ನಾಲ್ಕು ವಿಧಗಳನ್ನು ವಸಿಷ್ಠ, ಬೃಹಸ್ಪತಿ, ವೃದ್ಧಹಾರೀತರು ತಮ್ಮ ಶಾಸ್ತ್ರಗಳಲ್ಲಿ ಉಲ್ಲೇಖಿಸಿದ್ದಾರೆ. ಅವು ೧. ಸೌಮ್ಯ ಎಚ್ಚರಿಕೆ ೨. ಬಹಿಷ್ಕಾರ ೩. ದಂಡ ೪. ದೇಹದಂಡನೆ. ದಾಸರಾದ ವಿಜಯದಾಸರು ಹೇಳುವ 'ಶಿಶುಗಳಪರಾಧಕ್ಕೆ ನಯನದಂಜಿಕೆ ಶಿಕ್ಷೆ' ಎಂಬ ಮಾತು 'ಸೌಮ್ಯ ಎಚ್ಚರಿಕೆಯ' ರೂಪ. ಅದು ಸಾಲದಾದಾಗ ಬಹಿಷ್ಕಾರ ಮತ್ತು ಶುಲ್ಕರೂಪದ ದಂಡವಿಧಾನ ಜಾರಿ ಮಾಡಬೇಕು, ಅದೂ ಸಾಲದ ಮಹಾಪಾತಕಿಗಳಿಗೆ ದೇಹದಂಡನೆ ವಿಧಿಸಬೇಕೆಂದು ಬೃಹಸ್ಪತಿ ತನ್ನ ಸ್ಮೃತಿಯಲ್ಲಿ ಉಲ್ಲೇಖಿಸುತ್ತಾನೆ.

ಇಂದಿನ ಆಧುನಿಕ ಸಮಾಜದ ನಾಯತತ್ತ್ವ, ನ್ಯಾಯಾಡಳಿತ, ದಂಡನೀತಿಯನ್ನು ಸೂಕ್ಷ್ಮವಾಗಿ ಅವಲೋಕಿಸಿದರೆ ಇದರಲ್ಲಿನ ಹೆಚ್ಚಿನ ಅಂಶಗಳು ಚಿಂತನೆಗಳು, ಪ್ರಾಚೀನ ಭಾರತದ ಧರ್ಮಶಾಸ್ತ್ರಗಳಲ್ಲಿ ಅಡಕವಾದ ನ್ಯಾಯ ವಿತರಣಾದೃಷ್ಟಿ, ಸಮಾಜ ಸಂರಕ್ಷಣಾ ದೃಷ್ಟಿಕೋನಗಳಿಂದಲೇ ವಿಕಾಸ ಹೊಂದಿರುವುದು ಸ್ಪಷ್ಟವಾಗುತ್ತದೆ. ಭಾರತೀಯ ಧರ್ಮಶಾಸ್ತ್ರವನ್ನು ಆಧರಿಸಿದ್ದ ಹಿಂದೂ ನ್ಯಾಯಾಡಳಿತ ಅಥವ ಹಿಂದೂ ನ್ಯಾಯಪದ್ಧತಿ ಮಹಮ್ಮದೀಯರ ಆಡಳಿತ ಕಾಲದಲ್ಲಿ ಕ್ರಮೇಣ ಮಾಯವಾದವು. ಹಿಂದೂ ನ್ಯಾಯದ ಕಡೆ ಹೆಚ್ಚು ಒಲವನ್ನು ತೋರಿದ್ದ ಅಕ್ಬರ ಬಾದಶಹನೇ ಬಲವಂತದ ಹಿಂದೂ 'ಸತೀ ಪದ್ಧತಿ' ಹಾಗೂ ಕಠೋರವಾದ 'ದಿವ್ಯ' ಪದ್ಧತಿಗಳನ್ನು ತೆಗೆದು ಹಾಕಲು ಪ್ರಯತ್ನಿಸಿದ್ದ.

ಭಾರತದಲ್ಲಿ ಮಹಮ್ಮದೀಯರ ರಾಜ್ಯಭಾರದ ಅಟ್ಟಹಾಸ ಮುಗಿಯುತ್ತಿದ್ದಂತೆ, ಹದಿನೇಳನೇ ಶತಮಾನದಲ್ಲಿ ಕಂಪನಿ ಆಡಳಿತ ಭಾರತಕ್ಕೆ ಕಾಲಿಟ್ಟಾಗಿನಿಂದ ನ್ಯಾಯವ್ಯವಸ್ಥೆಯಲ್ಲಿ ಅನೇಕ ಮಾರ್ಪಾಡುಗಳಾದವು.

ಕಂಪನಿ ನ್ಯಾಯಾಲಯ, ಮೇಯರ್ ನ್ಯಾಯಾಲಯ, ಅಡ್ಮಿರ್ಯಾಲಿಟಿ ಉಚ್ಚನ್ಯಾಯಾಲಯ, ಉಚ್ಛ ನ್ಯಾಯಾಲಯ, ಅತ್ಯುನ್ನತ ಮಟ್ಟದ ಫೆಡರಲ್ ಕೋರ್ಟುಗಳು ರೂಪತಾಳಿ ಆಂಗ್ಲ ಪದ್ಧತಿಯ ನ್ಯಾಯವ್ಯವಸ್ಥೆ ಜಾರಿಗೆ ಬಂತು. ಇಂಗ್ಲೆಂಡಿನ 'ಕಾಮನ್ ಲಾ' ಪದ್ಧತಿ ಭಾರತದಲ್ಲಿ ಜಾರಿಗೆ ಬಂದು, ಆಂಗ್ಲ ನ್ಯಾಯಾಧೀಶರು ಹಿಂದೂಗಳ ನ್ಯಾಯ ವಿವಾದಗಳನ್ನು ಧರ್ಮಶಾಸ್ತ್ರ ಪಂಡಿತರ ನೆರವಿನಿಂದಲೂ, ಮಹಮ್ಮದೀಯರ ವಿವಾದಗಳನ್ನು ಮೌಲ್ವಿಯವರ ನೆರವಿನಿಂದಲೂ ತೀರ್ಮಾನಿಸತೊಡಗಿದರು. ಧರ್ಮಶಾಸ್ತ್ರ, ಕುರಾನ್ ಮುಂತಾದುವುಗಳು ಆಂಗ್ಲರಿಂದಾಗಿ ಭಾಷಾಂತರಗೊಂಡವು. ಹಿಂದೂ ಜೈಮಿನಿ ಮೀಮಾಂಸಾ ಸೂತ್ರಗಳನ್ನು ಆಧರಿಸಿ ತೀರ್ಮಾನಗಳು ನಡೆಯಲ್ಪಟ್ಟವು. ಇಂಗ್ಲೆಂಡಿನಲ್ಲಿದ್ದ ಪ್ರಿವಿ ಕೌನ್ಸಿಲ್ ಅನೇಕ ಭಾರತೀಯ ವಿವಾದಗಳಿಗೆ ಅತ್ಯುಚ್ಛ ಅಪೀಲು ನ್ಯಾಯಾಲಯವಾಗಿತ್ತು.

ಮುಂದೆ ಲಾರ್ಡ್ ಮೆಕಾಲೆಯಂತಾ ಕಾನೂನು ತಜ್ಞರ ನೆರವಿನಿಂದ ಇಡೀ ಭಾರತಕ್ಕೆ ಅನ್ವಯಿಸುವ ದಂಡಸಂಹಿತೆ, ದಂಡ ಪ್ರಕ್ರಿಯಾ ಸಂಹಿತೆ, ಸಾಕ್ಷ್ಯ ಅಧಿನಿಯಮ, ಸಿವಿಲ್ ಪ್ರಕ್ರಿಯಾ ಸಂಹಿತೆ ಮುಂತಾದ ಮೂಲಭೂತ ಕಾನೂನುಗಳು ಜಾರಿಗೆ ಬಂದವು. ಹಿಂದೂ ಧರ್ಮಶಾಸ್ತ್ರಗಳಲ್ಲಿದ್ದ ಒಳ್ಳೆಯ ನ್ಯಾಯ ತತ್ತ್ವಗಳನ್ನು ಈ ಸಂಹಿತೆಗಳಲ್ಲಿ ಅಳವಡಿಸಿಕೊಂಡು ಕೆಲವನ್ನು ಪ್ರಾಚೀನ, ಜಡ - ಅನಾಗರಿಕ ಕಾನೂನುಗಳೆಂದು ಹೊರಗಿಡಲಾಯಿತು.

ಆಂಗ್ಲರ ಕಾಲದಲ್ಲಿ ನ್ಯಾಯವ್ಯವಸ್ಥೆಯಲ್ಲಾದ ಬದಲಾವಣೆಯಂತೆ ಶಿಕ್ಷಾ ವಿಧಾನದಲ್ಲೂ ಮಹತ್ತರ ಬದಲಾವಣೆ ಕಂಡುಬಂದವು. ಪ್ರಾಚೀನ, ಮಧ್ಯಕಾಲೀನ ಸಮಾಜದಲ್ಲಿದ್ದಂತಾ ಅನಾಗರಿಕ ಅಮಾನವೀಯವಾದ, ಅಂಗವಿಚ್ಛೇದನ, ಕಠಿಣ ದೈಹಿಕ ಶಿಕ್ಷೆಯನ್ನು ಬ್ರಿಟಿಷ್ ನ್ಯಾಯಾಡಳಿತ ಕೈಬಿಟ್ಟಿತು. ಚಾಟಿಯೇಟಿನಂತಾ ದೈಹಿಕ ದಂಡನೆ ಜಾರಿಯಲ್ಲಿದ್ದರೂ, ಮೂರು ಮುಖ್ಯ ಶಿಕ್ಷಾ ವಿಧಾನವನ್ನು ಜಾರಿಗೆ ತಂದಿತ್ತು. ೧. ಆರ್ಥಿಕ ದಂಡನೆ ೨. ಸೆರೆಮನೆ ವಾಸ ೩. ಮರಣದಂಡನೆ. ಈ ಮೂರು ಶಿಕ್ಷಾವಿಧಾನಗಳಲ್ಲಿ ಒಂದಾದ ಸೆರೆಮನೆವಾಸ ಅಥವ ಕಾರಾಗೃಹ ವಾಸ ಅಥವ ಬಂದಿಖಾನೆ ವಾಸ ಹಾಗೂ ಆ ಸೆರೆವಾಸಿಗಳ ಮನಪರಿವರ್ತನೆಯೆ ಈ ಅಧ್ಯಯನದ ಮೂಲ ಕೇಂದ್ರವಾಗಿರುವುದರಿಂದ ಬಂಧೀಖಾನೆಗಳೆಂಬ ವ್ಯವಸ್ಥೆ ಬೆಳೆದು ಬಂದುದರ ಬಗ್ಗೆ ಸಮಗ್ರವಾದ ವಿಶ್ಲೇಷಣೆ ಅಗತ್ಯವಿದೆ.

ಸೆರೆಮನೆ ಎಂದರೆ ಆಂಗ್ಲಭಾಷೆಯಲ್ಲಿ 'ಜೈಲ್' ಅಥವ 'ಪ್ರಿಸನ್'. 'ಜೈಲು' ಪದವು 'Goal' ಪದದ ಮಾರ್ಪಾಡು. ಗೋಲ್ (Goal) ಎಂಬ ಪದವು ಲ್ಯಾಟೀನ್ ಮೂಲದ್ದು. ಗೋಲ್‌ನಲ್ಲಿಡು ಅಂದರೆ ಒಬ್ಬ ವ್ಯಕ್ತಿಯನ್ನು ಬಂಧಿಸಿ ಸೆರೆಯಲ್ಲಿಡುವ ಸ್ಥಳ ಎಂದರ್ಥ. ಆ ವ್ಯಕ್ತಿ ಆರೋಪಿಯಾಗಿರಬಹುದು ಅಥವ ಅಪರಾಧಿಯೂ ಆಗಿರಬಹುದು. ಇಂಗ್ಲಿಷ್ ಆಕ್ಸ್‌ಪರ್ಡ್ ಡಿಕ್ಷನರಿ ಪ್ರಕಾರ 'ಸೆರೆಮನೆ' ಎಂದರೆ ಅದು ಶಾಸನಬದ್ಧವಾಗಿ ನ್ಯಾಯಾಂಗದಿಂದ ಶಿಕ್ಷೆಗೊಳಪಟ್ಟಿರುವ ಅಥವ ವಿಚಾರಣೆ ಬಾಕಿ ಇರುವ ಆರೋಪಿಗಳನ್ನು ರಕ್ಷಣೆಗಾಗಿ ಇಡುವ ಎಲ್ಲ ಸಿದ್ಧತೆ, ವ್ಯವಸ್ಥೆಯನ್ನು ಹೊಂದಿರುವ ಸ್ಥಳ ಎಂದರ್ಥ. 'ಕಾರಾಗೃಹ' ಹಾಗೂ 'ಬಂದಿಖಾನೆ' ಎಂಬ ಎರಡು ಪದಗಳು 'ಸೆರೆಮನೆ'ಗೆ ಸಂವಾದಿಯಾಗಿ ಬಳಕೆಯಾಗುತ್ತಿರುವ ಪದಗಳು.

ಬಂದಿಖಾನೆ ಶಿಕ್ಷೆ ಅಥವ ಸೆರೆಮನೆ ಶಿಕ್ಷೆಯು ಆಧುನಿಕ ಸಮಾಜದ ಕೊಡುಗೆಯಲ್ಲ. ಇದು ಪ್ರಾಚೀನ ಕಾಲದಿಂದಲೂ ದಾಟಿ ಬಂದಿರುವ ರೂಡಿಬದ್ಧ ಶಿಕ್ಷೆ ಅಥವ ಸಂಪ್ರದಾಯದಿಂದ ಬಳುವಳಿಯಾಗಿ ಬಂದ ಶಿಕ್ಷೆ. ಹಿಂದೂ ಧರ್ಮಶಾಸ್ತ್ರದಲ್ಲಿ ಬಂದಿಖಾನೆ ಹಾಗೂ ಬಂದಿಖಾನೆವಾಸದ ಬಗ್ಗೆ ಯಥೇಚ್ಛವಾದ ಉಲ್ಲೇಖಗಳಿವೆ. ಹಿಂದೂಧರ್ಮಶಾಸ್ತ್ರಕಾರ ಯಮ, ಜಾರತನದ ಅಪರಾಧಿ ಬ್ರಾಹ್ಮಣನಾದಲ್ಲಿ ಆತನನ್ನು ಕಾರಾಗೃಹದಲ್ಲಿಟ್ಟು ಅವನಿಗೆ ಅನಿವಾರ್ಯವಾದಷ್ಟು ಅನ್ನ-ವಸ್ತ್ರ ಕೊಟ್ಟು ಒಬ್ಬ ಯೋಗ್ಯ ಬ್ರಾಹ್ಮಣನು ಮಾಡಬಾರದಂತಾ ಕೆಳಮಟ್ಟದ ದುಡಿಮೆಯನ್ನು ಅವನಿಂದ ಮಾಡಿಸಬೇಕೆಂದು ಶಿಕ್ಷೆ ವಿಧಿಸಿದ್ದಾನೆ. ಕಾರಾಗೃಹ ಎಂಬುದು ಆ ಕಾಲದಲ್ಲೇ ಅಸ್ತಿತ್ವದಲ್ಲಿತ್ತು. ಕೌಟಿಲ್ಯನು ತನ್ನ ಅರ್ಥಶಾಸ್ತ್ರದಲ್ಲಿ 'ಸ್ತ್ರೀ ಪುರುಷನಿಗೆ ಪ್ರತ್ಯೇಕವಾಗಿರುವ ಮತ್ತು ಬಲವಾದ ಕಾವಲಿರುವ ಬಂದಿಖಾನೆಗಳು ರಾಜ್ಯದಲ್ಲಿರಬೇಕೆಂದು ಹೇಳಿದ್ದರೆ, ಮನುಸ್ಮೃತಿಯಲ್ಲಿ ಮನುವು 'ಕಾರಾಗೃಹವು ರಾಜಬೀದಿಯಲ್ಲಿರತಕ್ಕದ್ದು ಏಕೆಂದರೆ ಅಪರಾಧಿಗಳು ಆ ಕಾರಾಗೃಹದಲ್ಲಿ ಪಡುವ ಯಾತನೆಯನ್ನು ಹಾಗೂ ಅವರ ದುಸ್ಥಿತಿಯನ್ನು ಕಂಡು ಇತರರು ಪಾಠ ಕಲಿಯಲಿ' ಎಂದು ಹೇಳಿದ್ದಾನೆ.

ಬ್ರಿಟಿಷ್ ಪೂರ್ವದಲ್ಲೇ ನಮ್ಮಲ್ಲಿ ಅಸ್ತಿತ್ವದಲ್ಲಿದ್ದ ಈ 'ಸೆರೆಮನೆ'ಗಳು ಅಥವ 'ಸೆರೆಮನೆ ಶಿಕ್ಷೆ' ಮಹತ್ತರ ಸುಧಾರಣೆಯನ್ನು ಕಂಡಿದ್ದು ಮಾತ್ರ ಬ್ರಿಟಿಷ್ ಆಳ್ವಿಕೆಯಲ್ಲಿ. ಬ್ರಿಟಿಷರ ತಾಯ್ನಾಡು ಇಂಗ್ಲೆಂಡಿನಲ್ಲೂ ಸೆರೆಮನೆ ಶಿಕ್ಷೆಯಲ್ಲಿ ಸುಧಾರಣೆ ಕಂಡು ಬಂದಿದ್ದು ೧೯ನೇ ಶತಮಾನ ಆದಿಯಲ್ಲಿ. ಇಂಗ್ಲೆಂಡಿನ ಸೆರೆಮನೆಗಳ ಇತಿಹಾಸವನ್ನೊಮ್ಮೆ ಕೆದಕಿದರೆ ಅಲ್ಲೂ ಸೆರೆಮನೆ ಅಥವ ಜೈಲುವ್ಯವಸ್ಥೆ ಆರಂಭವಾದದ್ದೇ ೧೨ನೇ ಶತಮಾನದಲ್ಲಿ ಎಂಬ ಸತ್ಯ ಕಂಡು ಬರುತ್ತದೆ. ರಾಜನ ನ್ಯಾಯಾಲಯದ ತೀರ್ಪು ಬರುವವರೆಗೆ ಆರೋಪಿಗಳನ್ನು ಕೂಡಿ ಹಾಕಲು ಅಥವ ಬಂಧಿಸಿಡಲು ಮಾತ್ರ ಸೆರೆಮನೆಗಳನ್ನು ಆಗ ಬಳಸಲಾಗುತ್ತಿತ್ತು. ೧೧೬೬ ರಲ್ಲಿ ಹೆನ್ರಿ II ಎಂಬ ದೊರೆ ಎಲ್ಲ ದೇಶಗಳಲ್ಲೂ ಇಂಥಾ ಸೆರೆಮನೆಗಳನ್ನು ತೆರೆಯಬೇಕೆಂದು ಆಜ್ಞೆ ಹೊರಡಿಸಿದ. ನಿಧಾನಕ್ಕೆ ಈ ಸೆರೆಮನೆಗಳು ಆರೋಪಿಗಳನ್ನು ಕೂಡಿ ಹಾಕುವ ತಾಣವಾಗದೆ, ಅಪರಾಧಿಗಳನ್ನು ಶಿಕ್ಷಿಸುವ ತಾಣವಾಗಿ ಪರಿವರ್ತನೆಗೊಂಡಿತು. ೧೬ನೇ ಶತಮಾನದಲ್ಲಿ ಹಲವಾರು ಸೆರೆಮನೆಗಳು ಅಥವ ಕೈದಿ ಸುಧಾರಣಾ ಗೃಹಗಳು ಇಂಗ್ಲೆಂಡಿನಲ್ಲಿ ಹುಟ್ಟಿಕೊಂಡವು. ಇಲ್ಲಿ ವಯಸ್ಸು, ಲಿಂಗದ ಆಧಾರದಲ್ಲಿ ಕೈದಿಗಳನ್ನು ಬೇರ್ಪಡಿಸಿ ಬಂಧಿಸಿಡಲಾಗುತ್ತಿತ್ತು. ಮನಪರಿವರ್ತನೆಗೆಂದು ಕಟ್ಟುನಿಟ್ಟಿನ ಶಿಸ್ತು ಹೇರಿ, ಕಠಿಣ ಕೆಲಸವನ್ನೂ ಅವರಿಂದ ಮಾಡಿಸಿಕೊಳ್ಳಲಾಗುತ್ತಿತ್ತು. ಹದಿನೆಂಟನೇ ಶತಮಾನದ ಆದಿಯಲ್ಲಿ ಇಂಗ್ಲೆಂಡಿನಲ್ಲಿ ಹಲವು ಸೆರೆಮನೆಗಳು ಅಸ್ತಿತ್ವದಲ್ಲಿದ್ದರೂ ಅವುಗಳು ಅತ್ಯಂತ ದಾರುಣ ಸ್ಥಿತಿಯಲ್ಲಿದ್ದವು.[೬]

ಅಲ್ಲಿನ ಬಂದೀಖಾನೆಗಳ ದಾರುಣ ಸ್ಥಿತಿ ಹಾಗೂ ಬಂದಿಗಳಿಗೆ ನೀಡುತ್ತಿದ್ದ ಮಾನಸಿಕ ಹಾಗೂ ದೈಹಿಕ ನೋವು ಹಾಗೂ ಅಂದಿನ ಶಿಕ್ಷಾ ವಿಧಾನದ ಬಗ್ಗೆ ಯುರೋಪಿನ ಖ್ಯಾತ ಅಪರಾಧಶಾಸ್ತ್ರಜ್ಞರಾದ ಸೀಜರ್ ಬೇಕೆರಿಯಾ ಪ್ರತಿಭಟಿಸಿ ಧ್ವನಿ ಎತ್ತಿ ಹೋರಾಟಕ್ಕಿಳಿದಿದ್ದರು. ಇನ್ನೊಬ್ಬ ಮಾನವ ಅಂತಃಕರಣಿ ಜಾನ್ ಹೋವಾರ್ಡ್ ಅವರು ತಮ್ಮ ಕೃತಿ 'ದಿ ಸ್ಟೇಟ್ ಆಫ್ ಪ್ರಿಸನ್ಸ್' ನಲ್ಲಿ ಇಂಗ್ಲೆಂಡಿನ ಸೆರೆಮನೆಗಳ ಅತ್ಯಂತ ಕೆಟ್ಟ ಹಾಗೂ ದಾರುಣ ಸ್ಥಿತಿಗತಿಗಳನ್ನೂ ವಿವರಿಸುತ್ತಾ, ಅಲ್ಲಿನ ಸೆರೆಮನೆಗಳಲ್ಲಿ ತುಂಬಿ ತುಳುಕುತ್ತಿದ್ದ ರೋಗ ರುಜಿನಗಳು, ಭ್ರಷ್ಟಾಚಾರ,

ಅನೈತಿಕ ಲೈಂಗಿಕ ಸಂಬಂಧ ಹಾಗೂ ಇನ್ನಿತರ ಹಲವು ದುಶ್ಚಟಗಳ ಬಗ್ಗೆ ಬಣ್ಣಿಸಿರುವುದನ್ನು ಡಾ. ಅಶೋಕ ಅವರು ತಮ್ಮ 'ಅಪರಾಧಶಾಸ್ತ್ರ ಮತ್ತು ನ್ಯಾಯ ವಿಜ್ಞಾನ' ಕೃತಿಯಲ್ಲಿ ಉಲ್ಲೇಖಿಸಿದ್ದಾರೆ.[೧೦]

೧೮ನೇ ಶತಮಾನದ ದ್ವಿತೀಯಾರ್ಧದಲ್ಲಿ ಶ್ರೀಮತಿ ಎಲಿಜಬೆತ್ ಫ್ರಾಯಂ ಮತ್ತು ಜಾನ್ ಹಾವರ್ಡ್ ಅವರು ಬ್ರಿಟಿಷ್ ಸೆರೆಮನೆಯ ಸ್ಥಿತಿಗತಿಗಳನ್ನು ಸುಧಾರಿಸಲು ದೊಡ್ಡ ಆಂದೋಲವನ್ನಾರಂಭಿಸಿದರು. ಇಂಗ್ಲೆಂಡಿನಲ್ಲಾದ ಈ ಆಂದೋಲನದ ಬಿಸಿ ಭಾರತಕ್ಕೂ ತಟ್ಟಿತು. ಆಗ ಕಂಪನಿ ಸರಕಾರದ ಕಾಲ. ಇಂಗ್ಲೆಂಡಿನಲ್ಲಾದ ಆಂದೋಲನದ ಪರಿಣಾಮವಾಗಿ ಇಂಗ್ಲಿಷ್ ಅಧಿಕಾರಿಗಳೂ ಭಾರತೀಯ ಬಂದಿಖಾನೆಗಳತ್ತ ತುಸು ಕರುಣಾ ದೃಷ್ಟಿ ಬೀರಿದ ಪರಿಣಾಮ, ೧೮೩೬ ರಲ್ಲಿ ಭಾರತೀಯ ಬಂಧಿಖಾನೆಗಳ ಸ್ಥಿತಿಗತಿಗಳನ್ನು ಅಭ್ಯಸಿಸಲು ಒಂದು ಸಮಿತಿಯ ನೇಮಕವಾಯಿತು. ಲಾರ್ಡ್ ಮೆಕಾಲೆ ಆ ಸಮಿತಿಯ ಮುಂದಾಳತ್ವ ವಹಿಸಿದವರು. ಭಾರತದಲ್ಲಿ ಸೆರೆಮನೆಗಳ ಸುಧಾರಣೆಯ ಇತಿಹಾಸದಲ್ಲಿ ಈ ಸಮಿತಿಯ ನೇಮಕವು ಮೊದಲ ಮೈಲಿಗಲ್ಲು.

ಬ್ರಿಟಿಷರು ವ್ಯಾಪಾರಕ್ಕಾಗಿ ಭಾರತದ ಮಣ್ಣಿಗೆ ಕಾಲಿಡುವ ಮುನ್ನವೆ ಆಳರಸರು, ಪಾಳೆಯಗಾರರ ಕಾಲದಲ್ಲಿ ದಂಗೆಕೋರರು, ಪ್ರಜಾಪೀಡಕರು, ರಾಜದ್ರೋಹಿ - ದೇಶದ್ರೋಹಿ ಎಂಬ ಆರೋಪ ಹೊತ್ತವರಿಗೆ 'ಸೆರೆಮನೆ'ಗಳೆಂಬ ದಂಡನಾಗೃಹಗಳಿದ್ದವು. ಅಲ್ಲಿ ಅಂಗವಿಚ್ಛೇದನೆ - ಮರಣದಂಡನೆ ಶಿಕ್ಷೆಗಳನ್ನು ವಿಧಿಸಲಾಗುತ್ತಿತ್ತು ಎಂಬುದರ ಬಗ್ಗೆ ಅಸಂಖ್ಯ ಉಲ್ಲೇಖಗಳು ನಮ್ಮ ಇತಿಹಾಸದ ಪುಟಗಳಲ್ಲಿವೆ. ಆದರೆ ಆ ಸೆರೆಮನೆಗಳ ಆಂತರಿಕ ರಚನೆಯ ಬಗ್ಗೆಯಾಗಲಿ, ಅವುಗಳಲ್ಲಿದ್ದ ವ್ಯವಸ್ಥೆಯ ಬಗ್ಗೆಯಾಗಲಿ ಸ್ಪಷ್ಟ ಚಿತ್ರಣ ಮಾತ್ರ ಲಭ್ಯವಿಲ್ಲ. ಈಗಿನ ಸೆರೆಮನೆಗಳ ಚಿತ್ರಣಗಳನ್ನು ಚಿತ್ತದಲ್ಲಿರಿಸಿ, ನಮ್ಮ ಚರಿತ್ರೆ ಕಾದಂಬರಿಗಳಲ್ಲಿ (Historical Novel) ಆಗಿನ ಸೆರೆಮನೆಗಳನ್ನು ಕಲ್ಪನೆಯಲ್ಲೇ ಚಿತ್ರಿಸಿದ್ದಿದೆ. ಆದರೆ ಅದು ಎಂದೂ ವಾಸ್ತವ ಚಿತ್ರಣವಾಗಲಾರದು. ಆಳರಸರ ಕಾಲದ ಬಂದಿಖಾನೆಗಳು ಇಂದಿನ ಬಂದಿಖಾನೆಗಳಂತೆ ಯಾವುದೇ ಸಾಮಾಜಿಕ ಚಿಂತನೆ ಅಥವ ಉದ್ದೇಶವಿರಿಸಿ ನಿರ್ಮಿಸಿದವು ಅಲ್ಲ. ಸಮಾಜದ ಸ್ವಾಸ್ಥ್ಯ ಕೆಡಿಸುವ ಅಥವ ತಮ್ಮ ನಿರಂಕುಶ ಆಡಳಿತಕ್ಕೆ ಅಡ್ಡಿ ಆತಂಕವನ್ನೊಡ್ಡುವ, ಅನಿಷ್ಟ ಜೀವಿಯೆಂದು ಪರಿಗಣಿಸುವ ಅಪರಾಧಿಯನ್ನು ದಂಡಿಸಲು ಅಥವ ದಂಡನೆಯಿಂದಲೇ ಜೀವಮುಕ್ತಗೊಳಿಸಲು ದಬ್ಬುವ ಗಾಳಿ ಬೆಳಕು ಹರಿಯದ ಕತ್ತಲೆ ಕೋಣೆಯವು ಅಷ್ಟೆ. ಆ ಸೆರೆಮನೆಗಳು ಕೋಟೆಯ ಬತ್ತೇರಿ - ಬುರುಜುಗಳಡಿಯ ನೆಲಮಾಳಿಗೆಗಳಾಗಿರಬಹುದು ಅಥವ ಶಸ್ತ್ರ ತುಂಬುವ ಕೋಠಿಗಳೂ ಆಗಿರಬಹುದು ಅಥವ ಉಗ್ರಾಣಗಳೂ ಆಗಿರಬಹುದು. ಒಟ್ಟಿನಲ್ಲಿ ಅವು ಅಪರಾಧಿ / ಆರೋಪಿಗೆ ಮಾನಸಿಕ ಹಾಗೂ ದೈಹಿಕ ನೋವನ್ನು ಭರಿಸುವಂತಿದ್ದರೆ ಅವೇ ಆ ಕಾಲದ ಸೆರೆಮನೆಗಳು.

ಭಾರತದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಕರ್ನಾಟಕದಿಂದ ಬ್ರಿಟಿಷರಿಗೆ ಪ್ರಥಮ ರಣವೀಳ್ಯವನ್ನಿತ್ತ ಕಿತ್ತೂರ ನಾಡಿನ ಅರಸಿ ಚೆನ್ನಮ್ಮನ ಪತಿ ಮಲ್ಲಸರ್ಜನನ್ನು ಟಿಪ್ಪು ಸೆರೆಹಿಡಿದು ಸೆರೆಯಲ್ಲಿಟ್ಟಿದ್ದು ಇಂತಹದ್ದೇ ಒಂದು ಬತ್ತೇರಿಯಡಿಯ ನೆಲಮಾಳಿಗೆಯಲ್ಲಿ - ಎಂದು ಇತಿಹಾಸ ಹೇಳುತ್ತದೆ. ಹಾಗೆಯೆ ಟಿಪ್ಪುವು ತಾನು ಸೆರೆಹಿಡಿದ ಇಂಗ್ಲಿಷ್ ಕೈದಿಗಳಲ್ಲಿ ಎಲ್ಲರನ್ನೂ ಬುರುಜಿನಡಿಯ ಕತ್ತಲೆ ಕೋಣೆಗೆ ದಬ್ಬದೆ, ಕೆಲವರನ್ನು ಅವರ ಗುಣ ಸ್ವಭಾವಕ್ಕನುಗುಣವಾಗಿ ವ್ಯವಸ್ಥಿತವಾದ ಬಂದಿಖಾನೆಯಲ್ಲಿಡುತ್ತಿದ್ದ ಎಂದು ೧೭೮೬ ರಲ್ಲಿ ಇಂಗ್ಲಿಷ್ ಮುಖ್ಯಸ್ಥ

ರಾಬ್‌ಸನ್ನನ ಬರವಣಿಗೆಯಲ್ಲಿ ಉಲ್ಲೇಖಿಸಲ್ಪಟ್ಟಿದೆ. ದಂಡನಾಯಕ ಬೆಯರ್ಡ್‌ನನ್ನೂ ಟಿಪ್ಪುವು ಸೆರೆವಾಸದ ಶಿಕ್ಷೆಗಾಗಿ ಬಂದಿಖಾನೆಯಲ್ಲಿಟ್ಟನೇ ಹೊರತು ಬತ್ತೇರಿ ಬುರುಜಿನಡಿಯ ಕತ್ತಲೆ ಕೋಣೆಯಲ್ಲಲ್ಲ ಎಂಬುದನ್ನು ಈ ಉಲ್ಲೇಖ ಸ್ಪಷ್ಟಪಡಿಸುತ್ತದೆ.[೧೧]

ಭಾರತದಲ್ಲಿ ಆಳರಸರ ಕಾಲದಲ್ಲಿ ಅಂಗವಿಚ್ಛೇದನದಂತಹ ಶಿಕ್ಷೆ ಜಾರಿಯಲ್ಲಿದ್ದರೂ ಟಿಪ್ಪುವು ಮಾತ್ರ ಅನೇಕ ಇಂಗ್ಲಿಷ್ ಕೈದಿಗಳನ್ನು ಮಾನವೀಯವಾಗಿ ನಡೆಸಿಕೊಳ್ಳುತ್ತಿದ್ದ ಎಂಬುದನ್ನೂ ರಾಬ್‌ಸನ್ನನ ಬರವಣಿಗೆ ಉಲ್ಲೇಖಿಸುತ್ತದೆ. ಗಾಯಗೊಂಡ ಕರ್ನಲ್ ಬ್ರೆತ್‌ವೈಟ್ ಮತ್ತು ಇತರ ಕೈದಿಗಳನ್ನು ತನ್ನ ಬಳಿ ಕರೆಸಿಕೊಂಡ ಟಿಪ್ಪುವು, ಅವರುಗಳನ್ನು ಸ್ವತಃ ತಾನೇ ಪರೀಕ್ಷಿಸಿ, ಆ ಗಾಯಾಳು ಕೈದಿಗಳಿಗೆ ಔಷಧೋಪಚಾರ ಮಾಡುವಂತೆ ಫ್ರೆಂಚ್ ಶಸ್ತ್ರವೈದ್ಯರನ್ನು ಅವರ ಜತೆ ಹಳ್ಳಿಗೆ ಕಳುಹಿಸಿಕೊಟ್ಟ - ಎಂಬುದು ರಾಬ್‌ಸನ್ನನ ಬರವಣಿಗೆಯಲ್ಲಿದೆ.

೧೮೨೪ರ ಅಕ್ಟೋಬರ್ ೨೩ ರಂದು ಕಿತ್ತೂರ ಕೋಟೆಯನ್ನು ಫಿರಂಗಿಗಳಿಂದ ಬೇಧಿಸಲು ತನ್ನ ಸೈನ್ಯಕ್ಕೆ ಆಜ್ಞೆಯಿತ್ತ ಬ್ರಿಟಿಷ್ ಕಲೆಕ್ಟರ್ ಥ್ಯಾಕರೆಯ ರುಂಡವನ್ನುರುಳಿಸಿದ ರಾಣಿ ಚೆನ್ನಮ್ಮನ ಸೈನ್ಯ ಆ ಸೈನ್ಯದ ಕಂಪನಿ ಸೇನಾಧಿಕಾರಿಗಳಾದ ಜೆ.ಎ.ಆರ್.ಸ್ಟೀವನ್‌ಸನ್ ಹಾಗೂ ಇಲಿಯಟ್ ಅವರನ್ನು ಯುದ್ಧ ಕೈದಿಗಳನ್ನಾಗಿ ಸೆರೆಹಿಡಿದರೂ ಕೈದಿಗಳೆಂದು ಅವರನ್ನು ಕತ್ತಲೆ ಕೋಣೆಗೆ ದಬ್ಬಲಿಲ್ಲ. ಅವರನ್ನು ಕಿತ್ತೂರ ಕೋಟೆಯಲ್ಲಿರಿಸಿ, ಹಿಂಸೆ ನೀಡದೆ ಗೌರವಾನ್ವಿತವಾಗಿ ನಡೆಸಿಕೊಂಡು ಕಂಪನಿ ಸರಕಾರಕ್ಕೆ ಮರಳಿ ಒಪ್ಪಿಸಲಾಯಿತು ಎಂಬುದು ಐತಿಹಾಸಿಕ ಸತ್ಯ. ಆ ವಸಾಹತುಶಾಹಿ ಕಾಲದಲ್ಲೂ ಆಳರಸರು ಇಂಗ್ಲಿಷ್ ಕೈದಿಗಳನ್ನು ಶಿಕ್ಷಿಸದೆ ಮಾನವೀಯವಾಗಿ ನಡೆಸಿಕೊಳ್ಳುತ್ತಿದ್ದ ಮಾದರಿಗೊಂದು ಮಾದರಿ.

ಆಂಗ್ಲಪೂರ್ವ ಭಾರತದಲ್ಲಿ ಈ ಸೆರೆವಾಸದ ಶಿಕ್ಷೆ ಅಸ್ತಿತ್ವದಲ್ಲಿದ್ದರೂ ಶಿಕ್ಷೆಯಲ್ಲಾಗಲಿ ಸೆರೆಮನೆಯ ಪರಿಕಲ್ಪನೆಯಲ್ಲಾಗಲಿ ಸುಧಾರಣೆ ಕಂಡಿದ್ದು ಮಾತ್ರ ಆಂಗ್ಲರ ನ್ಯಾಯಾಡಳಿತದಲ್ಲಿ. ಅಂಗವಿಚ್ಛೇದನದಂತಹ ಭೀಕರ ಹಾಗೂ ಅಮಾನವೀಯ ಶಿಕ್ಷಾ ಪದ್ಧತಿ ಭಾರತದಿಂದ ಕಾಲ್ತೆಗೆದದ್ದು ಕೂಡಾ ಆಂಗ್ಲರ ಕಾಲದಲ್ಲಿ ಎನ್ನುವ ಕೀರ್ತಿ ಬ್ರಿಟಿಷ್ ಆಡಳಿತಕ್ಕಿದೆ. ಆದರೆ ಬ್ರಿಟಿಷ್ ಪ್ರಭುತ್ವವೂ ತನ್ನ ಸರಕಾರದ ವಿರುದ್ಧ ಪಿತೂರಿ, ಸಂಚು, ದಂಗೆ ನಡೆಸಿದ ಆರೋಪಗಳನ್ನು ಹೊತ್ತಿರುವ ಭಾರತೀಯರನ್ನು, ನ್ಯಾಯಾಂಗದ ಎದುರಿಗೆ ತಳ್ಳಿ ತನ್ನ ಮೂಗಿನ ನೇರಕ್ಕೆ ವಿಚಾರಣೆ ನಡೆಸಿ ಅಪರಾಧಿ ಪಟ್ಟಕ್ಕೇರಿಸಿ, ವಿಧಿಸುತ್ತಿದ್ದ ಶಿಕ್ಷೆಗಳು ಮಾತ್ರ ತೀರಾ ಅಮಾನವೀಯವಾಗಿದ್ದವು.

ಬ್ರಿಟಿಷ್ ಭಾರತದ ಇತಿಹಾಸವನ್ನೊಮ್ಮೆ ಕೆದಕಿದರೆ, ಆ ಕಾಲದಲ್ಲಿ ಬ್ರಿಟಿಷ್ ಆಡಳಿತದಿಂದ ಅಮಾನವೀಯವಾಗಿ ಶಿಕ್ಷಿಸಲ್ಪಟ್ಟ (ಮರಣದಂಡನೆಗೊಳಗಾದವರನ್ನು ಹೊರತುಪಡಿಸಿ) ಕೆಲವು ಕೈದಿಗಳ ಬಗ್ಗೆ ಉಲ್ಲೇಖಗಳು ಹೀಗಿವೆ :

- ಬ್ರಿಟಿಷ್ ಸರಕಾರವು ಭಾರತದ ಮೊಟ್ಟಮೊದಲ ಸ್ವಾತಂತ್ರ್ಯವೀರ, ಕಟ್ಟಕಡೆಯ ಮೊಘಲ ಚಕ್ರವರ್ತಿ ಮಹಮ್ಮದ್ ಬಹದ್ದೂರ ಷಹನನ್ನು ೧೮೫೭ರ ಸಿಪಾಯಿ ದಂಗೆಯ 'ಕಾರಣ ಕರ್ತ'ನೆಂದು ಹೆಸರಿಸಿ, ದೆಹಲಿಯ ದಿವಾನ್-ಇ-ಖಾಸ್‌ನಲ್ಲಿ ವಿಚಾರಣೆಗೊಳಪಡಿಸಿ ಆತನ ಮೇಲೆ ಕೆಲವು ಪ್ರಮುಖ ಆಪಾದನೆಗಳನ್ನು ಹೊರಿಸಿ ಜೀವಾವಧಿ ಶಿಕ್ಷೆಯನ್ನು ವಿಧಿಸಿತು. ಅಪರಾಧಿಯನ್ನು ರಂಗೂನಿಗೆ ಗಡಿಪಾರು ಮಾಡಿ ಅಲ್ಲಿ ಜೀವಾವಧಿ ಶಿಕ್ಷೆಗೆ ಗುರಿಪಡಿಸಲಾಯಿತು. ವೃದ್ಧ ಚಕ್ರವರ್ತಿ ಹತ್ತು ವರುಷಗಳ ಕಾಲ ಏಕಾಂತದಲ್ಲಿ ನರಳಿ ೧೮೬೮ ರಲ್ಲಿ ಕೊನೆಯುಸಿರೆಳೆದನು.[೨]

- ಮುಂಬಯಿ ಅಧಿಪತ್ಯದಲ್ಲಿದ್ದ ಕೊಲಬಾ ಜಿಲ್ಲೆಯ ವಾಸುದೇವ ಬಲವಂತ ಪಡ್ಕೆ ಮಹಾನ್ ದೇಶಪ್ರೇಮಿ. ಬ್ರಿಟಿಷ್ ಸಾಮ್ರಾಜ್ಯ ರಕ್ಷಣೆಯ ಸೈನ್ಯ ಶಾಖೆಯಲ್ಲಿ ಕೆಲಸಕ್ಕಿದ್ದವ. ಬ್ರಿಟಿಷ್ ಅಧಿಕಾರಿಗಳ ದರ್ಪ, ದುರಾಡಳಿತವನ್ನು ಸಹಿಸಲಾರದೆ ಕ್ರಾಂತಿಕಾರಿಯಾಗಿ ರೂಪುಗೊಂಡು, ಬ್ರಿಟಿಷ್ ಅಧಿಪತ್ಯದ ವಿರುದ್ಧ ಬಂಡಾಯ ಧ್ವಜವನ್ನು ಹಾರಿಸಿದವ. ಬ್ರಿಟಿಷ್ ಆಡಳಿತಕ್ಕೆ ವಿಪರೀತ ತಲೆನೋವಾಗಿ ಕಾಡಿದ್ದ ಈತನನ್ನು ಮೋಸದಿಂದ ಸೆರೆಹಿಡಿಯಲಾಯಿತು. ಮರಣದಂಡನೆ ಶಿಕ್ಷೆಗೆ ಸಾಕಾಗುವಷ್ಟು ಭರ್ಜರಿ ಆಪಾದನೆಗಳನ್ನು ಹೊರಿಸಿ ಈತನನ್ನು ವಿಚಾರಣೆಗೊಳಪಡಿಸಲಾಯಿತು. ಆದರೆ ೧೮೭೯ ರಲ್ಲಿ ಈತನಿಗೆ ಮರಣದಂಡನೆಯನ್ನು ವಿಧಿಸದೆ, ಭೀಕರವಾಗಿ ನರಳುವಂತಹ ಜೀವಾವಧಿ ಶಿಕ್ಷೆಯನ್ನು ವಿಧಿಸಲಾಯಿತು. ಶಿಕ್ಷೆಗಾಗಿ ಈತನನ್ನು ಭಾರತದ ಗಡಿ ದಾಟಿಸಿ ಏಡನ್ನಿಗೊಯ್ದು ಗಾಳಿಬೆಳಕಿಲ್ಲದ ಸೆರೆಮನೆಯಲ್ಲಿ ಜೀವಂತವಾಗಿ ಹೂತರೋ ಎನ್ನುವಂತೆ ಹಿಂಸಿಸಿ ೧೮೮೩ ರಲ್ಲಿ ಈತನ ಬದುಕಿಗೆ ಇತಿಶ್ರೀ ಹಾಡಲಾಯಿತು.

- ಬ್ರಿಟಿಷರ ದಬ್ಬಾಳಿಕೆಯನ್ನು ವಿರೋಧಿಸತ್ತ ಆ ಸರಕಾರದ ವಿರುದ್ಧವಾಗಿ ಅನೇಕ ಪಿತೂರಿಗಳನ್ನು ಹೆಣೆಯುತ್ತಿದ್ದ ಯುವಕ ವಿನಾಯಕ ವೀರ ಸಾವರ್ಕರ್ ಅವರನ್ನು, ೧೯೦೬ ರಲ್ಲಿ ಭಾರತದಲ್ಲಿ ಮಾಡಿದ 'ಬ್ರಿಟಿಷ್ ವಿರೋಧಿ ಭಾಷಣ'ಕ್ಕಾಗಿ ೧೯೧೦ ರಲ್ಲಿ ಲಂಡನ್‌ನಲ್ಲಿ ಬಂಧಿಸಲಾಯಿತು. ಮುಂದಿನ ವಿಚಾರಣೆಗಾಗಿ ಹಡಗಿನಲ್ಲಿ ಭಾರತಕ್ಕೆ ಕರೆತರುವಾಗ ಅವರು ಸಮುದ್ರಕ್ಕೆ ಹಾರಿ ಈಜಿ ತಪ್ಪಿಸಿಕೊಳ್ಳುವ ಯತ್ನದಲ್ಲಿದ್ದಾಗ ಫ್ರೆಂಚ್ ಪೊಲೀಸರ ಕೈವಶವಾಗಿ ಮತ್ತೆ ಬ್ರಿಟಿಷ್ ಪಡೆಯ ಸೆರೆಗೊಳಗಾದರು. ಆಂಗ್ಲ ಸರಕಾರ ಈ ವೀರಸಾವರ್ಕರ್ ಮೇಲೆ ಇನ್ನಷ್ಟು ಆರೋಪಗಳನ್ನು ಹೇರಿ, ಪ್ರಕರಣವನ್ನು ಗಂಭೀರವಾಗಿ ಪರಿಗಣಿಸಿ ೬೮ ದಿನಗಳ ಕಾಲ ವಿಚಾರಣೆ ನಡೆಸಿ, ಅವರ ಆಸ್ತಿಪಾಸ್ತಿಗಳನ್ನು ಮುಟ್ಟುಗೋಲು ಹಾಕಿಕೊಳ್ಳುವುದರೊಂದಿಗೆ ಜೀವಾವಧಿ ಶಿಕ್ಷೆಯನ್ನೂ ವಿಧಿಸಿತು. ಈ ಶಿಕ್ಷೆ ಪಾಲನೆಯಾಗುವ ತಿಂಗಳೊಂದರ ಒಳಗೆ ನಾಸಿಕ್ ಜಿಲ್ಲಾ ಮ್ಯಾಜಿಸ್ಟ್ರೇಟ್ ಜಾಕ್‌ಸನ್ ಕೊಲೆ (೨೧.೧೨.೧೯೦೯)ಗೆ ಸಾವರ್ಕರ್ ಅವರೇ ಪ್ರಮುಖ ಕಾರಣರೆಂದು ಮತ್ತೊಂದು

ಮೊಕದ್ದಮೆ ಹೂಡಿ ವಿಚಾರಣೆ ನಡೆಸಿತು. ಮತ್ತೆ ೨೫ ವರುಷಗಳ ಕಠಿಣ ಶಿಕ್ಷೆ ವಿಧಿಸುವ ಮೂಲಕ ಆ ಕ್ರಾಂತಿಕಾರಿಯನ್ನು ಭೀಕರವಾಗಿ ಹಿಂಸಿಸಿ ಸಂಪೂರ್ಣ ನಾಶಮಾಡುವ ನಿರ್ಧಾರಕ್ಕೆ ಬ್ರಿಟಿಷ್ ಸರಕಾರ ಬಂದಂತಿತ್ತು.

೨೭.೧೧.೧೯೧೧ ರಂದು 'ಮಹಾರಾಜ' ಎಂಬ ಹಡಗಿನಲ್ಲಿ ವೀರ ಸಾವರ್ಕರ್ ಅವರನ್ನು 'ಯಮಲೋಕ' ಎಂದೇ ಹೆಸರುವಾಸಿಯಾಗಿದ್ದ ಅಂಡಮಾನ್‌ನ 'ಸೆಲ್ಯೂಲಾರ್ ಜೈಲ್'ಗೆ ಕಳುಹಿಸಲಾಯಿತು. ಆ ನರಕ ಸದೃಶ ಸೆರೆಮನೆಗೆ ವೀರ ಸಾವರ್ಕರ್ ಅವರನ್ನು ಬರಮಾಡಿಕೊಂಡವ ಅತ್ಯಂತ ನಿರ್ದಯಿ ಜೈಲರ್ ಹಾಗೂ ಭಾರತೀಯ ಕೈದಿಗಳ ಪಾಲಿಗೆ 'ಯಮ' ಎಂದೇ ಕುಖ್ಯಾತನಾದ ವೃದ್ಧ 'ಬ್ಯಾರಿ' ಎಂಬಾತ. ಆಗಲೇ ಆ ಬಂದಿಖಾನೆ ಯಲ್ಲಿದ್ದು ಜೀವಂತ ಶವಗಳಂತೆ ಬದುಕು ದೂಡುತ್ತಿದ್ದ ಅನೇಕ ಭಾರತೀಯ ದೇಶಪ್ರೇಮಿಗಳಲ್ಲಿ ವೀರಸಾವರ್ಕರ್ ಒಬ್ಬರಾದರು.

ಭಾರತದ ಬಂದಿಖಾನೆಗಳಲ್ಲೇ ಅತ್ಯಂತ 'ಕುಖ್ಯಾತ'ವೆನಿಸಿದ್ದ ಅಂಡಮಾನ್‌ನ ಆ ಸೆಲ್ಯೂಲಾರ್ ಬಂದಿಖಾನೆಯ ಹಾಗೂ ಜೈಲರ್ ಬ್ಯಾರಿಯ ಬಗ್ಗೆ ತಿ.ತಾ. ಶರ್ಮ ಅವರ ಕೃತಿ 'ವಿಕ್ರಾಂತ ಭಾರತ'ದಲ್ಲಿ ಹೀಗೆಂದು ವರ್ಣಿಸಲ್ಪಟ್ಟಿದೆ : 'ಜೈಲರ್ ಬ್ಯಾರಿಗೆ ಅಕ್ಷರ ಜ್ಞಾನವಿತ್ತು. ಆದರೆ ಜ್ಞಾನ ಶೂನ್ಯ - ಕರುಣೆ ಶೂನ್ಯ. ಕನಿಕರಕ್ಕೆ ಅವನಲ್ಲಿ ಸ್ಥಳವಿದ್ದರೆ ಆತನಲ್ಲಿ ಪಾಲಕನಾಗುತ್ತಿರಲಿಲ್ಲ. ಸ್ಥೂಲಕಾಯ, ಗುಡಾಣ ಹೊಟ್ಟೆ, ಕೋರೆ ಮೀಸೆ, ಚಪ್ಪಟೆ ಮೂಗು, ಕಂಡೂ ಕಾಣಿಸದ ಕತ್ತು, ಕೈಯಲ್ಲೊಂದು ದೊಣ್ಣೆ ! ಅವನ ಅಧಿಕಾರದ ಕಲ್ಪನೆ ಆತನ ರಚನೆಯಷ್ಟೇ ವಿಚಿತ್ರ. ಅಂಡಮಾನಿನ ಬಂದಿಗಳ ಪಾಲಿಗವ ಪ್ರತ್ಯಕ್ಷ ಯಮ.

ಅಂಡಮಾನಿನ ಬಂದಿಗಳ, ಅದರಲ್ಲೂ ರಾಜಕೀಯ ಬಂದಿಗಳ ದುಃಖ ಯಾರಿಗೂ ಬೇಡ. ಕ್ರಾಂತಿಕಾರಿ ಬಂದಿಗಳೆಂದ ಮೇಲೆ ಅವರನ್ನು ದನಗಳಂತೆ ಎಣ್ಣೆಗಾಣಕ್ಕೆ ಬಿಗಿಯುತ್ತಿದ್ದರು. ಅಂಡಮಾನಿನಲ್ಲಿ ಈ ಎಣ್ಣೆಗಾಣಕ್ಕೆ 'ಆತ್ಮಹತ್ಯೆಯ ಪ್ರಿಯ ಬಂಧು' ಎಂದು ಹೆಸರು. ಈ ಗಾಣ ತಿರುಗಿಸಿ, ತಿರುಗಿಸಿ ಕೈ ಸೋಲುವುದು ಹಾಗಿರಲಿ, ರಕ್ತ ಕಾರಿ ಬಂದಿಗಳು ಮೂರ್ಛಿತರಾಗಿ ಬೀಳುತ್ತಿದ್ದರು. ಬಂದಿಗಳಿಗೇನಾದರೂ ಕೆಲಸ ಕೊಡಬೇಕೆಂದು ಈ 'ಗಾಣ'ದ ಉದ್ದೇಶವಲ್ಲ. ಅವರಿಗೆ ಅವಮಾನ ಮಾಡಬೇಕು, ಜೀವ ಹಿಂಸೆ ನೀಡಬೇಕು - ಇದು ಮುಖ್ಯ. ಜಲ ಮಲಬಾಧಾ ನಿವೃತ್ತಿ ಕಾರ್ಯವನ್ನು ಪ್ರಕೃತಿ ವಿಧಿಸಿದಂತೆ ಇಲ್ಲಿ ಮಾಡತಕ್ಕದ್ದಲ್ಲ. ಬೆಳಿಗ್ಗೆ ಮಧ್ಯಾಹ್ನ ಸಂಜೆ - ಯಾವುದೋ ಹೊತ್ತಿದೆ; ಆಗಲೇ ಮಾಡಬೇಕು. ಬೇರೆ ಕಾಲದಲ್ಲಿ ಬಿಗಿ ಹಿಡಿದಿರಬೇಕು. ಅಲ್ಲಿ ಏನು ಮಾಡಿದರೂ ತಪ್ಪೆ. ಬಡಿಸಿದ್ದನ್ನು ತಿನ್ನಬೇಕು, ಕೊಟ್ಟಿದ್ದನ್ನು ಕುಡಿಯಬೇಕು. 'ಸಾಕು' ಅನಬಾರದು, 'ಬೇಕು' ಅನಬಾರದು. ಎಲ್ಲವೂ ಅಪರಾಧವೆ. ಕೈಗೆ ಕೋಳ, ಕಾಲು ಅತ್ತಿತ್ತ ಕದಲದಂತೆ ಅಡ್ಡನೆಯ ಕಂಬಿಯುಳ್ಳ

ಬೇಡಿ. ಏಕಾಂತದ ಕೊಠಡಿಯಲ್ಲಿ (ಸೆಲ್) ವಾಸ. ಮಾನವನನ್ನು ಮೃಗವನ್ನಾಗಿ ಮಾಡುವ ಕಾರ್ಖಾನೆಯದು. ಸಂಯಮಿ ವೀರಸಾವರ್ಕರ್ ಅವರ ಪಾಲಿಗೆ ಅದು ಸಾಧನೆಯ ಸ್ಥಾನವಾಯಿತು. ಎಲ್ಲ ಹತ್ತು ವರುಷಗಳ (೧೯೨೧) ಸೆರೆವಾಸ ಮುಗಿಯುವಷ್ಟರಲ್ಲಿ ವೀರ ಸಾವರ್ಕರ್ ಅವರಿಗೆ ತೀವ್ರವಾದ ಕ್ಷಯರೋಗ ಅಂಟಿಕೊಂಡಿತು. ಗಾಂಧಿ - ಪಟೇಲರು ಅವರ ಬಿಡುಗಡೆಗಾಗಿ ಅದೆಷ್ಟು ಪ್ರಯತ್ನಿಸಿದರೂ ಬ್ರಿಟಿಷ್ ಸರಕಾರ ಒಪ್ಪಲಿಲ್ಲ. ಕಠಿಣ ಶಿಕ್ಷೆ ಮುಂದುವರಿಸಿತು. ಕೊನೆಗೆ ವೀರ ಸಾವರ್ಕರ್ ಇನ್ನು ಉಳಿಯಲಾರ ಎನ್ನುವ ಹಂತದಲ್ಲಿ ಅಂಡಮಾನ್‌ನಿಂದ ರತ್ನಗಿರಿ ಜೈಲಿಗೆ ಅವರನ್ನು ಸ್ಥಳಾಂತರಿಸಲಾಯಿತು. ವೀರ ಸಾವರ್ಕರ್ ಅವರನ್ನು ೧೦.೫.೧೯೩೭ ರವರೆಗೆ ಕಾಲು ಶತಮಾನದ ಸೆರೆಮನೆ ಶಿಕ್ಷೆ ನೀಡಿ ಬಿಡುಗಡೆಗೊಳಿಸಲಾಯಿತು.[೧೩]

- ಬ್ರಿಟಿಷ್ ಭಾರತ ಹಾಗೂ ಸ್ವತಂತ್ರ್ಯ ಬಾರತದಲ್ಲೂ ಸ್ವಾತಂತ್ರ್ಯ ಹಾಗೂ ಸಮಾನತೆಗಾಗಿ ನಿರಂತರ ಹೋರಾಟ ಮಾಡಿದ್ದ ದೇಶದ ಪ್ರಖರ ಚಿಂತಕ, ಸಮಾಜವಾದಿ ಡಾ. ಲೋಹಿಯಾ ಅವರನ್ನು ಬ್ರಿಟಿಷ್ ಸರಕಾರ ೧೯೪೪ ರ ೨೦ ರಂದು ಮುಂಬೈನಲ್ಲಿ ದಸ್ತಗಿರಿ ಮಾಡಿ ಲಾಹೋರ್ ಕೋಟೆಯ ಬಂದಿಖಾನೆಯೊಳಗೆ ಸೆರೆಯಲ್ಲಿಟ್ಟಿತು. ಅಲ್ಲಿ ಅವರಿಗೆ ನೀಡಿದ ಭೀಕರ ಹಿಂಸೆ, ಬ್ರಿಟಿಷ್ ಆಡಳಿತದಲ್ಲಿದ್ದ ಸೆರೆವಾಸ ಶಿಕ್ಷೆಯಲ್ಲಿನ ಅಮಾನುಷತೆಯನ್ನು ಪ್ರತಿಬಿಂಬಿಸುವಂಥಾದ್ದು. ಡಾ. ಲೋಹಿಯಾ ಅವರು ಪ್ರೊ. ಲಾಸ್ಕಿ ಅವರಿಗೆ ಬರೆದ ಕಾಗದದಲ್ಲಿ ಕುಖ್ಯಾತ ಲಾಹೋರ್ ಕೋಟೆಯ (ಬಂದಿಖಾನೆ)ಯ ಹಿಂಸಾಚಾರಗಳನ್ನು ಕುರಿತು ಹೀಗೆಂದು ವರ್ಣಿಸಿದ್ದಾರೆ : 'ಒಂದಲ್ಲ ಒಂದು ವಿಧದಲ್ಲಿ ನಾಲ್ಕು ತಿಂಗಳ ಕಾಲ ನನಗೆ ಚಿತ್ರಹಿಂಸೆ ನೀಡಲಾಯಿತೆಂದು ಇಲ್ಲಿ ಹೇಳಬಯಸುತ್ತೇನೆ. ದಿನದಿಂದ ದಿನಕ್ಕೆ ರಾತ್ರಿಯಿಂದ ರಾತ್ರಿಗೆ ನನ್ನನ್ನ ಸ್ವಲ್ಪವೂ ಮಲಗಲು ಬಿಡದಂತೆ ನೋಡಿಕೊಳ್ಳುತ್ತಿದ್ದರು. ಈ ರೀತಿ ನಾನು ೧೦ ದಿನಗಳವರೆಗೆ ಸಂಪೂರ್ಣ ಎಚ್ಚರನಾಗಿದ್ದೆ. ಬಳಲಿದ್ದ ನನ್ನನ್ನು ನಿಲ್ಲಿಸಲು ಪ್ರಯತ್ನಿಸುತ್ತಿದ್ದ ಪೊಲೀಸರಿಗೆ ನಾನು ತಡೆಯೊಡ್ಡುತ್ತಿದ್ದಾಗ ಕೋಳ ಹಾಕಿದ ಕೈಗಳ ಸಮೇತ ನನ್ನನ್ನು ಒರಟು ನೆಲದ ಮೇಲೆ ವರ್ತುಲಾಕಾರವಾಗಿ ದರದರನೆ ಎಳೆದರು'[೧೪] ಎಂದು ಹೇಳಿಕೊಂಡಿದ್ದಾರೆ.

- ಸಮಾಜವಾದಿ ಚಿಂತಕ ಲೋಹಿಯಾ ಅವರು ಅದೇ ಲಾಹೋರ್ ಕೋಟೆಯಲ್ಲಿ ಅನುಭವಿಸಿದ ಯಾತನೆ, ಅಮಾನುಷ ಹಿಂಸೆಯನ್ನು ಲೋಹಿಯಾ ಅವರ ಸಮೀಪವರ್ತಿ ಓಂಕಾರ್ ಶರದ್ ಅವರು ಬರೆದಿರುವ 'ಲೋಹಿಯಾ' ಜೀವನ ಚರಿತ್ರೆಯಲ್ಲಿ ವಿವರವಾಗಿ ನೀಡಿದ್ದಾರೆ. '...... ಲೋಹಿಯಾ ಅವರನ್ನು ಸೆರೆಯಲ್ಲಿಟ್ಟಿದ್ದ ಲಾಹೋರ್ ಜೈಲಿನ ಕೊಠಡಿ ತಣ್ಣಗಿತ್ತು. ಮುಚ್ಚಿತ್ತು. ಕತ್ತಲೆ ತುಂಬಿಕೊಂಡಿತ್ತು. ಅಲ್ಲಿ ರಾಕ್ಷಸರನ್ನೆಲ್ಲ ಆಯ್ದು

ಅಧಿಕಾರಿಗಳನ್ನಾಗಿ ನೇಮಕ ಮಾಡಲಾಗುತ್ತಿತ್ತು. ಹಿಂಸಿಸಬಲ್ಲ ...... ಯಾತನೆಗಳನ್ನು ನೀಡಬಲ್ಲವರನ್ನೇ ಅಲ್ಲಿ ಕೆಲಸಕ್ಕಿಟ್ಟಿದ್ದರು. ಹಿಂಸಿಸುವ ಸಿಬ್ಬಂದಿ ಅನುಭವಿ, ಕಾರ್ಯಕುಶಲರು ಹಾಗೂ ತಮ್ಮ ಕೆಲಸದಲ್ಲಿ ನಿಪುಣರಾಗಿದ್ದರು. ಒಬ್ಬ ಕೈದಿ ಎಷ್ಟೇ ಕಠೋರನಾಗಿರಲಿ ಕ್ರಮಬದ್ಧ ಹಾಗೂ ಯೋಜನಾಬದ್ಧ ಹಿಂಸೆಯ ನಂತರ ಆತ ಕಡೆಗೂ ಮಣಿಯಬಲ್ಲನು. ಹಿಂಸೆ ಕೊಡುವ ಕಾಲಕ್ಕೆ ಆತನ ಮನಸ್ಸು ಹಾಗೂ ದೇಹದಲ್ಲಿನ ಕೆಲವು ದುರ್ಬಲ ಭಾಗಗಳಿಗೆ ಚುರುಕು ಮುಟ್ಟಿಸಬೇಕಷ್ಟೆ. ಆ ಸಂದರ್ಭದಲ್ಲಿ ಕೈದಿ ದೈಹಿಕವಾಗಿ ಅಸಹಾಯಕನಾಗುತ್ತಾನೆ, ಮಾನಸಿಕವಾಗಿ ಶೂನ್ಯನಾಗುತ್ತಾನೆ. ಒಬ್ಬ ಮನುಷ್ಯ ೨೪ ಗಂಟೆ ಒಂದು ಕೊಠಡಿಯಲ್ಲಿ ಬಂದಿಯಾಗಿರುವಾಗ ಹಾಗೂ ಆ ಕೊಠಡಿಯ ಗೋಡೆಗಳೂ ಮೂಕವಾಗಿರುವಾಗ ಆ ಮನುಷ್ಯ ಹುಚ್ಚನಾಗಲಾರನೆ? ಮನುಷ್ಯ - ಮನುಷ್ಯನ ಮುಖ ನೋಡುವುದೂ ಇಲ್ಲಿ ದುಸ್ತರ. ಕನಿಷ್ಠ ತನ್ನ ಮುಖ ನೋಡುವ ಸಾಧ್ಯತೆಯೂ ಇಲ್ಲ. ಸದಾ ಜಗತ್ತು ಸಮಾಜ ಜನಸಮೂಹ, ಆಂದೋಳನ, ಮೆರವಣಿಗೆಗಳಲ್ಲೆ ಇರುವ ಮನುಷ್ಯನನ್ನು ಕತ್ತಲ ಕೋಣೆಯಲ್ಲಿಟ್ಟು ಎಲ್ಲರ ಜತೆಗಿನ ಸಂಬಂಧಗಳನ್ನು ಮುರಿದು ಹಾಕಿಸಿದರೆ ಹಾಗೂ ಯಾರೊಂದಿಗಾದರೂ ಮಾತನಾಡಲು ವಾರಗಟ್ಟಲೆ ಕಾಯಬೇಕಾದ ಪ್ರಸಂಗ ಬಂದರೆ ಮೊದಲೇ ಮನಸ್ಸಿನಲ್ಲಿ ಭಯಂಕರ ಅಲ್ಲೋಲ ಕಲ್ಲೋಲ ನಡೆಯುತ್ತಿರುವಾಗ ಎಷ್ಟು ಗಾಢವಾದ, ಭೀಕರ ಮೌನ ಆವರಿಸುತ್ತಿರಬೇಕು? ಅದು ಕಲ್ಪನೆಯನ್ನೂ ಮೀರಿರುವಂಥದ್ದು.

ಆ ಲಾಹೋರ್ ಜೈಲಿನಲ್ಲಿ ಲೋಹಿಯಾ ಅವರನ್ನು ಹಿಂಸಿಸುವ ಸರ್ಕಾರಿ ಕಾರ್ಯಕ್ರಮಗಳು ಸಿದ್ಧವಾಗಿದ್ದವು. ಯಾತನೆಯನ್ನು ಕ್ರಮೇಣ ವೃದ್ಧಿಸುವುದು ಹಾಗೂ ಯಾತನೆ ಅನುಭವಿಸುವಾತ ರೋಷದಿಂದ ವಿಕ್ಷಿಪ್ತನಾಗದಂತೆ ಎಚ್ಚರಿಕೆ ವಹಿಸುವುದು - ಈ ಅಮಾನುಷ ಶಿಕ್ಷೆಯ ವಿಶಿಷ್ಟತೆ. ಆರಂಭದಲ್ಲೇ ಲೋಹಿಯಾ ಕ್ಷುದ್ರರಾಗದಂತೆ ಹಾಗೂ ಅವರ ಜಿಜ್ಞಾಸೆಯ ಗುಣಕ್ಕೆ ಧಕ್ಕೆಯಾಗದಂತೆ ಸಂಪೂರ್ಣ ಎಚ್ಚರ ವಹಿಸಿ ಯಾತನೆ ನೀಡತೊಡಗಿದರು. ಆದರೆ ಈ ಜಿಜ್ಞಾಸೆ ಒಮ್ಮೊಮ್ಮೆ ಅಪಾಯಕಾರಿಯಾಗಿ ಪರಿಣಮಿಸುತ್ತಿತ್ತು. ಆರಂಭದ ಹಂತದಲ್ಲಿ ಬಂದಿಖಾನೆ ಅಧಿಕಾರಿಗಳು ಲೋಹಿಯಾ ಅವರನ್ನು ಅವರ ಕತ್ತಲ ಕೋಣೆಯಿಂದ ಕಚೇರಿವರೆಗೆ ರಾತ್ರಿ ಹಗಲು ಎನ್ನದೆ ವಿನಾಕಾರಣ ಕರೆದೊಯ್ಯುತ್ತಿದ್ದರು. ತುಂಬಾ ಸಮಯದವರೆಗೆ ಅಥವ ಸ್ವಲ್ಪ ಸಮಯದವರೆಗೆ ಅವರನ್ನು ಕುರ್ಚಿಯಲ್ಲಿ ಕುಳ್ಳಿರಿಸುತ್ತಿದ್ದರು - ಇಲ್ಲವೆ ನಿಂತಿರಲು ಹೇಳುತ್ತಿದ್ದರು. ಮನಸ್ಸಿನಲ್ಲಿ ಸಿಟ್ಟು, ಬೇಸರ, ಅಸಮಾಧಾನ ತುಂಬಿ ತುಳುಕುವಂತೆ ಮಾಡಿ ವ್ಯಕ್ತಿ ತಾನಾಗಿಯೇ ಕೆರಳುವಂತೆ ಮಾಡುವ ವಿಧಾನವದು. ಒಮ್ಮೊಮ್ಮೆ ಲೋಹಿಯಾ ಅವರನ್ನು ಕೆರಳಿಸುವುದಕ್ಕಾಗಿ ಒಂದೇ ಶಬ್ದ ಅಥವ ವಾಕ್ಯವನ್ನು ನೂರಾರು ಸಲ ಆಡಿ ತೋರಿಸುತ್ತಿದ್ದರು. ಮನುಷ್ಯ ಜರ್ಜರಿತನಾಗಿ, ಆತನ ಮನಸ್ಸಿನಲ್ಲಿ ಹತಾಶೆ

ಮನೆ ಮಾಡಬೇಕೆಂಬುದೇ ಅದರ ಉದ್ದೇಶ. ಲೋಹಿಯಾ ಯಾವತ್ತೂ ಬೇಡಿ ತೊಟ್ಟುಕೊಂಡೇ ಇರಬೇಕಾಗಿತ್ತು. ಲಾಹೋರ್ ಕೋಟೆಯ ಬೇಡಿಗಳಂತೂ ಅಸಾಧಾರಣ ಭಾರವಾಗಿದ್ದವು. ವಾಸ್ತವದಲ್ಲಿ ಅವರನ್ನು ಹಿಂಸಿಸಲು ಆರಂಭಿಸಿದ್ದು ಬಲವಂತದ ಜಾಗರಣೆ ಅಥವ ಒತ್ತಾಯದಿಂದ ಮಲಗದಂತೆ ಮಾಡುವ ವಿಧಾನದ ಮೂಲಕ. ಕುರ್ಚಿಯಲ್ಲಿ ಕುಳ್ಳಿರಿಸಿ ಲೋಹಿಯಾ ಕಣ್ಣು ತೆರೆದೇ ಕುಳಿತುಕೊಳ್ಳುವಂತೆ ವಿವಶಗೊಳಿಸಲಾಗುತ್ತಿತ್ತು. ಕುಂಭಕರ್ಣನಂತೆ ನಿದ್ದೆ ಮಾಡುವ ವ್ಯಕ್ತಿ ಕಣ್ಣು ಮುಚ್ಚದಂತೆ ಮಾಡುವುದಕ್ಕಿಂತ ಕ್ರೂರವಾದ ಯಾತನೆ ಬೇರೇನಿದೆ. ಒಂದು ಕ್ಷಣಕ್ಕಿಂತ ಹೆಚ್ಚು ಕಣ್ಣು ಮುಚ್ಚಿದರೆ ಕಾವಲಿರುತ್ತಿದ್ದ ಅಧಿಕಾರಿ ತಕ್ಷಣ ಬೇಡಿಗಳಿಗೆ ಬಿಗಿದ ಸರಪಳಿಯನ್ನು ಕೊಡವಿ ಝುಣ್ ಝುಣ್ ಸದ್ದು ಮಾಡುತ್ತಿದ್ದ. ಇಲ್ಲವೇ ತಲೆಯನ್ನು ನಾಲ್ಕೂ ಕಡೆ ಅಲ್ಲಾಡಿಸುತ್ತಿದ್ದ. ಈ ಥರದ ನಿದ್ರಾಹೀನ ಅವಸ್ಥೆ ಮೊದಲ ತಿಂಗಳು ಮೂರು ದಿನಗಳದ್ದಾದರೆ, ಎರಡನೇ ತಿಂಗಳು ಒಟ್ಟು ಐದೈದು ದಿನಗಳದ್ದಾಯಿತು. ಈ ಪ್ರಕ್ರಿಯೆ ನಾಲ್ಕು ತಿಂಗಳವರೆಗೆ ನಿರಂತರವಾಗಿ ಮುಂದುವರೆಯಿತು. ಕಡೆಗೆ ನಿದ್ರಾಹೀನತೆಯ ಅವಧಿಯನ್ನು ಒಂದು ವಾರಕ್ಕೆ ಹೆಚ್ಚಿಸಲಾಯಿತು. ಅನಂತರ ಸತತವಾಗಿ ೧೦ ದಿನ. ೧೦ ರಾತ್ರಿ ಕಣ್ಣು ಮುಚ್ಚಲು ಬಿಡಲಿಲ್ಲ. ಬಲವಂತದ ನಿದ್ರಾಹೀನ ಅವಸ್ಥೆಯಲ್ಲಿ ಲೋಹಿಯಾ ದೈಹಿಕ ಮತ್ತು ಮಾನಸಿಕ ಯಾತನೆಯನ್ನು ಅನುಭವಿಸಿದರು. ಲೋಹಿಯಾರಿಗೆ ಯಾತನೆ ನೀಡುವುದಕ್ಕಾಗಿಯೇ ವಿಶೇಷವಾಗಿ ನೇಮಕಗೊಂಡ ಉನ್ನತ ಅಧಿಕಾರಿಯೇ ೧೪ ವರ್ಷಗಳ ಹಿಂದೆ ಭಗತ್‌ಸಿಂಗನನ್ನು ಹಿಂಸೆಗೆ ಗುರಿಪಡಿಸುವುದಕ್ಕಾಗಿ ನೇಮಕಗೊಂಡಿದ್ದಾತ. ಲೋಹಿಯಾ ೫ ದಿನಗಳ ಕಾಲ ಒಂದೇ ಸಮನೆ ನಿದ್ರಾಹೀನರಾಗಿ ಆರನೇ ದಿನ ಬೆಳಗಿನ ಮುಂಜಾವದ ೪ ಗಂಟೆಯ ಸಮಯಕ್ಕೆ, ತಲೆ ಹೊತ್ತಿದ ಕುಲುಮೆಯಾಗಿದೆ ಎಂದೆನಿಸತೊಡಗಿ ಕಣ್ಣು ಮುಚ್ಚಿದೊಡನೆ, ಆ ಪೊಲೀಸ್ ಅಧಿಕಾರಿ ಕೆಂಡಾಮಂಡಲ ಸಿಟ್ಟಿನಿಂದ ತನ್ನ ದರ್ಪ ತೋರಿಸಿದಾಗ, ಲೋಹಿಯಾ ಕಣ್ಣುಮುಚ್ಚಿ ನಿದ್ರಿಸುವ ಮೂಲಕವೇ ತಣ್ಣನೆಯ ಪ್ರತಿಭಟನೆ ತೋರಿದರು. ಅಧಿಕಾರಿಯಿಂದ ಮುಂದೆ ಸಿಟ್ಟನ್ನು ತಡೆಯಲಾಗಲಿಲ್ಲ. ತನ್ನ ಕೈಕೆಳಗಿನ ಪೊಲೀಸರಿಗೆ ಸನ್ನೆ ಮಾಡಿದೊಡನೆ, ನಾಲ್ಕೈದು ಮಂದಿ ಲೋಹಿಯಾ ಅವರನ್ನು ಹಠಾತ್ತನೆ ಎಳೆದು, ತಗ್ಗು ದಿನ್ನೆಯುಳ್ಳ ನೆಲದ ಮೇಲೆ ವೃತ್ತಾಕಾರದಲ್ಲಿ ಎಳೆದಾಡಿದರು. ಒಂದು ಗಂಟೆ ಎಳೆದಾಡಿದ ನಂತರ ಪೊಲೀಸರಿಗೆ ದಣಿವಾಗಿರಬೇಕು. ಲೋಹಿಯಾ ಅವರಿಗೆ ಆ ದೈಹಿಕ ಹಿಂಸೆಯಿಂದ ಮುಕ್ತಿ ದೊರೆಯಿತು. ತಮ್ಮ ಮೊಣಕಾಲು, ಮೊಣಕೈಯಿಂದ ರಕ್ತ ಹರಿಯುತ್ತಿದ್ದುದನ್ನು ಅವರು ನೋಡಿದರು."

ಆಂಗ್ಲರು ತಮ್ಮ ಆಡಳಿತಾವಧಿಯಲ್ಲಿ, ತಮ್ಮ ನಿರಂಕುಶಪ್ರಭುತ್ವ, ಆಡಳಿತ ವೈಖರಿಗೆ ಅಡ್ಡಿ - ಆತಂಕಗಳನ್ನೊಡ್ಡುತ್ತಿದ್ದ ಅನೇಕ ಭಾರತೀಯ ದೇಶಪ್ರೇಮಿಗಳನ್ನು 'ರಾಜಕೀಯ ವೈರಿ'ಗಳೆಂದೇ ಪರಿಗಣಿಸಿ

ನ್ಯಾಯಾಂಗದ ಚೌಕಟ್ಟಿನೊಳಗೆ ಅವರನ್ನಿರಿಸಿ ಕಠಿಣ ಶಿಕ್ಷೆಗಳಿಗೆ ಗುರಿಪಡಿಸುತ್ತಿದ್ದರು ಎಂಬುದು ಇಂದು ಇತಿಹಾಸ. ಆದರೆ, ಅದೇ ಬ್ರಿಟಿಷರು ಆಳರಸರ ಕೈಯೊಳಗಿದ್ದ ಭಾರತದ ನ್ಯಾಯಾಡಳಿತಕ್ಕೆ ಒಂದು ಸ್ಪಷ್ಟ ರೂಪವನ್ನು ಕೊಟ್ಟು, ನಮ್ಮ ಇಂದಿನ ನ್ಯಾಯಾಂಗಕ್ಕೂ ಒಂದು ಸ್ವರೂಪವನ್ನು ಕೊಟ್ಟ ಶಿಲ್ಪಿಗಳು ಎಂಬುದನ್ನು ನಾವು ಮರೆಯುವಂತಿಲ್ಲ. ಅವರ ಆಳ್ವಿಕೆಯಲ್ಲಿ ಸಮಾಜ ಮತ್ತು ಆಡಳಿತದ ಸುವ್ಯವಸ್ಥೆಗಾಗಿ ಹಾಗೂ ಒಂದು ಸ್ಪಷ್ಟ ಉದ್ದೇಶಕ್ಕಾಗಿ ದೇಶದಲ್ಲೆಡೆ ನಿರ್ಮಾಣಗೊಂಡ ಬಂದಿಖಾನೆಗಳಲ್ಲಿ, ಕರ್ನಾಟಕ ರಾಜ್ಯದ ಬಂದಿಖಾನೆಗಳ ಇತಿಹಾಸ ಮತ್ತು ವರ್ತಮಾನವನ್ನು ಮುಂದಿನ ಅಧ್ಯಾಯದಲ್ಲಿ ನೀಡಲಾಗಿದೆ.

❑ ❑

## ಅಡಿಟಿಪ್ಪಣಿ

೧. ಕಂಠೀರಾವ್, ೧೯೭೮. ಭಾರತೀಯ ನ್ಯಾಯಪದ್ಧತಿ. ಮೈಸೂರು, ಮೈಸೂರು ವಿಶ್ವವಿದ್ಯಾಲಯ. ಪುಟ ೩.

೨. Regoli, Robert, M., and Hewitt, John, D., 1991. Deliguency in Society : Child Centred appraoch. Newyork, Mc-Graw Hill Inc. Pp. 13.

೩. ರಾಘವಯ್ಯ, ವಿ., ೧೯೮೪. ಬುಡಕಟ್ಟು ನ್ಯಾಯ. ಅನು : ಅಕ್ಕಮಹಾದೇವಿ. ಮೈಸೂರು, ಮೈಸೂರು ವಿಶ್ವವಿದ್ಯಾಲಯ. ಪುಟ ೮.

೪. ಕಂಠೀರಾವ್, ೧೯೭೮. ಭಾರತೀಯ ನ್ಯಾಯಪದ್ಧತಿ. ಮೈಸೂರು, ಮೈಸೂರು ವಿಶ್ವವಿದ್ಯಾಲಯ. ಪುಟ ೨.

೫. Sukla Das, 1977. Crime and Punishment in Ancient India. New Delhi, Abhinav Publications. Pp. 14.

೬. ಕಂಠೀರಾವ್, ೧೯೭೮. ಭಾರತೀಯ ನ್ಯಾಯಪದ್ಧತಿ. ಮೈಸೂರು, ಮೈಸೂರು ವಿಶ್ವವಿದ್ಯಾಲಯ. ಪುಟ ೨೮.

೭. ಕಂಠೀರಾವ್, ೧೯೭೮. ಭಾರತೀಯ ನ್ಯಾಯಪದ್ಧತಿ. ಮೈಸೂರು, ಮೈಸೂರು ವಿಶ್ವವಿದ್ಯಾಲಯ. ಪುಟ ೭.

೮. ಕಂಠೀರಾವ್, ೧೯೭೮. ಭಾರತೀಯ ನ್ಯಾಯಪದ್ಧತಿ. ಮೈಸೂರು, ಮೈಸೂರು ವಿಶ್ವವಿದ್ಯಾಲಯ. ಪುಟ ೨೯.

೯. Encyclopaedia Britannica, Micropaedia, Vol 9. Pp. 710-711.

೧೦. ಅಶೋಕ, ೧೯೯೯. ಅಪರಾಧಶಾಸ್ತ್ರ ಮತ್ತು ನ್ಯಾಯವಿಜ್ಞಾನ. ಮೈಸೂರು, ಸುಧಾ ಪ್ರಕಾಶನ. ಪುಟ ೨೪೬.

೧೧. ಮೈಸೂರು ಸರಕಾರ, ಸಾಹಿತ್ಯ ಸಂಸ್ಕೃತಿ ಅಭಿವೃದ್ಧಿ ಇಲಾಖೆ, ೧೮೭೦. ಕರ್ನಾಟಕದ ಪರಂಪರೆ ಸಂಪುಟ ೨ : ಟಿಪ್ಪುವಿನ ಸ್ವಭಾವ ಮತ್ತು ಆಡಳಿತ ನೈಪುಣ್ಯ. ಪುಟ ೨೫೭-೨೬೦

೧೨. ಶರ್ಮ, ತೀ.ತಾ., ೧೯೮೩. ವಿಕ್ರಾಂತ ಭಾರತ. ಬೆಂಗಳೂರು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ. ಪುಟ ೧೦.

೧೩. ಇದೇ., ಪುಟ ೯೨-೯೬.

೧೪. ಹುಳಿಯಾರ್, ನಟರಾಜ್ ಮತ್ತು ನಾಗವಾರ, ಕಾಳೇಗೌಡ, ಸಂ., ೧೯೯೮. ಉತ್ತರ ದಕ್ಷಿಣ : ರಾಮಮನೋಹರ ಲೋಹಿಯಾ ಬರಹಗಳು ಸಂಪುಟ ೨ : ಬೆಂಗಳೂರು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ. ಪುಟ ೨೪೨.

೧೫. ಓಂಕಾರ್ ಶರದ್, ೨೦೦೦. ಲೋಹಿಯಾ, ಅನು : ಹಸನ್ ನಯೀಂ ಸುರಕೋಡ. ಬಳ್ಳಾರಿ, ಲೋಹಿಯಾ ಪ್ರಕಾಶನ. ಪುಟ ೯೮-೧೦೦.

೩

# ಕರ್ನಾಟಕದ ಬಂದಿಖಾನೆಗಳ ಇತಿಹಾಸ ಮತ್ತು ವರ್ತಮಾನ

ಭಾರತವನ್ನು ಆಕ್ರಮಿಸಿದ್ದ ಬ್ರಿಟಿಷ್ ಪ್ರಭುತ್ವ ತನ್ನ ಆಡಳಿತದ ಹಾದಿಯಲ್ಲಿ ಮುಳ್ಳಾಗಿ ಕಂಡುಬಂದ ಎಲ್ಲ ಭಾರತೀಯ ರಾಜಕೀಯ ವೈರಿಗಳನ್ನು ಬೇರು ಸಮೇತ ಕಿತ್ತು ಅತ್ತ ಎಸೆಯುವ ಹುಮ್ಮಸ್ಸು ರಭಸದಲ್ಲಿ ಇಡೀ ಭಾರತವನ್ನೇ ಒಂದು ಬಂದಿಖಾನೆಯನ್ನಾಗಿ ಪರಿವರ್ತಿಸುವ ಮನಸ್ಥಿತಿಯಲ್ಲಿದ್ದಾಗ, ದೇಶದೆಲ್ಲೆಡೆ ಬಂದಿಖಾನೆಗಳ ನಿರ್ಮಾಣಕ್ಕೆ ತೊಡಗಿಕೊಂಡಿತು. ಅದರ ಪರಿಣಾಮವಾಗಿ ಹಲವು ಪ್ರಾಂತ್ಯದೊಳಗೆ ಹಂಚಿ ಹರಿದು ಹೋಗಿದ್ದ ಮೈಸೂರು ರಾಜ್ಯ (ಈಗಿನ ಕರ್ನಾಟಕ)ದಲ್ಲೂ ಕೆಲವು ಬಂದಿಖಾನೆಗಳು ನಿರ್ಮಾಣಗೊಂಡವು. ಈ ಬಂದಿಖಾನೆಗಳ ನಿರ್ಮಾಣಕ್ಕೂ ಹಿಂದೆ ಆಳರಸರ ಕಾಲದಲ್ಲೇ ನಮ್ಮಲ್ಲಿ ಬಂದಿಖಾನೆಗಳೆಂಬ ವ್ಯವಸ್ಥೆ ಊರ್ಜಿತದಲ್ಲಿತ್ತು. ಅಂದಿನ ಬಂದಿಖಾನೆಗಳಿಗೂ ಇಂದು ನಮ್ಮಲ್ಲಿರುವ ಬಂದಿಖಾನೆಗಳಿಗೂ ಅಜಗಜಾಂತರ ವ್ಯತ್ಯಾಸವಿರುವುದನ್ನು ಈ ಅಧ್ಯಾಯದಲ್ಲಿ ಗಮನಿಸಬಹುದು.

## ೧. ಕರ್ನಾಟಕದ ಬಂದಿಖಾನೆಗಳ ಇತಿಹಾಸ : ಸ್ವಾತಂತ್ರ್ಯಪೂರ್ವ

ಬ್ರಿಟಿಷ್ ಪೂರ್ವದಲ್ಲಿ ಕರ್ನಾಟಕದಲ್ಲಿದ್ದ ಬಂದಿಖಾನೆಗಳ ಬಗ್ಗೆ ಇತಿಹಾಸದ ಪುಟಗಳಲ್ಲಿ ಅನೇಕ ಕಡೆ ಉಲ್ಲೇಖಗಳಿದ್ದರೂ, ಬಂದಿಖಾನೆಗಳಾಗಿ ಆ ಕಾಲದಲ್ಲಿ ಬಳಕೆಗೊಂಡ ಒಂದೆರಡು ಸ್ಮಾರಕಗಳನ್ನು ಬಿಟ್ಟರೆ ಅವುಗಳ ಭೌತಿಕ ಅಸ್ತಿತ್ವ ಎಲ್ಲೆಲ್ಲೂ ಕಂಡು ಬರುತ್ತಿಲ್ಲ. ಹೈದರ ಟಿಪ್ಪುವಿನ ಆಡಳಿತಾವಧಿಯಲ್ಲಿ, ಕೋಟೆಗೆ ತಾಗಿಕೊಂಡಂತಿದ್ದ ಬುರುಜು - ಬತ್ತೇರಿಗಳ ನೆಲಮಾಳಿಗೆಗಳು (Dungeons) ಸೆರೆಮನೆಗಳಾಗಿ ಬಳಕೆಯಲ್ಲಿದ್ದವು.[೧] ಇವು ಹೈದರನಿಂದ ನಿರ್ಮಿತವಾದವು.

'ಶ್ರೀರಂಗ ಪಟ್ಟಣದ ದಿಲ್ಲಿಗೇಟ್‌ಗಿಂತ ಸುಮಾರು ೧೫೦ ಯಾರ್ಡ್ ಪೂರ್ವದಲ್ಲಿ ಪಟ್ಟಣದ ಕೋಟೆಗೆ ತಾಗಿಕೊಂಡತಿರುವ ಒಂದು ಬತ್ತೇರಿ ಕಾಣಿಸುತ್ತದೆ. ಇದರ ಕೆಳಗಡೆ ನೋಡುಗರ ಕಣ್ಣಿಗೆ ಕಾಣಿಸದಂತಹ ನೆಲಮಾಳಿಗೆ

ಅಥವ ಕತ್ತಲೆ ಕೋಣೆಯಂತೂ ತೀರಾ ರಹಸ್ಯವಾದದು. ಸುಮಾರು ೧೦೦' x ೪೦' ವಿಸ್ತೀರ್ಣದ ತಗ್ಗು ಮಾಡಿನ ಈ ನೆಲಮಾಳಿಗೆಯ ಗೋಡೆಗಳು ಕಲ್ಲು ಚಪ್ಪಡಿಯಿಂದ ಕಟ್ಟಲ್ಪಟ್ಟು ಕಾರಾಗೃಹವಾಗಿ ಬಳಸಲ್ಪಟ್ಟಿದೆ. ಗೋಡೆಗಳಿಗೆ ರಂಧ್ರ ಕೊರೆದು ಕಬ್ಬಿಣದ ಕೊಂಡಿಗಳನ್ನು ಅಳವಡಿಸಲಾಗಿದೆ. ಕೈದಿಗಳ ಕೈಗೆ ತೊಡಿಸಿದ ಕೋಳ - ಸರಪಳಿಗಳನ್ನು ಈ ಕೊಂಡಿಗಳಿಗೆ ಬಿಗಿಯಲಾಗುತ್ತಿತ್ತು. ಟಿಪ್ಪುವಿನ ಕಾಲದಲ್ಲಿ ಬಹಳಷ್ಟು ಇಂಗ್ಲೀಷ್ ಕೈದಿಗಳನ್ನು ಈ ಕೋಣೆಯಲ್ಲಿ ಬಂಧಿಸಿಡಲಾಗುತ್ತಿದ್ದು. ಸಾಕಷ್ಟು ಕಾವಲುಗಾರರು ಅವರನ್ನು ಕಾಯುತ್ತಿದ್ದರು. ಕರ್ನಲ್ ಬ್ಯಾಲೆ (Col. Bailey) ಯನ್ನು ಇದೇ ಡಂಜನ್‌ನಲ್ಲಿ ಸೆರೆಹಾಕಲಾಗಿತ್ತು. ಅದಕ್ಕಾಗಿಯೇ ಇದೀಗ ಇದನ್ನು ಬ್ಯಾಲೇಸ್ ಡಂಜನ್ ಎಂದು ಹೆಸರಿಸಲಾಗಿದೆ.[೨]

ಹಾಗೆಯೇ ಶ್ರೀರಂಗ ಪಟ್ಟಣದ ಕೋಟೆಯ ಈಶಾನ್ಯದಲ್ಲಿರುವ ಬತ್ತೇರಿಯೊಂದರ ತಗ್ಗು ಮಾಡಿನ ನೆಲಮಾಳಿಗೆ (೪೮೩೨ ಚದುರ ಅಡಿ ವಿಸ್ತೀರ್ಣ) ಸೆರೆಮನೆಯನ್ನು ಮಿ. ಥಾಮಸ್ ಇನ್‌ಮನ್ ಎಂಬ ಎಂಜಿನಿಯರ್ ಪತ್ತೆ ಮಾಡಿದ್ದ. ಇದು ಕೂಡ ಹೈದರ - ಟಿಪ್ಪು ಆಡಳಿತದಲ್ಲಿ ಕೈದಿಗಳನ್ನು ಶಿಕ್ಷಿಸುವ ತಾಣವಾಗಿತ್ತು. ಕರ್ನಾಟಕದ ಸ್ವಾತಂತ್ರ್ಯ ಹೋರಾಟದ ಇತಿಹಾಸದಲ್ಲಿ ಮಿಂಚಿನಂತೆ ಹಾದು ಹೋದ ಮಹತ್ವಾಕಾಂಕ್ಷಿ ದೊಂಡಿಯ ವಾಘ್‌ನನ್ನು ಈ ಸೆರೆಮನೆಯಲ್ಲಿಯೇ ಇರಿಸಲಾಗಿತ್ತು.

ಟಿಪ್ಪುಸುಲ್ತಾನನು ಇಂಗ್ಲಿಷ್ ಕೈದಿಗಳನ್ನು ನೆಲಮಾಳಿಗೆಯ ಸೆರೆಮನೆಯಲ್ಲಿಟ್ಟು ಬಹಳ ಹೀನವಾಗಿ ಕಾಣುತ್ತಿದ್ದನೆಂಬ ಅನೇಕ ದಂತಕತೆಗಳು ನಮ್ಮಲ್ಲಿವೆ. ಆದರೆ ಟಿಪ್ಪುವು ಇಂಗ್ಲಿಷ್ ಕೈದಿಗಳನ್ನು ಮಾನವೀಯತೆಯಿಂದ ಕಾಣುತ್ತಿದ್ದನೆಂಬುದಕ್ಕೆ ಪ್ರಾಚೀನ ಉಲ್ಲೇಖವೂ ಲಭ್ಯವಿದೆ. ೧೭೮೬ ರಲ್ಲಿ ಕಂಪನಿ ಸರಕಾರದ ಇಂಗ್ಲಿಷ್ ಮುಖ್ಯಸ್ಥ ರಾಬ್‌ಸನ್ನನ ಬರವಣಿಗೆಯೇ ಈ ಉಲ್ಲೇಖ. ಟಿಪ್ಪುಸುಲ್ತಾನನು ತಾನು ಸೆರೆಹಿಡಿದ ಕರ್ನಲ್ ಬ್ರೆತ್‌ವೈಟ್ ಮತ್ತು ಇತರ ಕೈದಿಗಳನ್ನು ತನ್ನ ಬಳಿ ಕರೆತರುವಂತೆ ಆಜ್ಞಾಪಿಸಿ, ಅವರುಗಳನ್ನು ಸ್ವತಃ ತಾನೇ ಪರೀಕ್ಷಿಸಿ, ಆ ಗಾಯಾಳು ಕೈದಿಗಳಿಗೆ ಮುಂದಿನ ಔಷಧೋಪಚಾರ ಮಾಡಲು ಅವರೊಡನೆ ಫ್ರೆಂಚ್ ಶಸ್ತ್ರವೈದ್ಯರನ್ನು ಹಳ್ಳಿಗಳಿಗೆ ಕಳುಹಿಸಿಕೊಟ್ಟನಲ್ಲದೆ.... ಟಿಪ್ಪುವು ಅವರ ಉಡುಪಿಗಾಗಿ ನವಿರಾದ ಬೆಳ್ಳನೆಯ ಹತ್ತಿಬಟ್ಟೆಗಳನ್ನು, ಗಾಯಗಳಿಗೆ ಪಟ್ಟಿಕಟ್ಟಲು ಒರಟು ಬಟ್ಟೆಗಳನ್ನು ಮತ್ತು ಮೂವತ್ತು ಪಗೋಡ ನಾಣ್ಯಗಳನ್ನು ಕಳುಹಿಸಿಕೊಟ್ಟನು. ಹಾಗೂ ಆತ ತಾನು ಸೆರೆಹಿಡಿದ ದಂಡನಾಯಕ ಬೆಯರ್ಡ್‌ನನ್ನು ಬಂದಿಖಾನೆಯಲ್ಲಿಟ್ಟನೇ ಹೊರತು ನೆಲಮಾಳಿಗೆಯ ಕತ್ತಲೆಯ ಕೋಣೆಯಲ್ಲಲ್ಲ. ಟಿಪ್ಪುಸುಲ್ತಾನನ ಕಾಲದಲ್ಲಿ ಸಾಂಪ್ರದಾಯಿಕ ಸೆರೆಮನೆಗಳ ಜತೆಗೆ ನೆಲಮಾಳಿಗೆಯ ಸೆರೆಮನೆಗಳೂ ಇದ್ದವು ಹಾಗೂ ಟಿಪ್ಪುವು ಯುದ್ಧ ಕೈದಿಗಳನ್ನು ಅಮಾನವೀಯವಾಗಿ ಕಾಣುತ್ತಿರಲಿಲ್ಲ ಎಂಬುದನ್ನು ಈ ಉಲ್ಲೇಖ ಸ್ಪಷ್ಟಪಡಿಸುತ್ತದೆ.

ಡಿಸೆಂಬರ್ ೫, ೧೮೨೪ರ ಕಿತ್ತೂರ ಸಂಗ್ರಾಮದಲ್ಲಿ ರಾಣಿ ಚೆನ್ನಮ್ಮನನ್ನು ಕುತಂತ್ರದಲ್ಲಿ ಸೋಲಿಸಿದ ಬ್ರಿಟಿಷ್ ಪಡೆ ಕಿತ್ತೂರ ಕೋಟೆಯನ್ನೊಡೆದು, ಆಕೆಯನ್ನು ಸೆರೆಹಿಡಿದು ಬೈಲಹೊಂಗಲದ ಬಂದಿಖಾನೆಯಲ್ಲಿ ಬಂಧಿಸಿಟ್ಟಿತು. ಬ್ರಿಟಿಷರಿಂದ ಮತ್ತೆ ಕಿತ್ತೂರಿಗೆ ಬಿಡುಗಡೆಯಿಲ್ಲ; ಸ್ವಾತಂತ್ರ್ಯ, ಆತ್ಮಗೌರವವಿಲ್ಲದ ಬದುಕು, ಬದುಕೇ ಅಲ್ಲ ಎಂಬ ಚಿಂತೆಯಲ್ಲೇ ಬೆಂದು ಬಸವಳಿದ ಚೆನ್ನಮ್ಮ ೧೮೨೯ರ ಫೆಬ್ರವರಿ ೨೧ ರಂದು ಅದೇ

ಬಂದಿಖಾನೆಯೊಳಗೆ ವೀರ ಮರಣವನ್ನಪ್ಪಿದಳು. ಬೈಲಹೊಂಗಲದ ಈ ಬಂದಿಖಾನೆ ಬ್ರಿಟಿಷ್ ಕರ್ನಾಟಕದ ಬಂದಿಖಾನೆ ಚರಿತ್ರೆಯಲ್ಲಿ ಅಜರಾಮರ. ೧೮೨೪ ಡಿಸೆಂಬರ್ ೫ ರ ಕಿತ್ತೂರ ಸಂಗ್ರಾಮದಲ್ಲಿ ಭಾಗವಹಿಸಿದ್ದ ರಾಣಿ ಚೆನ್ನಮ್ಮನ ಪ್ರಮುಖ ಅನುಯಾಯಿ ಹಾಗೂ ಸೇನೆಯ ಅಧಿಪತಿ ಸರ್ದಾರ ಗುರುಸಿದ್ದಪ್ಪನನ್ನು ಕರ್ನಲ್ ಡೀಕನ್ ಮತ್ತು ಕರ್ನಲ್ ವಾಕರ್‌ನ ನೇತೃತ್ವದಲ್ಲಿದ್ದ ಇಂಗ್ಲಿಷ್ ಸೈನ್ಯವು ಬಂಧಿಸಿ ಬೆಳಗಾವಿ ಕೋಟೆ ಸೆರೆಮನೆಯಲ್ಲಿ ಇರಿಸಿತು.[೩] ಕರ್ನಾಟಕದಲ್ಲಿ ಈಗ ಅಸ್ತಿತ್ವದಲ್ಲಿರುವ ಹೆಚ್ಚಿನ ಎಲ್ಲ ಬಂದಿಖಾನೆಗಳು ಅಸ್ತಿತ್ವಕ್ಕೆ ಬಂದಿದ್ದು ಕಿತ್ತೂರ ಸಂಗ್ರಾಮದ ನಂತರದಲ್ಲಿ. ಭಾರತೀಯರನ್ನು ತಮ್ಮ ದಾಸ್ಯದೊಳಗಿಟ್ಟು ಆಳಬೇಕೆಂಬ ಛಲದಿಂದ ಇಡಿಯ ಭಾರತವನ್ನು ಜೈಲನ್ನಾಗಿ ಪರಿವರ್ತಿಸ ಹೊರಟ ಬ್ರಿಟಿಷರು ಕರ್ನಾಟಕದಲ್ಲಿ ಮತ್ತೆ ಕಿತ್ತೂರಿನಂಥ ಅನೇಕ ಸಂಗ್ರಾಮಗಳನ್ನು ಎದುರಿಸಬೇಕಾಗಬಹುದು ಎಂಬ ಮುನ್ನೆಚ್ಚರಿಕೆಯಿಂದ ಸಾಧ್ಯವಾದಷ್ಟು ಬಂದಿಖಾನೆಗಳನ್ನು ನಿರ್ಮಿಸತೊಡಗಿದರು. ಯಾವ ಪ್ರಾಂತ್ಯದಲ್ಲಿ ಸ್ವಾತಂತ್ರ್ಯಕ್ಕಾಗಿ ದಂಗೆ ಎದ್ದೇಳುತ್ತದೋ ಆ ಪ್ರಾಂತ್ಯದಲ್ಲೊಂದು ಅಥವ ಅದರ ಹತ್ತಿರದ ಪ್ರಾಂತ್ಯದಲ್ಲೊಂದು ಬಂದಿಖಾನೆ ತಲೆ ಎತ್ತತೊಡಗಿತು.

೧೮೩೧ ರಲ್ಲಿ ಬ್ರಿಟಿಷರು ಮೈಸೂರು ರಾಜ್ಯದ ಆಡಳಿತವನ್ನು ಪಡೆದುಕೊಂಡರು. ಆಡಳಿತ ಪಡೆದ ಮೂರು ವರ್ಷದಲ್ಲೇ (೧೮೩೪ ರಲ್ಲಿ) ಕೊಡಗಿನ ರಾಜ ಚಿಕವೀರರಾಜನನ್ನು ಪದಚ್ಯುತಗೊಳಿಸಿ ಅಲ್ಲಿಯ ಆಡಳಿತವನ್ನೂ ತಾವೇ ವಹಿಸಿಕೊಂಡರು. ಇದರ ಫಲವಾಗಿ ಅಲ್ಲಲ್ಲಿ ದಂಗೆ ಎದ್ದಾಗ ಅದನ್ನು ತಣಿಸಲು, ದಂಗೆಕೋರರನ್ನು ಮಣಿಸಲು ಮಂಗಳೂರಲ್ಲಿ ಒಂದು ಬಂದಿಖಾನೆಯನ್ನು ನಿರ್ಮಿಸಿದರು. ಚಿಕವೀರರಾಜನ ಪದಚ್ಯುತಿ ನಂತರ ಅಪರಾಂಪರನೆಂಬವನು ೧೮೩೫ ರಲ್ಲಿ ತಾನೇ ರಾಜವಂಶನೆಂದು ಬಂಡಾಯ ಹೂಡಿ ಬ್ರಿಟಿಷ್ ವಿರೋಧಿ ಚಟುವಟಿಕೆ ನಡೆಸಿದಾಗ ಆತನನ್ನು ಬ್ರಿಟಿಷ್ ಆಡಳಿತ ಬಂಧಿಸಿ ಆಗಲೇ ಅಸ್ತಿತ್ವದಲ್ಲಿದ್ದ ಮೈಸೂರ ಬಂದಿಖಾನೆಯಲ್ಲಿಟ್ಟರೆ, ಆತನ ನಂತರ ೧೮೩೭ ರಲ್ಲಿ ತಾನೂ ಆ ಚಿಕ್ಕವೀರನ ರಾಜವಂಶಜನೆಂದು ಬಂದ ಕಲ್ಯಾಣಪ್ಪನೆಂಬವನನ್ನೂ ಬಂಧಿಸಿ ಮಡಿಕೇರಿಯ ಕೋಟೆಯಲ್ಲಿ ಸೆರೆಯಲ್ಲಿಟ್ಟರು. ನಂತರ ಪುಟ್ಟಬಸಪ್ಪನೆಂಬ ಜಂಗಮನೊಬ್ಬ ತಾನೇ ಬಂಧನದಿಂದ ಬಿಡಿಸಿಕೊಂಡು ಬಂದಿರುವ ಕಲ್ಯಾಣಪ್ಪನೆಂದು ಬಂಡಾಯ ಮುಂದುವರಿಸಿದಾಗ ಬ್ರಿಟಿಷ್ ಸರಕಾರ ಪೇಚಿಗೆ ಸಿಲುಕಿತು. ನಕಲಿ ಕಲ್ಯಾಣಪ್ಪನ ಜತೆಗೆ ಸುಳ್ಯ, ಪುತ್ತೂರು, ಮಂಗಳೂರ ಜನತೆ ಸೇರಿಕೊಂಡು ಮಂಗಳೂರ ಬಂದಿಖಾನೆಯನ್ನು ಮುರಿದು, ಅಲ್ಲಿದ್ದ ಕೈದಿಗಳನ್ನು ಬಿಡುಗಡೆ ಮಾಡಿ ಐರೋಪ್ಯರ ಮನೆಗೆ ಕೊಳ್ಳಿ ಇಟ್ಟಾಗ ಆ ದಂಗೆಕೋರರನ್ನು ಮಣಿಸಲು ತಲಚೇರಿಯಿಂದ ಬ್ರಿಟಿಷ್ ಸೈನ್ಯ ಬಂದು 'ಅಮರ ಸುಳ್ಯದ ಬಂಡಾಯ' ಅಥವ 'ಕಲ್ಯಾಣಪ್ಪನ ಕಾಟಕಾಯಿ' ಎಂದೇ ಹೆಸರು ಪಡೆದ ಈ ದಂಗೆಯನ್ನು ಹತೋಟಿಗೆ ತಂದಿತಲ್ಲದೆ ದಂಗೆಯ ಸೂತ್ರಕಾರರನ್ನು ಬಂಧಿಸಿತು. ಮೇ ೧೩, ೧೮೩೭ ರಂದು ಸೈನಿಕ ವಿಚಾರಣೆ ನಡೆಸಿ ದಂಗೆಯ ಮುಖಂಡರಾದ ಬಂಗರಸ ಮತ್ತು ನಕಲಿ ಕಲ್ಯಾಣಸ್ವಾಮಿಯನ್ನು ಮಂಗಳೂರಿನ ಬಿಕರ್ನಕಟ್ಟೆಯಲ್ಲಿ ಸಾರ್ವಜನಿಕರೆದುರು ಗಲ್ಲಿಗೇರಿಸಿತು.[೪] ಇತರ ಕೆಲವು ತಪ್ಪಿತಸ್ಥರನ್ನು ದೇಶಾಂತರ ಶಿಕ್ಷೆ ವಿಧಿಸಿ ಭಾರತದಿಂದ ಹೊರಗಟ್ಟಲಾಯಿತು. ಮತ್ತೆ ಕೆಲವರಿಗೆ ಜೀವಾವಧಿ ಶಿಕ್ಷೆ ವಿಧಿಸಲಾಯ್ತು. ಈ ಎಲ್ಲ ಘಟನೆಗಳ ಕಾಲದಲ್ಲಿ ಬ್ರಿಟಿಷರಿಗೆ ಸುತ್ತಲ ಸೀಮೆಗೆ ಬಂದಿಖಾನೆಗಳ ಅಗತ್ಯ ಎಷ್ಟಿದೆ ಎಂಬ ಮನವರಿಕೆಯಾಗತೊಡಗಿತು.

ದಕ್ಷಿಣ ಕನ್ನಡ ಜಿಲ್ಲೆಯ ಈ ಪ್ರಥಮ ಸ್ವಾತಂತ್ರ್ಯ ದಂಗೆಯ ನಂತರ ಕಂಪನಿ ಅಧಿಕಾರಿಗಳಿಗೆ ಸುಭದ್ರ ಬಂದಿಖಾನೆಗಳ ಅನಿವಾರ್ಯತೆ, ಅವಶ್ಯಕತೆಯಿದೆ ಎಂಬ ಅರಿವಾದೊಡನೆ, ಈಸ್ಟ್ ಇಂಡಿಯಾ ಕಂಪನಿ ಮಂಡಳಿಗೆ ಮನವಿ ಸಲ್ಲಿಸಿ ಬಂದಿಖಾನೆಯ ಅನಿವಾರ್ಯತೆಯನ್ನು ಅರಿಕೆ ಮಾಡಿಕೊಳ್ಳಲಾಯ್ತು. ಬಳ್ಳಾರಿ ಜಿಲ್ಲೆಯ (ಮದರಾಸು ಕರ್ನಾಟಕ ಪ್ರಾಂತ್ಯದ) ಆಗಿನ ಮುಖ್ಯ ಕಲೆಕ್ಟರ್‌ನಾಗಿದ್ದ ಸರ್ ಥಾಮಸ್ ಮುನ್ರೊ ೧೮೦೬ ರಲ್ಲೇ ಕಂಪನಿಯ ಮಂಡಳಿಗೆ ಪತ್ರ ಬರೆದು ಬಳ್ಳಾರಿ ಜಿಲ್ಲೆಯಲ್ಲಿ ಒಂದೇ ಒಂದು ಬಂದಿಖಾನೆ ಇಲ್ಲದಿರುವುದನ್ನು ಸೂಚಿಸುತ್ತಾ, ಅಪರಾಧಿಗಳನ್ನು ತೆರೆದ ಚೌಲ್ಟ್ರಿಯಲ್ಲಿ, ಕೋಟೆ ಬುರುಜಿನಡಿಯ ನೆಲಮಾಳಿಗೆಯಲ್ಲಿ ಬಂಧಿಸಿಡಬೇಕಾದ ಕಷ್ಟವನ್ನು ನಿವೇದಿಸಿಕೊಳ್ಳುತ್ತಾ, ಬಲವಾದ ಗೋಡೆಯಿಲ್ಲದಿರುವ ಈ ಕಟ್ಟಡಗಳಿಂದ ಕೈದಿಗಳು ತಪ್ಪಿಸಿಕೊಳ್ಳುವುದನ್ನು ತಡೆಯುವುದು ಎಷ್ಟೊಂದು ಕಷ್ಟದ ಕೆಲಸ ಎಂದು ಮಂಡಳಿಗೆ ಮನವರಿಕೆಯಾಗುವಂತೆ ಬರೆದು ಹೊಸ ಬಂದಿಖಾನೆಗಳನ್ನು ನಿರ್ಮಿಸಬೇಕೆಂದು ಭಿನ್ನವಿಸಿಕೊಂಡಿದ್ದ.[೫]

ಪ್ರಾಂತೀಯ ಕಲೆಕ್ಟರುಗಳ ಮನವಿಯನ್ನು ಗಂಭೀರವಾಗಿ ಪರಿಗಣಿಸಿ ಈಸ್ಟ್ ಇಂಡಿಯಾ ಕಂಪನಿ ೧೮೩೧ - ೧೮೫೬ ರ ಮಧ್ಯೆ ರಾಜ್ಯದಲ್ಲಿ ಹಲವು ಬಂದಿಖಾನೆಗಳನ್ನು ನಿರ್ಮಾಣ ಮಾಡಿ, ಹಲವು ಹಳೆಯ ಅಥವ ಕೆಳವರ್ಗದ ಬಂದಿಖಾನೆಗಳನ್ನು ನವೀಕರಿಸಿ ಮೇಲ್ದರ್ಜೆಗೇರಿಸಿತು.

## ೧.೧ ಹಳೆ ಮೈಸೂರು ಪ್ರಾಂತ್ಯದ ಬಂದಿಖಾನೆಗಳು

ಹಳೆ ಮೈಸೂರು ಪ್ರಾಂತ್ಯದಲ್ಲಿ ವ್ಯವಸ್ಥಿತ ರಾಜ್ಯಭಾರ ಇನ್ನೂ ರೂಪುಗೊಳ್ಳಬೇಕಾದ (೧೮೩೧ - ೧೮೫೬ ರ) ಅವಧಿಯಲ್ಲಿ ಆ ಪ್ರಾಂತ್ಯದಲ್ಲಿ ಎಂಟು ಬಂದಿಖಾನೆಗಳಿದ್ದವು. ಈ ಎಂಟು ಬಂದಿಖಾನೆಗಳಲ್ಲಿ ಒಂದಾಗಿದ್ದ (೧೮೩೧ ರಲ್ಲಿ ಆರಂಭಗೊಂಡ) ಮೈಸೂರಿನ ಬಂದಿಖಾನೆಯೊಂದು ನವೀಕರಣಗೊಂಡು, ೧೮೬೨ ರಲ್ಲಿ ಮೈಸೂರು ಜಿಲ್ಲಾ ಬಂದಿಖಾನೆಯಾಗಿ ಮೇಲ್ದರ್ಜೆಗೇರಿತು. ೧೮೬೨ ರಲ್ಲೇ ಹೊಸ ಬಂದಿಖಾನೆ ಕಟ್ಟಡಕ್ಕೆ ಈ ಬಂದಿಖಾನೆ ಸ್ಥಳಾಂತರಗೊಂಡಿತು. ೧೯೩೩ ರಲ್ಲಿ ಈ ಜಿಲ್ಲಾ ಬಂದಿಖಾನೆ ಮತ್ತೆ ಉಪ ಬಂದಿಖಾನೆಯಾಗಿ ಕೆಳದರ್ಜೆಗಿಳಿದು, ರಾಜ್ಯದ ಏಕೀಕರಣವಾದೊಡನೆ ೧೯೫೬ ರಲ್ಲಿ ಮತ್ತೆ ಜಿಲ್ಲಾ ಬಂದಿಖಾನೆಯಾಗಿ ಭಡ್ತಿ ಪಡೆಯಿತು. ೧೯೮೭ ರಲ್ಲಿ ಇದು ಮೈಸೂರು ಕೇಂದ್ರ ಬಂದಿಖಾನೆಯಾಗಿ ತನ್ನ ಸ್ಥಾನವನ್ನು ಬದಲಿಸಿಕೊಂಡಿತು.[೬] ಇದೇ ಪ್ರಾಂತ್ಯಕ್ಕೆ ಸೇರಿದ್ದ ಬೆಂಗಳೂರಿನಲ್ಲಿ ೧೮೬೩ ರಲ್ಲಿ 'ಬೆಂಗಳೂರು ಕೇಂದ್ರ ಬಂದಿಖಾನೆ'ಯನ್ನು ಬ್ರಿಟಿಷ್ ಸರಕಾರ ಸ್ಥಾಪಿಸಿತು. ಈ ಬಂದಿಖಾನೆ, ರಾಜ್ಯದ ಇತರ ಬಂದಿಖಾನೆಗಳಿಗೆ ಮಾದರಿಯಾಗಿದ್ದು ಇದು ಭಾರತದಲ್ಲೇ ಪ್ರಮುಖ ಬಂದಿಖಾನೆ ಎನಿಸಿತ್ತು. ಸುಮಾರು ೧೭.೫ ಎಕ್ರೆ ಒಳ ವಿಸ್ತೀರ್ಣವುಳ್ಳ ಈ ಬಂದಿಖಾನೆಯಲ್ಲಿ ೭೬೬ ಕೈದಿಗಳು ಆರಾಮವಾಗಿ ಇರುವಷ್ಟು ಅಧಿಕೃತ ಸ್ಥಳಾವಕಾಶವಿದ್ದು, ಬಂದಿಖಾನೆ ಕಟ್ಟಡವನ್ನು ಆರು ವಿಶಾಲ ಬ್ಯಾರಕ್ಸ್ ಅಥವ ಬ್ಲಾಕ್‌ವುಳ್ಳ 'Panoptican' ಶೈಲಿಯಲ್ಲಿ ಕಟ್ಟಲಾಗಿತ್ತು.[೭] ೧೮೭೯ ರಿಂದ ಹಳೆ ಮೈಸೂರು ಪ್ರದೇಶದ ಬಂದಿಖಾನೆಗಳಲ್ಲಿ ೧೮೭೦ ರ 'ಮೈಸೂರು ಬಂದಿಖಾನೆ ಕಾಯಿದೆ' ಜಾರಿಗೊಳಿಸಲಾಗಿತ್ತು. ಬ್ರಿಟಿಷ್ ಕಾಲದ ಈ ಬೆಂಗಳೂರು ಕೇಂದ್ರ ಬಂದಿಖಾನೆ ಕಟ್ಟಡವನ್ನು ೨೦೦೧ ಆಗಸ್ಟ್ ೧೫ ರಂದು ಸಂಪೂರ್ಣವಾಗಿ ಬೆಂಗಳೂರು ಮಹಾನಗರಪಾಲಿಕೆಗೆ ಬಿಟ್ಟುಕೊಟ್ಟು ಬೆಂಗಳೂರಿನ ಬೇಗೂರು ಹೋಬಳಿ ಪರಪ್ಪನ ಅಗ್ರಹಾರದಲ್ಲಿ ನಿರ್ಮಾಣಗೊಂಡ, ೨೧೦೦ ಕೈದಿಗಳಿಗೆ

ಸ್ಥಳಾವಕಾಶವುಳ್ಳ ಹೊಸ ಬಂದಿಖಾನೆ ಕಟ್ಟಡ 'ಪರಪ್ಪನ ಅಗ್ರಹಾರದ ಬೆಂಗಳೂರು ಕೇಂದ್ರ ಬಂದಿಖಾನೆ'ಗೆ ಸ್ಥಳಾಂತರಿಸಲಾಯಿತು. ಈ ಬಂದಿಖಾನೆ ೧೪೯.೧೮ ಎಕ್ರೆ ವಿಸ್ತೀರ್ಣ ಸ್ಥಳವನ್ನು ಹೊಂದಿದೆ.

**೧.೨ ಮದರಾಸು ಕರ್ನಾಟಕ ಪ್ರದೇಶದ ಬಂದಿಖಾನೆಗಳು**

೧೮೦೦ ರಲ್ಲಿ ಹೈದರಾಬಾದಿನ ನಿಜಾಮ ಬ್ರಿಟಿಷರೊಂದಿಗೆ ಮಾಡಿಕೊಂಡ ಒಪ್ಪಂದದಂತೆ ಬಳ್ಳಾರಿ ಅನಂತಪುರ, ಕಡಪಾ ಜಿಲ್ಲೆಗಳನ್ನು ಈಸ್ಟ್ ಇಂಡಿಯಾ ಕಂಪನಿಗೆ ಬಿಟ್ಟುಕೊಟ್ಟ ಸಂದರ್ಭದಲ್ಲಿ ಬಳ್ಳಾರಿ ಜಿಲ್ಲೆಯಲ್ಲಿ ಒಂದೇ ಒಂದು ಬಂದಿಖಾನೆಯಿರಲಿಲ್ಲ. ೧೮೦೬ ರಲ್ಲಿ, ಆ ಜಿಲ್ಲೆಗಳ ಮುಖ್ಯ ಕಲೆಕ್ಟರನಾಗಿದ್ದ ಸರ್ ಥಾಮಸ್ ಮುನ್ರೊ ಈಸ್ಟ್ ಇಂಡಿಯಾ ಕಂಪನಿಯ ಬೋರ್ಡ್‌ಗೆ ಪತ್ರ ಬರೆದು ಬಂದಿಖಾನೆಯ ಅಗತ್ಯವನ್ನು ನಿವೇದಿಸಿಕೊಂಡಿದ್ದ. ಮುನ್ರೋನ ಸಲಹೆಯನ್ನು ಗಮನಿಸಿದ ಕಂಪನಿ ಸರಕಾರ ೧೯ನೇ ಶತಮಾನದ ಮಧ್ಯದಲ್ಲಿ ಬಳ್ಳಾರಿ ಜಿಲ್ಲೆಯ ಒಂಬತ್ತು ತಾಲೂಕುಗಳಲ್ಲಿ ೯ ಉಪಬಂದಿಖಾನೆಗಳನ್ನು ಹಾಗೂ ಬಳ್ಳಾರಿಯಲ್ಲಿ ಒಂದು ಜಿಲ್ಲಾ ಬಂದಿಖಾನೆಯನ್ನು ಸ್ಥಾಪಿಸಿತು. ೧೮೮೪ ರಲ್ಲಿ ಈ ಬಂದಿಖಾನೆಯನ್ನು ಕೇಂದ್ರ ಬಂದಿಖಾನೆಯನ್ನಾಗಿ ಪರಿವರ್ತಿಸಲಾಯಿತು.

೧೯೨೧ ರಲ್ಲಿ ಬಳ್ಳಾರಿಯ ಅಲ್ಲೀಪುರದಲ್ಲಿ ಮತ್ತೊಂದು ಕೇಂದ್ರ ಬಂದಿಖಾನೆಯ ಸ್ಥಾನಮಾನವುಳ್ಳ ಬಂದಿಖಾನೆಯನ್ನು ವಿಶೇಷ ಉದ್ದೇಶಕ್ಕಾಗಿ ಸ್ಥಾಪಿಸಲಾಯಿತು. ಕೇರಳದ ಮಲಬಾರ್ ಪ್ರಾಂತ್ಯದ ಮಾಪ್ಪೆ ರೈತರು ಕರ ನಿರಾಕರಿಸಿ ಬ್ರಿಟಿಷರ ವಿರುದ್ಧ ದಂಗೆ ಎದ್ದಾಗ ಆ ದಂಗೆಯನ್ನು ಮಟ್ಟಹಾಕಬೇಕೆಂದು ಕಂಪನಿ ಸರಕಾರ ನಿರ್ಧರಿಸಿ ದಂಗೆಯಲ್ಲಿ ಪಾಲ್ಗೊಂಡ ಎಲ್ಲರನ್ನೂ ಬಂಧಿಸಿ ಬಳ್ಳಾರಿಗೆ ತಂದು, ಬಳ್ಳಾರಿಯ ಜಿಲ್ಲಾ ಬಂದಿಖಾನೆಯಲ್ಲಿ ಸ್ಥಳಾವಕಾಶದ ಕೊರತೆಯೆಂದು, ಅಲ್ಲಿನ ಕಂಟೋನ್ಮೆಂಟ್ ಪ್ರದೇಶದ ಪೋಲೋ ಮೈದಾನದಲ್ಲಿ ತಾತ್ಕಾಲಿಕ ಗುಡಾರಗಳನ್ನೆಬ್ಬಿಸಿ ಅವರನ್ನೆಲ್ಲ ಅದರೊಳಗೆ ತುಂಬಿಸಿಟ್ಟಿತ್ತು. ಸಾವಿರಕ್ಕೂ ಹೆಚ್ಚಿದ್ದ ಈ ಕೈದಿಗಳನ್ನು ಬಂಧಿಸಿಡುವುದಕ್ಕಾಗಿ ೧೯೨೧ ರಲ್ಲಿ ಅಲ್ಲೀಪುರದಲ್ಲಿ ಬಂದಿಖಾನೆಯನ್ನು ಸ್ಥಾಪಿಸಲಾಯಿತು. ಆದರೆ ದಿನಕಳೆದಂತೆ ಮಲಬಾರ್‌ನ ರೈತ ದಂಗೆಯ ಹುಮ್ಮಸ್ಸು ಕ್ಷೀಣಿಸುವ ಬದಲು ಪ್ರಬಲವಾಗುತ್ತಾ ಹೋದಂತೆ, ಬಳ್ಳಾರಿಗೆ ಇನ್ನಷ್ಟು ಸಾವಿರ ಮಾಪ್ಪಾ ಕೈದಿಗಳನ್ನು ರವಾನಿಸಲಾಯ್ತು. ಅಲ್ಲೀಪುರ ಬಂದಿಖಾನೆಯೇ ತುಂಬಿ ತುಳುಕುತ್ತಿದ್ದಂತೆ, ೧೯೨೨ ರಲ್ಲಿ ಆ ಹೊಸ ಬಂದಿಖಾನೆಗೆ ತಗಲಿದಂತಿದ್ದ ಹಳೆಯ ಸೈನಿಕ ಬ್ಯಾರಕ್ಕುಗಳನ್ನು ಖರೀದಿಸಿ ಅದೇ ಬಂದಿಖಾನೆಗೆ ಜೋಡಿಸಿ ಸುತ್ತಲೂ ಜೋಡಿ ಮುಳ್ಳುತಂತಿಗಳ ಬೇಲಿ ನಿರ್ಮಿಸಿ ಆ ಬೇಲಿಗೆ ವಿದ್ಯುತ್ ಹರಿಸಲಾಯ್ತು. ೨,೫೦೦ ಕೈದಿಗಳಿಗೆ ಸ್ಥಳಾವಕಾಶ ಕಲ್ಪಿಸಿ ನಾಲ್ಕು ಸಾವಿರ ಕೈದಿಗಳನ್ನು ಅಲ್ಲಿ ಬಂಧಿಸಿಡಲಾಗಿತ್ತು.[೬]

ಬಳ್ಳಾರಿ ಜಿಲ್ಲೆ ಮೈಸೂರು ರಾಜ್ಯಕ್ಕೆ ಸೇರಿದ ನಂತರವೂ ಈ ಬಂದಿಖಾನೆಯನ್ನು ಹಳೆಯ ಒಪ್ಪಂದದಂತೆ ಆಂಧ್ರ ಸರಕಾರವೂ ಬಳಸುತ್ತಿತ್ತು (೧೯೫೮ ರ ನಂತರ ತನ್ನ ಸ್ವಂತ ಕಾರಾಗೃಹವನ್ನು ನಿರ್ಮಿಸಿ ಆ ಸೌಲಭ್ಯ ಪಡೆಯುವುದನ್ನು ನಿಲ್ಲಿಸಿತು). ಸ್ವಾತಂತ್ರ್ಯಾನಂತರ ಅಲ್ಲೀಪುರ ಬಂದಿಖಾನೆಯನ್ನು ಸರಕಾರ, ಬಳ್ಳಾರಿ ಸರಕಾರಿ ವೈದ್ಯಕೀಯ ಕಾಲೇಜಿಗೆ ನೀಡಿತು.



ದಕ್ಷಿಣ ಕನ್ನಡ ಜಿಲ್ಲೆಯು ಮದರಾಸು ಕರ್ನಾಟಕ ಪ್ರದೇಶದ ಆಡಳಿತಕ್ಕೆ ಒಳಪಡುತ್ತಿದ್ದುದರಿಂದ ಸರ್ ಮುನ್ರೋವಿನ ಪ್ರಯತ್ನದ ಫಲವಾಗಿ ೧೮೩೧ - ೧೯೨೬ರ ಹೊತ್ತಿಗೆ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಆರು ಉಪಬಂದಿಖಾನೆಗಳು ಮತ್ತು ಮಂಗಳೂರಲ್ಲಿ ಒಂದು ಉಪಬಂದಿಖಾನೆ ಇದ್ದವು. ಮಂಗಳೂರಿನ ಈ ಉಪ ಬಂದಿಖಾನೆ ೧೮೩೪ - ೩೫ ಅವಧಿಯಲ್ಲಿ ನಿರ್ಮಾಣವಾದದ್ದು. ಈ ಪ್ರದೇಶದ (ಮದರಾಸು ಕರ್ನಾಟಕ) ಬಂದಿಖಾನೆಗಳಲ್ಲಿ ಬಂದಿಖಾನೆ ಆಡಳಿತಕ್ಕಾಗಿ 'ಮದರಾಸು ಬಂದಿಖಾನೆ ಮತ್ತು ಸುಧಾರಣಾ ಗೃಹಗಳ ಕೈಪಿಡಿ'[೮] ಜಾರಿಯಲ್ಲಿತ್ತು.

### ೧.೩ ಕೊಡಗು ಪ್ರದೇಶದ ಬಂದಿಖಾನೆಗಳು

ಕೊಡಗು ರಾಜರ ಆಳ್ವಿಕೆಯ ಕಾಲದಲ್ಲಿ ಕೋಟೆ - ಕೊತ್ತಲಗಳಡಿಯ ಕೋಣೆಗಳೆ ಸೆರೆಮನೆಗಳಾಗಿ ಪರಿವರ್ತನೆಗೊಂಡಿದ್ದವು. ಬ್ರಿಟಿಷರು ಆ ಪ್ರಾಂತ್ಯವನ್ನು ವಶಪಡಿಸಿಕೊಂಡ ನಂತರವೂ (೧೮೩೪) ಅಪರಾಧಿಗಳೆಂದು ಪರಿಗಣಿತರಾದವರನ್ನು ಬಂಧಿಸಿಡಲು ಮಡಿಕೇರಿಯ ಕೋಟೆಯನ್ನೇ ಬಳಸಲಾಗುತ್ತಿತ್ತು. ೧೯೨೪ ರ ಸಮಯದಲ್ಲಿ ಮಡಿಕೇರಿಯಲ್ಲಿ ಒಂದು ಜಿಲ್ಲಾ ಬಂದಿಖಾನೆ ಹಾಗೂ ಇತರ ನಾಲ್ಕು ಬಂದಿಖಾನೆಗಳು ಕೊಡಗಿನ ಬೇರೆ ಬೇರೆ ತಾಲೂಕುಗಳಲ್ಲಿದ್ದವು. ೧೯೨೪ ರಲ್ಲಿ 'ಮದರಾಸು ಬಂದಿಖಾನೆ ಮತ್ತು ಸುಧಾರಣಾ ಗೃಹಗಳ ಕೈಪಿಡಿ'ಯನ್ನು ಆಡಳಿತಕ್ಕಾಗಿ ಜಾರಿಗೆ ತರಲಾಯಿತು. ದಕ್ಷಿಣ ಕನ್ನಡ ಹಾಗೂ ಕೊಡಗು ಜಿಲ್ಲೆಯ ಅಪರಾಧಿಗಳಲ್ಲಿ ೧೦ ವರ್ಷಗಳಿಗಿಂತ ಹೆಚ್ಚು ಅವಧಿಯ ಶಿಕ್ಷೆಗೊಳಗಾದವರನ್ನು ಕಣ್ಣಾನೂರಿನ ಕೇಂದ್ರ ಬಂದಿಖಾನೆಗೆ ಕಳುಹಿಸಿಕೊಡಲಾಗುತ್ತಿತ್ತು.[೯]

## ೧.೪ ಮುಂಬೈ ಕರ್ನಾಟಕ ಪ್ರದೇಶದ ಬಂದಿಖಾನೆಗಳು

೧೮೮೩ಕ್ಕಿಂತಲೂ ಮುನ್ನವೆ ಈ ಪ್ರದೇಶದಲ್ಲಿನ ಪ್ರತಿಯೊಂದು ತಾಲೂಕು ಒಂದೊಂದು ಉಪಬಂದಿಖಾನೆಯನ್ನು ಹೊಂದಿತ್ತು. ಕಲಾದಗಿಯಲ್ಲಿ ಒಂದು ಜಿಲ್ಲಾ ಬಂದಿಖಾನೆ ಅಸ್ತಿತ್ವದಲ್ಲಿತ್ತು. ೧೯೦೬ ರಲ್ಲಿ ಈ ಜಿಲ್ಲಾ ಬಂದಿಖಾನೆ, ಹಿಂದೆ ಆದಿಲಶಾಹಿ ಸರದಾರ ಮುಸ್ತಾಫ್ ಖಾನಾನ ವಿಶ್ರಾಂತಿ ಧಾಮವಾಗಿದ್ದು ತದ ನಂತರ ಕುದುರೆಗಳನ್ನು ಕಟ್ಟಲು ಬಳಸುತ್ತಿದ್ದ ವಿಜಾಪುರದ ಒಂದು ಸುಂದರ ಕಟ್ಟಡಕ್ಕೆ ಸ್ಥಳಾಂತರಗೊಂಡಿತು. ಬೆಳಗಾವಿಯಲ್ಲೂ ೧೮೫೮ ರಲ್ಲೇ ಜಿಲ್ಲಾ ಬಂದಿಖಾನೆಯೊಂದಿತ್ತು. ಇದೇ ಬಂದಿಖಾನೆಯಲ್ಲಿ ಕಂಪನಿ ಸರಕಾರದ ಅಧಿಕಾರಿ ಮ್ಯಾನ್‌ಸನ್‌ನ ರುಂಡ ಕತ್ತರಿಸಿದ ನರಗುಂದದ ಬಂಡಾಯ ವೀರ ಬಾಬಾಸಾಹೇಬನನ್ನು ೧೨ - ೬ - ೧೮೫೮ ರಂದು ಗಲ್ಲಿಗೇರಿಸಲಾಯಿತು. ಧಾರವಾಡ, ಕಾರವಾರದಲ್ಲೂ ೧೮೮೨ ರ ಸುಮಾರಿಗೆ ಜಿಲ್ಲಾ ಬಂದಿಖಾನೆಗಳು ಸ್ಥಾಪನೆಯಾದವು. ಅಥಣಿಯಲ್ಲೂ ಉಪಬಂದಿಖಾನೆಯೊಂದು ಆಗಲೇ ಚಟುವಟಿಕೆಯಲ್ಲಿತ್ತು. ಬೆಳಗಾವಿಯಲ್ಲಿ ಆಗಲೇ ಒಂದು ಜಿಲ್ಲಾ ಬಂದಿಖಾನೆಯಿದ್ದರೂ ಇನ್ನೊಂದು ಸುಸಜ್ಜಿತ, ಸುಧೃಡ ಬಂದಿಖಾನೆಯೊಂದರ ಅಗತ್ಯತೆಯನ್ನು ಮನಗಂಡ ಬ್ರಿಟಿಷ್ ಸರಕಾರ ಬೆಳಗಾವಿಯ ಹಿಂಡಲಗಾದಲ್ಲಿ ಕೇಂದ್ರ ಬಂದಿಖಾನೆಯೊಂದನ್ನು ೧೯೨೩ ರಲ್ಲಿ ಸ್ಥಾಪಿಸಿತು. ಈ ಎಲ್ಲ ಬಂದಿಖಾನೆಗಳು ೧೮೯೪ ರ ಕಾರಾಗೃಹ ಕಾಯಿದೆ, ೧೮೬೦ ರ ದಂಡ ಪ್ರಯೋಗ ಕಾಯಿದೆ ಹಾಗೂ ಮುಂಬೈ ಪ್ರಾಂತೀಯ ಸರಕಾರದಿಂದ ಬಂದಿಖಾನೆಗಾಗಿ ಆಯುಕ್ತವಾಗಿದ್ದ ಕೆಲವು ಕಾಯಿದೆಗಳ ಮೂಲಕ ಆಡಳಿತ ನಡೆಸುತ್ತಿದ್ದವು.

## ೧.೫ ಹೈದರಾಬಾದ್ ಕರ್ನಾಟಕ ಪ್ರದೇಶದ ಬಂದಿಖಾನೆಗಳು

೧೮೯೭ ಕ್ಕಿಂತಲೂ ಮುನ್ನ ಈ ಪ್ರದೇಶದಲ್ಲಿ ಇದ್ದದು ಬೆರಳೆಣಿಕೆಯಷ್ಟು ಬಂದಿಖಾನೆಗಳು ಮಾತ್ರ. ಬಹುಮನಿ ಸುಲ್ತಾನರ ರಾಜಧಾನಿಯಾಗಿದ್ದ ಕಲ್ಬುರ್ಗಿಯಲ್ಲಿ ೧೮೩೧ ಕ್ಕಿಂತಲೂ ಹಿಂದೆಯೇ ಒಂದು ಬಂದಿಖಾನೆಯಿತ್ತು. ಬ್ರಿಟಿಷರು ಅದನ್ನು ಇನ್ನಷ್ಟು ಸುಧಾರಣೆಗೊಳಪಡಿಸಿ ಜಿಲ್ಲಾ ಬಂದಿಖಾನೆಯಾಗಿ ಮಾರ್ಪಡಿಸಿ ಮುಂದೆ ಅದನ್ನು ಕೇಂದ್ರ ಬಂದಿಖಾನೆಯಾಗಿ ಮೇಲ್ದರ್ಜೆಗೇರಿಸಿದರು. ರಾಯಚೂರು ಮತ್ತು ಬೀದರ್ ಪಟ್ಟಣಗಳಲ್ಲಿ ನಿಜಾಮರಿಂದಲೇ ಒಂದೊಂದು ಬಂದಿಖಾನೆಗಳು ಸ್ಥಾಪಿಸಲ್ಪಟ್ಟಿದ್ದವು. ಹೈದರಾಬಾದ್ ರಾಜ್ಯದ ಜೈಲುಗಳ ಮಹಾನಿರೀಕ್ಷರಾಗಿದ್ದ ಹೆನ್ಕಿನ್ಸ್ ಅವರು ೧೮೯೭ ರ ಜೈಲು ಕೈಪಿಡಿಯನ್ನು ಪರಿಶೀಲಿಸಿ ಎಲ್ಲಲ್ಲಿ ಅವಶ್ಯವೋ ಅಲ್ಲಲ್ಲಿ ಒಂದೊಂದು ಜಿಲ್ಲಾ ಜೈಲುಗಳನ್ನು ವ್ಯವಸ್ಥೆಗೊಳಸಿದರು.[೧೦] 'ಹೈದರಾಬಾದ್ ಜೈಲು ನಿಯಮಗಳು ಮತ್ತು ಬಂದಿಖಾನೆಗಳ ಕೈಪಿಡಿ'ಯ ಆಧಾರದಲ್ಲಿ ಈ ಪ್ರದೇಶದ ಬಂದಿಖಾನೆಗಳ ಆಡಳಿತ ನಡೆಸಲಾಗುತ್ತಿತ್ತು. (ಗುಲ್ಬಾರ್ಗದಲ್ಲಿದ್ದ ಕೇಂದ್ರ ಬಂದಿಖಾನೆಯನ್ನು ೧೯೯೬ ರಲ್ಲಿ ಜೇವರ್ಗಿ ರಸ್ತೆಯಲ್ಲಿರುವ ನೂತನ ಬಂದಿಖಾನೆಗೆ ಸ್ಥಳಾಂತರಿಸಲಾಯಿತು)

## ೧.೬ ಬ್ರಿಟಿಷ್ ಕಾಲದ ಬಂದಿಖಾನೆಗಳ ಸ್ಥಿತಿಗತಿ

ಬ್ರಿಟಿಷ್ ಕಾಲದಲ್ಲಿ ಮುಖ್ಯವಾಗಿ ರಾಜಕೀಯ ಉದ್ದೇಶದ ಜತೆಗೆ ಸಾಮಾಜಿಕ ಉದ್ದೇಶವನ್ನು ಬೆರಸಿಕೊಂಡು ಹುಟ್ಟಿಕೊಂಡ ಈ ಬಂದಿಖಾನೆಗಳ ಆಡಳಿತವಂತು ಬ್ರಿಟಿಷ್ ಪೂರ್ವ ಸ್ಥಿತಿಗಿಂತ ಭಿನ್ನವಾಗಿದ್ದು, ಒಂದು ಸ್ಪಷ್ಟ ರೂಪವನ್ನು ಪಡೆಯತೊಡಗಿತು. ಆದರೆ ಇಂದಿನ ಸಾಮಾಜಿಕ ಮೌಲ್ಯ - ಚಿಂತನೆ - ಆಲೋಚನೆಗಳನ್ನು ಮುಂದಿಟ್ಟುಕೊಂಡು ಅಂದಿನ ಬಂದಿಖಾನೆಗಳ - ಕೈದಿಗಳ ಸ್ಥಿತಿಗತಿಯನ್ನು ಅವಲೋಕಿಸಿದರೆ, ಅಂದಿನ ಬಂದಿಖಾನೆ - ಕೈದಿಗಳ ಸ್ಥಿತಿಯಂತೂ ಭೀಕರ ಹಾಗೂ ಅಮಾನವೀಯವಾಗಿತ್ತು. ಕರ್ನಾಟಕ ಮಾತ್ರವಲ್ಲಿ ಇಡೀಯ ಭಾರತದಲ್ಲಿನ ಬಂದಿಖಾನೆಗಳೊಳಗಿನ ಶೋಚನೀಯ ದುಸ್ಥಿತಿ, ಅಲ್ಲಿರುವ ಭ್ರಷ್ಟಾಚಾರ, ಕೈದಿಗಳನ್ನು ನಡೆಸಿಕೊಳ್ಳುತ್ತಿರುವ ರೀತಿ, ಅನೈರ್ಮಲ್ಯ ಪರಿಸರವನ್ನು ಕಂಡ ಲಾರ್ಡ್ ಮೆಕಾಲೆ ತಕ್ಷಣವೇ ಸಮಿತಿಯೊಂದನ್ನು ನೇಮಿಸಬೇಕೆಂದು ಲಾರ್ಡ್ ಮೌಂಟ್ ಬೆಂಟಿಂಕನಿಗೆ ಸಲಹೆ ಮಾಡಿ, ೧೮೩೬ ರ ಜನವರಿ ೨ ರಂದು 'ಬಂದಿಖಾನೆಗಳ ಶಿಸ್ತು, ಸ್ಥಿತಿ - ಗತಿಗಳನ್ನು ಅಭ್ಯಸಿಸುವ ಸಮಿತಿ'ಯನ್ನು ನೇಮಕ ಮಾಡಿಸಿದ್ದು ಅಂದಿನ ಬಂದಿಖಾನೆಗಳ ದುಸ್ಥಿತಿ - ಕೈದಿಗಳ ಭೀಕರ ಪರಿಸ್ಥಿತಿಯ ಬಗ್ಗೆ ಮಾಹಿತಿ ನೀಡುತ್ತಿದೆ.[೧೧]

'ಬಂದಿಖಾನೆಗಳಲ್ಲಿ ಕೆಳವರ್ಗದ ಅಧಿಕಾರಿಗಳ ಭ್ರಷ್ಟಾಚಾರ, ಆಡಳಿತದಲ್ಲಿ ಕೈದಿಗಳಲ್ಲಿ ಅಶಿಸ್ತು, ಸಾರ್ವಜನಿಕ ರಸ್ತೆಗಳಲ್ಲಿ ಕೈದಿಗಳನ್ನು ದುಡಿಸಿಕೊಳ್ಳುವುದು, ವಿಪರೀತ ದೈಹಿಕ ದಂಡನೆ ಬಗ್ಗೆ ಲಾರ್ಡ್ ಮೆಕಾಲೆಯನ್ನೊಳಗೊಂಡಿದ್ದ ಈ ಸಮಿತಿ ಸರಕಾರಕ್ಕೆ ವರದಿ ನೀಡಿ, ಇದರ ಪರಿಹಾರಕ್ಕೆ ಹಲವು ಶಿಫಾರಸುಗಳನ್ನು ಮಾಡಿತು. ಆದರೆ ಆ ಎಲ್ಲ ಶಿಫಾರಸುಗಳೂ ಯಥಾವತ್ತಾಗಿ ಆಡಳಿತದಲ್ಲಿ ಜಾರಿಗೊಳ್ಳಲಿಲ್ಲ. ದೇಶದ ಎಲ್ಲ ಬಂದಿಖಾನೆಗಳಲ್ಲೂ ಈ ಭೀಕರ ಚಿತ್ರಣ ಹೀಗೇ ಮುಂದುವರಿದಂತೆ, ೧೮೬೪ ರಲ್ಲಿ ಮತ್ತೊಂದು 'ಬಂದಿಖಾನೆ ಆಡಳಿತ ಮತ್ತು ಸುಧಾರಣಾ' ಆಯೋಗವನ್ನು ಲಾರ್ಡ್ ಡಾಲ್‌ಹೌಸಿ ನೇಮಕ ಮಾಡಿದ. ಈ ಆಯೋಗ ಕೊಟ್ಟ ವರದಿ, ಶಿಫಾರಸುಗಳನ್ನು ಪರಿಶೀಲಿಸಿದರೆ ಆಗಿನ ಬಂದಿಖಾನೆಗಳ ಸ್ಥಿತಿಯ ಚಿತ್ರಣವನ್ನು ನಾವು ಕಟ್ಟಿಕೊಳ್ಳಬಹುದು.

ಈ ಸಮಿತಿಯು ಮಾಡಿರುವ ಶಿಫಾರಸುಗಳು : ಮಹಿಳಾ ಕೈದಿಗಳನ್ನು ಪುರುಷ ಕೈದಿಗಳಿಂದ ಬೇರ್ಪಡಿಸುವುದು; ಹದಿಹರೆಯದ ಹುಡುಗರನ್ನು ಪುರುಷರಿಂದ ಪ್ರತ್ಯೇಕಿಸುವುದು; ಶಿಸ್ತು ಪಾಲನೆ ಮಾಡದ ಕೈದಿಗಳಿಗೆ ಈಗಾಗಲೇ ಇರುವ ಈ ಕೆಳಗಿನ ಶಿಕ್ಷೆಗಳಾದ, ಆಹಾರದಲ್ಲಿ ವ್ಯತ್ಯಯ ಮಾಡುವುದು; ಕಾಲಿಗೆ ಬೇಡಿ - ಕೈಗೆ ಕೋಳ ಹಾಕಿ ಏಕಾಂತ ಶಿಕ್ಷೆ ವಿಧಿಸಲು ಪ್ರತ್ಯೇಕ ಸೆಲ್ (ಸಣ್ಣಕೊಠಡಿ)ನಲ್ಲಿ ಕೂಡಿಡುವುದು; ಚಾಟಿ ಏಟು ನೀಡುವುದು; ಕಠಿಣ ದುಡಿಮೆ ಮುಂತಾದ ಶಿಕ್ಷೆಗಳನ್ನು ಇನ್ನೂ ಮುಂದುವರಿಸುವುದು.[೧೨]

ಕರ್ನಾಟಕ ಬಂದಿಖಾನೆಗಳಲ್ಲಿ ೧೮೮೦ರವರೆಗೂ ಮಹಿಳಾ ಕೈದಿ - ಪುರುಷ ಕೈದಿಗಳನ್ನು, ಹದಿಹರೆಯದ ತರುಣ ಕೈದಿಗಳು - ಪುರುಷರನ್ನು ಒಂದೇ ಯಾರ್ಡ್‌ನಲ್ಲಿ ಬಂಧಿಸಿಡಲಾಗುತ್ತಿತ್ತು. ಹಾಗೂ ೧೮೬೪ ರ ಸಮಿತಿ ಶಿಫಾರಸು ಮಾಡಿರುವ ಎಲ್ಲ ಕಠಿಣ ಶಿಕ್ಷೆಗಳು ಆಗಲೇ ಬಂದಿಖಾನೆಗಳ ಆರಂಭದಿಂದಲೇ ಜಾರಿಯಲ್ಲಿದ್ದವು. ಕುದುರೆ ಮೇಲೆ ಕೂತೇ ಆಂಗ್ಲಾಧಿಕಾರಿಗಳು ಚಾಟಿ ಬೀಸಲು ಅನುಕೂಲವಾಗುವಂತೆ ಸಾಲು ಬ್ಯಾರಕುಗಳ ಎರಡೂ

ತುದಿಗಳು ಆ ಕಾಲದಲ್ಲಿ ತೆರೆದೇ ಇರುತ್ತಿದ್ದವು[೧೩] ಎಂದು ನಗರಿ ಬಾಬಯ್ಯ ತಮ್ಮ 'ಕಗ್ಗತ್ತಲ ಜಗತ್ತಲ್ಲಿ ತೊಂಬತ್ತು ದಿನ' ಎಂಬ ಪುಸ್ತಕದಲ್ಲಿ ಉಲ್ಲೇಖಿಸಿದ್ದಾರೆ.

ಯಾವ ಸಮಿತಿಗಳ ವರದಿಯೂ ಇಲ್ಲಿನ ಬಂದಿಖಾನೆಗಳ ಸ್ಥಿತಿಯನ್ನು ಸುಧಾರಿಸದಿದ್ದಾಗ ೧೮೭೭ ರಲ್ಲಿ ಕಲ್ಕತ್ತದಲ್ಲಿ ಎಲ್ಲ ಪ್ರಾಂತ್ಯಗಳ ತಜ್ಞರುಗಳ ಸಭೆಯೊಂದು ನಡೆಯಿತು. ೧೮೮೮ ರಲ್ಲಿ ಮತ್ತೊಂದು ಬಂದಿಖಾನೆ ಸುಧಾರಣಾ ಆಯೋಗವೊಂದು ನೇಮಕಗೊಂಡು ಎಲ್ಲ ಪ್ರಾಂತ್ಯಗಳ ಬಂದಿಖಾನೆ ಅಧಿನಿಯಮ - ಕಾಯಿದೆಗಳನ್ನು ರದ್ದುಪಡಿಸಿ, ಇಡೀಯ ಭಾರತಕ್ಕೆ ಅನ್ವಯಿಸುವ ಬಂದಿಖಾನೆ ಅಧಿನಿಯಮವೊಂದನ್ನು ರಚಿಸುವಂತೆ ಶಿಫಾರಸು ಮಾಡಿತು. ಈ ಶಿಫಾರಸಿನ ಅನ್ವಯ ೧೮೯೪ ರಲ್ಲಿ 'ಬಂದಿಖಾನೆ ಅಧಿನಿಯಮ' ಸ್ವೀಕೃತವಾಯಿತು.

ಈ ಅಧಿನಿಯಮದ ನಂತರ ರಾಜ್ಯದ ಬಂದಿಖಾನೆಗಳ ಆಡಳಿತ ಹಾಗೂ ಕೈದಿ ಯೋಗಕ್ಷೇಮದಲ್ಲಿ ಸ್ವಲ್ಪ ಸುಧಾರಣೆ ಕಂಡು ಬಂದವು. ಮಹಿಳಾ ಬಂಧಿಗಳನ್ನು ಮತ್ತು ಹದಿಹರೆಯದ ಹುಡುಗರನ್ನು ಪುರುಷ ಬಂಧಿಗಳಿಂದ ಪ್ರತ್ಯೇಕಿಸಲಾಯಿತು. ಸಿವಿಲ್ ಅಪರಾಧಿಗಳನ್ನು ಕ್ರಿಮಿನಲ್ ಅಪರಾಧಿಗಳಿಂದ, ಕ್ರಿಮಿನಲ್ ಅಪರಾಧಿಗಳನ್ನು ವಿಚಾರಣಾಧೀನ ಅಪರಾಧಿಗಳಿಂದ ಬೇರ್ಪಡಿಸಲಾಯಿತು. ಪ್ರತಿ ದಿನವೂ ವೈದ್ಯರೊಬ್ಬರು ಏಕಾಂತ ಶಿಕ್ಷೆಯನ್ನು ೨೪ ಗಂಟೆಗಳಿಗಿಂತಲೂ ಹೆಚ್ಚು ಅನುಭವಿಸುವ ಕೈದಿಯನ್ನು ಪರೀಕ್ಷಿಸುವುದು ಕಡ್ಡಾಯವಾಯಿತು. ಕಠಿಣ ಸಜೆಗೆ ಒಳಗಾದ ಕೈದಿಗೆ ದಿನಕ್ಕೆ ಒಂಬತ್ತು ಗಂಟೆಗಳಿಗಿಂತಲೂ ಹೆಚ್ಚು ದುಡಿಮೆ ನೀಡಬಾರದು ಹಾಗೂ ಕೈದಿಗೆ ವಹಿಸುವ ದುಡಿಮೆ ಆತನ ಆರೋಗ್ಯಕ್ಕೆ ಮಾರಕವೇ ಅಲ್ಲವೇ ಎಂಬುದನ್ನು ನಿರ್ಣಯಿಸುವ ಜವಾಬ್ದಾರಿ ಬಂದಿಖಾನೆ ವೈದ್ಯರದ್ದೆಂದು ನಿರ್ಣಯಿಸಲಾಯಿತು. ಬಂದಿಖಾನೆ ಅಧೀಕ್ಷಕನ ಹೊರತು ಆತನಿಗಿಂತ ಕೆಳದರ್ಜೆಯ ಅಧಿಕಾರಿ ಕೈದಿಗಳಿಗೆ ಶಿಕ್ಷೆ ವಿಧಿಸುವಂತಿಲ್ಲ ಎಂದೂ ಈ ಅಧಿನಿಯಮ ಸ್ಪಷ್ಟಪಡಿಸಿತ್ತು.

ಹಳೆ ಮೈಸೂರು ಪ್ರಾಂತ್ಯದ ಬಂದಿಖಾನೆಗಳ ಆಡಳಿತವು ೧೮೩೬ ಹಾಗೂ ೧೮೬೪ ರ ಸಮಿತಿಗಳ ಶಿಫಾರಸನ್ನು ಗಮನದಲ್ಲಿಟ್ಟುಕೊಂಡು ಬಂದಿಖಾನೆ ಆಡಳಿತಕ್ಕಾಗಿ ತನ್ನದೇ ಆದ (೧೮೭೦ ರ XXVIII ನೆಯ ಕಾಯಿದೆ) ೧೮೭೦ ರ ಬಂದಿಖಾನೆ ಕಾಯಿದೆಯನ್ನು, ೧೮೭೯ ರಲ್ಲಿ ಜಾರಿಗೊಳಿಸಿತ್ತು. ಈ ಕಾಯಿದೆಯನ್ವಯ ಈ ಪ್ರಾಂತ್ಯದ ಬಂದಿಖಾನೆಗಳಲ್ಲಿ ಕೈದಿಗಳ ನಡವಳಿಕೆಗೆ ತಕ್ಕಂತೆ ಅಂಕ (ಮಾರ್ಕ್ಸ್) ನೀಡುವ ಪದ್ಧತಿಯನ್ನು ೧೮೭೯ ರಲ್ಲಿ ಜಾರಿಗೆ ತರಲಾಯಿತು. ಉತ್ತಮ ನಡವಳಿಕೆ ಮತ್ತು ಗುಣವುಳ್ಳ ಕೈದಿಗೆ ಶಿಕ್ಷೆಯಲ್ಲಿ ಮಾಫಿಯನ್ನು ಪಡೆದುಕೊಳ್ಳಲು ಮತ್ತು ಕೂಲಿಯಾಧಾರದಲ್ಲಿ ಕೈದಿಯು, ಕೈದಿ ಪರಿಪಾಲಕ, ಕೈದಿ ಮೇಲ್ವಿಚಾರಕ ಕೆಲಸವನ್ನು ಪಡೆಯಲು ಇದರಿಂದ ಅವಕಾಶವಾಯಿತು. ಆದರೆ ಚಾಟಿಯೇಟು, ಕೈ-ಕಾಲುಗಳಿಗೆ ಸಂಕೋಲೆ ಬಿಗಿದು ಏಕಾಂತ ಶಿಕ್ಷೆ ನೀಡುವ ಕಠಿಣ ಶಿಕ್ಷಾ ಪದ್ಧತಿ ಮಾತ್ರ ಹಾಗೆಯೇ ಉಳಿದು ಬಂದಿತ್ತು.

ಕೈದಿಗಳನ್ನು ಬಂಧನದಲ್ಲಿರಿಸುವುದು, ಅವರನ್ನು ಪರಿವರ್ತಿಸಿ ಸಮಾಜಕ್ಕೆ ಮರಳಿಸುವ ಉದ್ದೇಶಕ್ಕೆ ಎಂಬುದನ್ನು ಅಧಿನಿಯಮವಾಗಲಿ, ಸಮಿತಿಗಳ ಶಿಫಾರಸುಗಳಾಗಲೀ ಮರೆತು, ಬಂಧನದಲ್ಲಿರುವ ಶಿಸ್ತು ಮೀರಿದ ಕೈದಿಗಳನ್ನು ಶಿಕ್ಷಿಸುವುದರ ಮೂಲಕವೆ ಬಂದಿಖಾನೆಗಳ ಆಡಳಿತವನ್ನು ಸುಧಾರಿಸಬಹುದು ಎಂಬ ಏಕೈಕ

ಉದ್ದೇಶವನ್ನು ಕೇಂದ್ರೀಕೃತಗೊಳಿಸಿದ್ದರಿಂದ ಮೈಸೂರು ರಾಜ್ಯದ ಕೈದಿಗಳ ಬದುಕಲ್ಲಿ ಯಾವುದೇ ಮಾರ್ಪಾಡುಗಳಾಗಲಿಲ್ಲ.

ಕೈದಿಗಳನ್ನು ರಸ್ತೆ ನಿರ್ಮಾಣ, ಅಣೆಕಟ್ಟು ಕಟ್ಟುವ ಹಾಗೂ ಇತರ ಕಾಮಗಾರಿ ಕೆಲಸಗಳಿಗೆ ಬಳಸುವುದನ್ನು ಯಾವುದೇ ವರದಿ, ಶಿಫಾರಸು, ಅಧಿನಿಯಮಗಳಿಂದಲೂ ತಪ್ಪಿಸಲಾಗಲಿಲ್ಲ. ಮೈಸೂರು ಕುಕ್ಕರಹಳ್ಳಿಯಲ್ಲಿದ್ದ ಬಂದಿಖಾನೆಯೊಂದರ ಕೈದಿಗಳನ್ನು ಸಂಪೂರ್ಣವಾಗಿ ಅಣೆಕಟ್ಟು ಕಟ್ಟಲು ಬಳಸಿಕೊಳ್ಳಲಾಯ್ತು ಎಂಬುದು ಮೈಸೂರು ಗೆಝಟಿಯರ್‌ನಲ್ಲಿ ಉಲ್ಲೇಖಿಸಲ್ಪಟ್ಟಿದೆ. ೧೯೦೭ - ೧೯೦೮ ರಲ್ಲಿ ಮೈಸೂರು ಪ್ರಾಂತ್ಯದ ಕೈದಿಗಳ ತಲೆಗೆ ೨ ಆಣೆ, ಜತೆಗೆ ಅವರನ್ನು ಕಾವಲು ಕಾಯುವ ವೆಚ್ಚವನ್ನು ನೀಡಿ ಯಾವುದೇ ಇಲಾಖೆ ಕೈದಿಗಳನ್ನು ಬಳಸಿಕೊಳ್ಳಬಹುದಿತ್ತು. ಆದರೆ ದಿವಾನರ ಬಂಗಲೆ ಹಾಗೂ ಅರಮನೆಯಲ್ಲಿ ಕೆಲಸಕ್ಕಿದ್ದ ಕೈದಿಗಳಿಗಾಗಿ ಅವರು ಬಂದಿಖಾನೆ ಇಲಾಖೆಗೆ ಯಾವುದೇ ಹಣ ಕೊಡಬೇಕಾಗಿರಲಿಲ್ಲ. ೧೯೨೨ ರಲ್ಲಿ ಕೈದಿಗಳ ತಲೆಯ ಬೆಲೆ ೨ ಆಣೆಯಿಂದ ೪ ಆಣೆಗೇರಿತು.[೧೪]

ಇಂಥಾ ಹೀನಾಯ ಸ್ಥಿತಿಯಲ್ಲಿದ್ದ ಕೈದಿಗಳಿಗೆ ಆಶಾಕಿರಣವಾಗಿ ಗೋಚರಿಸಿದ್ದು ೧೯೧೯ - ೧೯೨೦ ರಲ್ಲಿ ನೇಮಕಗೊಂಡ ಭಾರತೀಯ ಬಂದಿಖಾನೆಗಳ ಸಮಿತಿ. 'ಕೈದಿಗಳ ಸುಧಾರಣೆ ಹಾಗೂ ಪುನರ್ವಸತಿ'ಯನ್ನು ಪ್ರಧಾನವಾಗಿಟ್ಟುಕೊಂಡು ಬಂದಿಖಾನೆ ಆಡಳಿತವನ್ನು ಸುಧಾರಿಸುವ ಉದ್ದೇಶದಿಂದ ನೇಮಕಗೊಂಡ ಈ ಸಮಿತಿ ಸರಕಾರಕ್ಕೆ ಈ ಕೆಳಗಿನ ಶಿಫಾರಸುಗಳನ್ನು ಮಾಡಿತು.

'ಕ್ರಿಮಿನಲ್ ಅಪರಾಧಿಗಳನ್ನು ತಿದ್ದುವುದು ಹಾಗೂ ಅವರೊಂದಿಗೆ ಮಾನವೀಯವಾಗಿ ಸ್ಪಂದಿಸಲು ಸೂಕ್ತ ತರಬೇತಿ, ಜಾಣ್ಮೆಯುಳ್ಳ ಸಿಬ್ಬಂದಿಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿ ಎಚ್ಚರದಿಂದ ಆಯ್ಕೆ ಮಾಡತಕ್ಕದ್ದು. ಸಿಬ್ಬಂದಿಗಳು ಕೈದಿಗಳಿಗೆ ಪ್ರಾಮಾಣಿಕ ಸೇವೆ ನೀಡಬೇಕಾದುದರಿಂದ ಅವರ ಸಂಬಳದಲ್ಲಿ ಏರಿಕೆ ಮಾಡುವುದು, ಕೈದಿಗಳ ಪುನರ್ವಸತಿಗೆ - ಸುಧಾರಣೆಗೆ ಅನುಕೂಲವಾಗುವಂತೆ ಬಂದಿಖಾನೆಗಳಲ್ಲಿ ಸಣ್ಣ ಉದ್ಯಮಗಳನ್ನು ಆರಂಭಿಸಲು ಪರಿಣಿತ ತಾಂತ್ರಿಕ ಸಿಬ್ಬಂದಿಗಳನ್ನು ನೇಮಕ ಮಾಡಿಕೊಳ್ಳುವುದು, ಪ್ರತಿಯೊಬ್ಬ ಕೈದಿಯೂ ಬಂದಿಖಾನೆಯೊಳಗೆ ಮನುಷ್ಯನಂತೆ ಬದುಕಲು ಕನಿಷ್ಟ ೭೫ ಚದರ ಯಾರ್ಡ್ ಸ್ಥಳಾವಕಾಶ ದೊರೆಯುವಂತೆ ವ್ಯವಸ್ಥೆ ಮಾಡತಕ್ಕದ್ದು' ಎಂದು ಸಮಿತಿ ಶಿಫಾರಸು ಮಾಡಿತು.[೧೫]

ಆದರೆ ಈ ಸಮಿತಿಯ ಎಲ್ಲ ಶಿಫಾರಸುಗಳನ್ನು ರಾಜ್ಯದೆಲ್ಲೆಡೆ ಜಾರಿಗೆ ತರಬೇಕೆನ್ನುವಷ್ಟರಲ್ಲಿ ದೇಶದ ಮೂಲೆ ಮೂಲೆಗಳಿಂದ ಬ್ರಿಟಿಷ್ ಸರಕಾರದ ವಿರುದ್ಧ ಸ್ವಾತಂತ್ರ್ಯ ಸಂಗ್ರಾಮದ ಅಲೆಗಳೆದ್ದು ಹಲವು ಶಿಫಾರಸುಗಳು ಮೂಲೆ ಸೇರಿದವು. ಸ್ವಾತಂತ್ರ್ಯಸಮರದ ಚುಕ್ಕಾಣಿ ಹಿಡಿದ ಅನೇಕ ರಾಷ್ಟ್ರನಾಯಕರು ರಾಜಕೀಯ ಬಂದಿಗಳಾಗಿ ರಾಜ್ಯ - ದೇಶದ ಬಂದಿಖಾನೆಗಳ ದುಸ್ಥಿತಿಯನ್ನು ಸ್ವತಃ ಅನುಭವಿಸಿ ಕಣ್ಣಾರೆ ಕಾಣುವಂತಾದರೂ ಸದ್ಯ ಬಂದಿಖಾನೆಗಳ ಸುಧಾರಣಾ ಹೋರಾಟಕ್ಕಿಂತ ಸ್ವಾತಂತ್ರ್ಯ ಹೋರಾಟವೇ ಮುಖ್ಯವೆಂದು ಪರಿಗಣಿಸಿ ಶಿಫಾರಸುಗಳನ್ನು ಜಾರಿಗೊಳಿಸುವಂತೆ ಯಾವ ಒತ್ತಡವನ್ನೂ ಬ್ರಿಟಿಷ್ ಸರಕಾರದ ಮೇಲೆ ಹೇರಲಿಲ್ಲ.

ಆದರೆ ಈ ಸಮಿತಿಯ ಶಿಫಾರಸಿನಂತೆ ರಾಜ್ಯದ ಹಲವು ಬಂದಿಖಾನೆಗಳಲ್ಲಿ ವಿಶೇಷವಾಗಿ ಮೈಸೂರು - ಬೆಂಗಳೂರಿನ ಬಂದಿಖಾನೆಗಳಲ್ಲಿ ಹಲವು ಉದ್ಯಮಗಳನ್ನು ಆರಂಭಿಸಲಾಯಿತು. ಜಮಖಾನ - ಕಂಬಳಿ ನೇಯ್ಗೆ, ಬುಟ್ಟಿ ಹೆಣೆಯುವುದು, ಗುಡಾರಗಳ ತಯಾರಿ - ರಿಪೇರಿ, ಗೋಣಿ ಮತ್ತು ತೆಂಗಿನನಾರಿನ ಕೆಲಸ, ಮರಗೆಲಸ, ಕುಂಬಾರಿಕೆ, ದರ್ಜಿ, ಕಬ್ಬಿಣದ ಕೆಲಸ ಇತ್ಯಾದಿಗಳು ಕೈದಿಗಳು ತಮ್ಮ ಬದುಕಿನ ಮೇಲೆ ಮತ್ತೆ ಭರವಸೆ ಇಡುವಂತೆ ಮಾಡುವಲ್ಲಿ ಯಶಸ್ವಿಯಾದವು. ಕೆಲಸ ಕಲಿಸುವುದರ ಜತೆಗೆ ಕೈದಿಗಳು ತಮ್ಮ ಪುನರ್ವಸತಿಗೆ ಸ್ಪಷ್ಟ ಯೋಜನೆ ಹಾಕಿಕೊಳ್ಳಲು ಇದು ಅನುವಾಯಿತು. ಕೈದಿಗಳ ಸಾಮಾಜಿಕ ಮತ್ತು ನೈತಿಕ ಮಟ್ಟವನ್ನು ಹೆಚ್ಚಿಸಿ ಉತ್ತಮಪಡಿಸಲು, ಧಾರ್ಮಿಕ ಹಾಗೂ ನೈತಿಕ ಬೋಧನಾ ಕಾರ್ಯಕ್ರಮಗಳನ್ನು ಈ ಶಿಫಾರಸಿನನ್ವಯ ಕೈಗೊಳ್ಳಲಾಯಿತು. ೧೯೩೫ ರ ಭಾರತ ಸರಕಾರದ ಅಧಿನಿಯಮ ಘೋಷಣೆಯನ್ವಯ, ಬಂದಿಖಾನೆಗಳ ಆಡಳಿತ - ನಿರ್ವಹಣೆ ಇನ್ನು ಆಯಾ ಪ್ರಾಂತೀಯ ಸರಕಾರದ ಹೊಣೆ ಎಂದು ಕೇಂದ್ರ ಸರಕಾರ ಘೋಷಿಸಿದ ನಂತರ, ವಿವಿಧ ರಾಜ್ಯಗಳು ತಮ್ಮ ತಮ್ಮ ರಾಜ್ಯದ ಬಂದಿಖಾನೆಗಳ ಸುಧಾರಣೆಗಾಗಿ ಸಮಿತಿಗಳನ್ನು ನೇಮಿಸಿಕೊಂಡವು. ಮೈಸೂರು ಸರಕಾರವು ೧೯೪೦ - ೪೧ ರ ಅವಧಿಯಲ್ಲಿ 'ಮೈಸೂರು ಸೆರೆಮನೆಗಳ ಸುಧಾರಣ ಸಮಿತಿ' ಎಂದು ಶ್ರೀ ಡಿ.ಎಚ್.ಚಂದ್ರಶೇಖರಯ್ಯ ಅವರ ನೇತೃತ್ವದಲ್ಲಿ ಸಮಿತಿಯೊಂದನ್ನು ನೇಮಕ ಮಾಡಿತು.[೧೮] ಸಮಿತಿ ೧೯೪೨ ರಲ್ಲಿ ಸರಕಾರಕ್ಕೆ ತನ್ನ ಶಿಫಾರಸು ಪಟ್ಟಿಯನ್ನು ಸಲ್ಲಿಸಿತು. ಆದರೆ ಸರಕಾರದ ಗಮನ ಆಗ ಸಂಪೂರ್ಣ ಕೇಂದ್ರೀಕೃತಗೊಂಡಿದ್ದು - ದೇಶದೆಲ್ಲೆಡೆ ಕಾಳ್ಗಿಚ್ಚಿನಂತೆ ಹತ್ತಿಕೊಂಡ ಕ್ವಿಟ್ ಇಂಡಿಯಾ ಚಳವಳಿಯನ್ನು ತಣ್ಣಗಾಗಿಸುವತ್ತ. ಚಳುವಳಿಯನ್ನು ಬಗ್ಗು ಬಡಿಯಲು ಚಳುವಳಿಗಾರರನ್ನು ಹೊಡೆದು ಬಡಿದು ಸೆರೆಹಿಡಿದು, ರಾಜ್ಯದ ಬಂದಿಖಾನೆಗಳಲ್ಲಿ ತುರುಕಿಸುಡುವ ಕೆಲಸದಲ್ಲೇ ತಲ್ಲೀನವಾದ ಸರಕಾರ ಈ ಸಮಿತಿಯ ಶಿಫಾರಸ್ಸನ್ನು ಹೆಚ್ಚು ಕಡಿಮೆ ಮೂಲೆ ಸೇರಿಸಿತೆಂದೇ ಹೇಳಬಹುದು. ಆದರೆ ೧೯೪೩ ರಲ್ಲಿ ಮೈಸೂರು ರಾಜ್ಯದ ಬಂದಿಖಾನೆಗಳಲ್ಲಿ 'ಮೈಸೂರು ಕಾರಾಗೃಹ ಕಾಯಿದೆ ೧೯೪೩' ಎಂಬ ಹೊಸ ಕಾಯಿದೆಯನ್ನು ಜಾರಿಗೆ ತರಲಾಯಿತು.

೧೯೪೨ ರ ಆ ಕ್ವಿಟ್ ಇಂಡಿಯಾ ಚಳುವಳಿಯಲ್ಲಿ ಪಾಲ್ಗೊಂಡು ರಾಜ್ಯದ ವಿವಿಧ ಬಂದಿಖಾನೆಗಳಲ್ಲಿ ರಾಜಕೀಯ ಕೈದಿಗಳಾಗಿದ್ದ ಹಲವು ಸ್ವಾತಂತ್ರ್ಯ ಹೋರಾಟಗಾರರು ಅಂದಿನ ಬಂದಿಖಾನೆಗಳ ದುರವಸ್ಥೆಯನ್ನು ಹಲವು ಕೃತಿಗಳಲ್ಲಿ ತಮ್ಮ ಅನುಭವದ ಮೂಲಕ ದಾಖಲಿಸಿದ್ದಾರೆ. ಅವರ ಬಂಧನ, ಅಂದಿನ ಬಂದಿಖಾನೆಗಳ ಆ ದುರವಸ್ಥೆಯಲ್ಲಿ ಅವರ ಅನುಭವ ಇಂದು ನಮಗೆ ಇತಿಹಾಸ. ರಾಜ್ಯದ ಮಾಜಿ ಶಾಸಕಿ ಬಾಗೀರಥಿ ಬಾಯಿ ಚಂಗಲಾರಾಧ್ಯ ಅವರು ೧೯೪೨ ರ ಕ್ವಿಟ್ ಇಂಡಿಯಾ ಚಳುವಳಿಯಲ್ಲಿ ಭಾಗವಹಿಸಿದಾಗ, ೯.೯.೧೯೪೨ ರಂದು ಅವರನ್ನು ಬೆಂಗಳೂರು ಕೇಂದ್ರ ಬಂದಿಖಾನೆಗೆ ದಬ್ಬಲಾಯಿತು. 'ಅಲ್ಲಿ ಮೇಲಧಿಕಾರಿಗೆ ನನಗೆ ಬರೀ ಒಂದು ಮಣ್ಣಿನ ಮಗ್ಗಿ, ಒಂದು ಮಣ್ಣಿನ ಮುಚ್ಚಳ ಮತ್ತು ಎರಡು ಕರಿಕಂಬಳಿಗಳನ್ನು ಕೊಟ್ಟಿದ್ದನ್ನು ನೋಡಿ ಮನಸ್ಸಿಗೆ ತುಂಬಾ ದುಃಖವಾಯಿತು'[೧೯] ಎಂದು ಅವರು ಅಂದಿನ ಬಂದಿಖಾನೆಯ ಸ್ಥಿತಿಯ ಬಗ್ಗೆ ಹೇಳಿಕೊಂಡಿದ್ದಾರೆ.

೧೯೪೨ ರ ಕ್ವಿಟ್ ಇಂಡಿಯಾ ಚಳುವಳಿಯಲ್ಲಿ ಮೊರಬದ ಹೋರಾಟಗಾರರು ಪಾಲ್ಗೊಂಡು, ಬೆಳಗಾವಿಯ ಹಿಂಡಲಗಾ ಕೇಂದ್ರ ಬಂದಿಖಾನೆಯಲ್ಲಿ ಸೆರೆಯಾದಾಗ ಅಲ್ಲಿನ ದುಸ್ಥಿತಿ ಹೇಗಿತ್ತೆಂದರೆ 'ಹಿಂಡಲಗ ಜೈಲಿನ ಕತ್ತಲು

ಕೋಣೆಗಳಲ್ಲಿ ಬಹಳ ದೊಡ್ಡ ಅಪರಾಧ ಎಸಗಿದ ಕೊಲೆಗಡುಕರನ್ನು ಮಾತ್ರವೇ ಹಾಕುವುದು ರೂಢಿ. ಆದರೆ ಮೊರಬದ ಚಳುವಳಿಗಾರರು ರಾಜಕೀಯ ಬಂದಿಗಳಾದರೂ ಬಂದಿಖಾನೆ ಅಧಿಕಾರಿಗಳು ಅವರನ್ನು ಕತ್ತಲು ಕೋಣೆಗೆ ದೂಡಿಬಿಟ್ಟರು. ಗಾಳಿ, ಬೆಳಕು, ಜನಸಂಪರ್ಕ ಒಂದೂ ಇಲ್ಲ. ಹರಿದು ತಿನ್ನುವ ಸೊಳ್ಳೆ, ತಿಗಣೆ, ಹಲ್ಲಿ, ಚೇಡ, ಕೊಳಕಿನ ರಾಶಿ, ಸುಣ್ಣ ಕಾಣದ ಗೋಡೆ, ಗುಂಡಿಬಿದ್ದ ನೆಲ, ವಾಕರಿಕೆ ಬರಿಸುವ ದುರ್ವಾಸನೆ, ಮೈಮೇಲೆ ಎಳೆದುಕೊಳ್ಳಲು ಸಾಧ್ಯವಾಗದಷ್ಟು ಜಿಡ್ಡಿನಿಂದ ದುರ್ನಾತ ಹೊಡೆಯುತ್ತಿರುವ ಕಂಬಳಿ, ಬಂದೂಕನ್ನು ಹೊತ್ತು ತಿರುಗುವ ಬಂದಿಖಾನೆ ಪೊಲೀಸರನ್ನು ಬಿಟ್ಟರೆ ಅಲ್ಲಿ ನರಪಿಳೆಯೂ ಇಲ್ಲ. ಹೊರಗಡೆ ಇಣುಕಲು ಒಂದು ಸಣ್ಣ ಕಿಂಡಿ ಮಾತ್ರ'[೧೭] ಎಂದು ಗ್ರಂಥದಲ್ಲಿ ವಿವರಿಸಲ್ಪಟ್ಟಿದೆ. ಕೈದಿಗಳನ್ನು ಅಮಾನುಷವಾಗಿ ನೋಡಿಕೊಳ್ಳಲಾಗುತ್ತಿತ್ತು ಎಂದು ಗ್ರಂಥದಲ್ಲಿ ಹಲವು ಕಡೆ ಉಲ್ಲೇಖಿಸಲ್ಪಟ್ಟಿದೆ.

ಕರ್ನಾಟಕದ ಸ್ವಾತಂತ್ರ್ಯ ಚಳುವಳಿಯಲ್ಲಿ ಅಳಿಸಲಾಗದ ಪ್ರಕರಣ 'ಈಸೂರ ಪ್ರಕರಣ'. ತಮ್ಮ ಹಳ್ಳಿಗೆ ಬಂದ ಸರ್ಕಾರಿ ಅಧಿಕಾರಿಗಳಾದ ಅಮಲ್ದಾರ ಚೆನ್ನಕೃಷ್ಣಪ್ಪ ಮತ್ತು ಸಬ್ ಇನ್ಸ್‌ಪೆಕ್ಟರ್ ಕೆಂಚೇಗೌಡರಿಗೆ, ಚಳುವಳಿಗಾರರು ಒತ್ತಾಯದಿಂದ ಗಾಂಧಿ ಟೋಪಿ ಹಾಕಹೊರಟಾಗ, ಘಟಿಸಿದ ಗಲಭೆಯಲ್ಲಿ ಆ ಇಬ್ಬರು ಅಧಿಕಾರಿಗಳನ್ನು ಕಡಿದು ಹಾಕಲಾಯಿತು. ಈ ಗಲಭೆಯ ಸಂಬಂಧ ೫.೧೨.೧೯೪೨ ರಂದು ಬಂದ ತೀರ್ಪಿನಂತೆ, ೧೧ ಮಂದಿಗೆ ಗಲ್ಲುಶಿಕ್ಷೆ, ೨೧ ಮಂದಿಗೆ ಜೀವಾವಧಿ ಶಿಕ್ಷೆ ನಿಗದಿಯಾಯ್ತು. ಜೀವಾವಧಿ ಶಿಕ್ಷೆಗೊಳಗಾದವರು ಬೆಂಗಳೂರು ಕೇಂದ್ರ ಬಂದಿಖಾನೆಯಲ್ಲಿ ಅನುಭವಿಸಿದ ಶಿಕ್ಷೆ, ಅವರ ಅನುಭವ ಹೀಗಿದೆ: ಬಂದಿಖಾನೆಯಲ್ಲಿ ಮಲಗಲು ಚಾಪೆ, ಹೊದೆಯಲು ಕಂಬಳಿ, ಊಟಕ್ಕೆ ಅಲ್ಯುಮಿನಿಯಂ ತಟ್ಟೆ ಚೊಂಬುಗಳು, ತೊಡಲು ಕೊಟ್ಟಿರುವ ಒಂದು ಜೊತೆ ಬಟ್ಟೆಗಳೇ ನಮ್ಮ ಆಸ್ತಿ. ಬ್ಯಾರಕ್‌ಗಳಲ್ಲಿ ಮಣ್ಣಿನಿಂದ ಕಟ್ಟಲ್ಪಟ್ಟ ಜಗಲಿಗಳೇ ನಮ್ಮ ಮಂಚ. ಅಲ್ಲಿ ನಮ್ಮ ಪ್ರಥಮ ಪರಿಚಯವೆಂದರೆ ರಾಗಿಮನೆ. ಕಠಿಣ ಶಿಕ್ಷೆಗೆ ಗುರಿಯಾದವರಿಗೆ ಆಗುತ್ತಿದ್ದ ಮೊದಲ ಪರಿಚಯುವೆಂದರೆ ಆ ರಾಗಿಮನೆ. ನಮ್ಮನ್ನು ೨-೧೨-೧೯೪೨ ರಿಂದ ರಾಗಿ ಬೀಸಲು ಹಚ್ಚಿದರು. ೧೩ ಮಂದಿ ಒಂದೆಡೆ ಸೇರಲು ಅದು ಸದವಕಾಶ. ಪ್ರತಿ ಆಳು ದಿನಕ್ಕೆ ೨೫ ಸೇರು ಬೀಸಬೇಕಾಗಿತ್ತು. ಒಂದೊಂದು ಕಲ್ಲಿಗೆ ಒಬ್ಬೊಬ್ಬರೇ ಕೂತು ರಾಗಿ ಬೀಸಬೇಕಾಗಿತ್ತು. ತಪ್ಪಿದಲ್ಲಿ ಅದಕ್ಕೆ ಬದಲಾಗಿ ಬೇರೆ ಶಿಕ್ಷೆ ಅನುಭವಿಸಬೇಕಾಗಿತ್ತು. ಬೆಳಿಗ್ಗೆ ಊಟದ ನಂತರ ಸುಮಾರು ೯ ಗಂಟೆಗೆ ಪ್ರಾರಂಭವಾದ ರಾಗಿ ಬೀಸುವ ಕೆಲಸ ಸಂಜೆ ಮುಗಿಯುತ್ತಿತ್ತು.

ಮೇಲಿನ ಕೋರ್ಟಿಗೆ ಅಪೀಲು ಹೋದ ೧೧ ಮಂದಿ ಗಲ್ಲು ಶಿಕ್ಷೆ ಒಳಗಾದವರನ್ನು ಪ್ರತ್ಯೇಕವಾದ, ಯಾರ ಸಂಪರ್ಕವೂ ಇಲ್ಲದ ಸೆಲ್ಲುಗಳಲ್ಲಿ ಇಡಲಾಗಿತ್ತು. ೧೦ ಅಡಿ ಉದ್ದ ೪ ಅಡಿ ಅಗಲವಿರುವ ಈ ಸೆಲ್ಲುಗಳಿಗೆ ಕಿಟಕಿಗಳಿಲ್ಲ, ಕಬ್ಬಿಣ ಸರಳುಳ್ಳ ಬಾಗಿಲು ಮಾತ್ರ. ಮಲಗಲು ಒಂದು ಜಗಲಿ. ದೇಹಭಾದೆ ತೀರಿಸಿಕೊಳ್ಳಲು ಒಂದು ಮಣ್ಣಿನ ಮಡಕೆ, ನೀರಿಗೆ ಇನ್ನೊಂದು ಮಡಕೆ, ಒಳಗೆ ಕಗ್ಗತ್ತಲು, ಆಹಾರವೂ ತೀರಾ ಕಳಪೆ.

ಕೆಲ ತಿಂಗಳಾದ ನಂತರ ನಮ್ಮನ್ನು ರಾಗಿ ಬೀಸುವ ಕೆಲಸದಿಂದ ಬಿಡಿಸಿ ಬೇರೆ ಕೆಲಸಕ್ಕೆ ನೇಮಿಸಿದರು. ವೃತ್ತಿಯಲ್ಲಿ ದರ್ಜಿಗಳಾಗಿದ್ದ ಸುಬ್ಬರಾಯಪ್ಪ ಮತ್ತು ಹುಚ್ಚೂರಾಯಪ್ಪರವರಿಗೆ ಬಟ್ಟೆ ಹೊಲೆಯುವ ಕೆಲಸ. ಕೆಲವರಿಗೆ ಕೈಮಗ್ಗದಲ್ಲಿ ಬಟ್ಟೆ ನೇಯುವ ಕೆಲಸ. ಇನ್ನು ಕೆಲವರಿಗೆ ತೋಟಗಾರಿಕೆ, ಮತ್ತೆ ಕೆಲವರಿಗೆ ಬಡಗಿ

ಕೆಲಸ, ರತ್ನಗಂಬಳಿ ನೇಯುವ ಕೆಲಸ. ಕೆಲವರು ಸುಣ್ಣಬಣ್ಣ ಹಚ್ಚುವ ಕೆಲಸಕ್ಕೂ ನೇಮಕಗೊಂಡರು. ಅವರವರ ಕೆಲಸಕ್ಕೆ ತಕ್ಕ ಹಾಗೆ ದಿನಗೂಲಿಯಾಗಿ ನಾಲ್ಕು ಬೀಡಿ ಕೊಡುತ್ತಿದ್ದರು. ಬೀಡಿ ಬೇಡದವರಿಗೆ ಎರಡು ಕಾಸನ್ನು ಅವರ ಲೆಕ್ಕಕ್ಕೆ ಜಮಾ ಮಾಡಿ ಬಿಡುತ್ತಿದ್ದರು.[೧೮]

ದೇಶದ ಸ್ವಾತಂತ್ರ್ಯ ಹೋರಾಟದಲ್ಲಿ ಪಾಲ್ಗೊಂಡ ಹಲವು ಮಂದಿ ಪ್ರಮುಖ ರಾಷ್ಟ್ರನಾಯಕರು, ಸ್ವಾತಂತ್ರ್ಯಪೂರ್ವ ಕರ್ನಾಟಕದ ಬಂದಿಖಾನೆಗಳ ಇತಿಹಾಸದಲ್ಲಿ ತಮ್ಮ ಹೆಸರುಗಳನ್ನು ದಾಖಲಿಸಿದ್ದಾರೆ. ಬೆಳಗಾಂನ ಹಿಂಡಲಗಾ ಬಂದಿಖಾನೆಯಲ್ಲಿದ್ದ ವೀರಸಾವರ್ಕರ್, ಬಳ್ಳಾರಿ ಕೇಂದ್ರ ಬಂದಿಖಾನೆಯಲ್ಲಿದ್ದ ರಾಜಾಜಿ, ಟೇಕಲ್ ಸುಬ್ರಹ್ಮಣ್ಯಂ, ಬೆಂಗಳೂರು ಬಂದಿಖಾನೆಯಲ್ಲಿದ್ದ ಮಾಜಿ ಮುಖ್ಯಮಂತ್ರಿ ಕೆಂಗಲ್ ಹನುಮಂತಯ್ಯ ಮತ್ತು ಎಸ್. ನಿಜಲಿಂಗಪ್ಪ, ಶ್ರೀ.ಕೆ.ಸಿ. ರೆಡ್ಡಿ, ಕಮಲಾದೇವಿ ಚಟ್ಟೋಪಾಧ್ಯಾಯ, ನಿಟ್ಟೂರು ಶ್ರೀನಿವಾಸರಾವ್ ಮುಂತಾದ ಹಳೆಯ ಕೈದಿಗಳು ಬಂದಿಖಾನೆ ಇತಿಹಾಸದ ಪುಟಗಳಲ್ಲಿದ್ದಾರೆ.

## ೨. ಕರ್ನಾಟಕದ ಬಂದಿಖಾನೆಗಳ ಇತಿಹಾಸ : ಸ್ವಾತಂತ್ರ್ಯೋತ್ತರ

ಭಾರತದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಮಹತ್ತರ ಪಾತ್ರ ವಹಿಸಿದ್ದ ಅನೇಕ ಭಾರತೀಯ ಧುರೀಣರು ತಮ್ಮ ಹೋರಾಟದ ಹಲವು ವರ್ಷಗಳನ್ನು ಬಂದಿಖಾನೆಗಳಲ್ಲಿ ಕಳೆದಿದ್ದುದರಿಂದ ಅದರ ಸ್ಥಿತಿ - ಗತಿಗಳನ್ನು ಸುಧಾರಿಸಬೇಕಾದ ಅಗತ್ಯವನ್ನು ಮನಗಂಡಿದ್ದರು. ಅಂತೆಯೇ ಸ್ವಾತಂತ್ರ್ಯ ದೊರೆತೊಡನೆ ಹಲವು ರಾಜ್ಯಗಳು ತಮ್ಮ ತಮ್ಮ ರಾಜ್ಯದ ಬಂದಿಖಾನೆಗಳ ಹಾಗೂ ಕೈದಿಗಳ ಸ್ಥಿತಿ - ಗತಿಗಳನ್ನು ಸುಧಾರಿಸುವುದಕ್ಕಾಗಿ ಸಮಿತಿಗಳನ್ನು ರಚಿಸಿದವು. ಮೈಸೂರು ರಾಜ್ಯ ಮಾತ್ರ ಯಾವುದೇ ಸಮಿತಿಯನ್ನು ನೇಮಿಸಲಿಲ್ಲ. ಇತರ ರಾಜ್ಯಗಳು ನೇಮಿಸಿದ್ದ ಆ ಸಮಿತಿಗಳು ಸಲ್ಲಿಸಿದ್ದ ವರದಿ ಶಿಫಾರಸುಗಳು ತುಂಬ ವೈಜ್ಞಾನಿಕ, ಪ್ರಗತಿಪರ ಸಾಮಾಜಿಕ ನ್ಯಾಯ ಉಳ್ಳದಾದ್ದಿತ್ತು. ಮೈಸೂರು ಸರಕಾರ ಅವುಗಳಲ್ಲಿ ಕೆಲವನ್ನು ಆಯ್ದು ಮುಂದೆ ತನ್ನ 'ಕರ್ನಾಟಕ ಬಂದಿಖಾನೆ ಅಧಿನಿಯಮ ೧೯೬೩' ರಲ್ಲಿ ಅಳವಡಿಸಿಕೊಂಡಿತು.

ಕರ್ನಾಟಕದ ಬಂದಿಖಾನೆಗಳ ದುರವಸ್ಥೆ ಸ್ವಾತಂತ್ರ್ಯಾನಂತರ ತಿಳಿಗೊಂಡು ಸುವ್ಯವಸ್ಥಿತವಾಗಬಹುದು ಎಂದು ಭಾವಿಸಲಾಗಿತ್ತು. ಆದರೆ ಆಂಗ್ಲರು ಹಾಕಿಕೊಟ್ಟ ಕಾರಾಗೃಹ ಆಡಳಿತದ ಅಡಿಪಾಯ ಬಿಟ್ಟು ಭಾರತೀಯರಿಗೆ ಕದಲಲಾಗಲಿಲ್ಲ ಎಂಬುದು ಕಾಗೋಡು ಸತ್ಯಾಗ್ರಹದ ಸಂದರ್ಭದಲ್ಲಿ (೧೯೫೦ - ೫೧) ಸತ್ಯಾಗ್ರಹಿಗಳು ಕಂಡುಕೊಂಡ ಸತ್ಯ. 'ಸಾಗರದ ಸಬ್ ಜೈಲು ಪುಟ್ಟ ನರಕವಾದರೆ, ಶಿವಮೊಗ್ಗದ ಜಿಲ್ಲಾ ಕಾರಾಗೃಹ ಇದಕ್ಕಿಂತ ದೊಡ್ಡ ನರಕ. ಪ್ರತಿಯೊಬ್ಬರಿಗೂ ಮಲಗಲು ಈಚಲ ಚಾಪೆ, ತಲೆದಿಂಬು ಎಂಬುದು ಒಂದು ಪುಟ್ಟ ಮರದ ತೌಡಿನ ಕೈಚೀಲ, ಒಂದು ಒರಟು ಕಂಬಳಿ, ಒಂದು ಅಲ್ಯುಮಿನಿಯಂ ತಟ್ಟೆ - ಲೋಟ ಇದು ಕೈದಿಯ ಸಂಪತ್ತು. ಒಂದು ಮಿಣೆಗುಟ್ಟುವ ದೀಪ, ಊಟದ ವ್ಯವಸ್ಥೆಯಂತೂ ತೀರಾ ಘೋರ. ಪ್ರತಿಯೊಬ್ಬರಿಗೂ ಒಂದು ಮಣ್ಣಿನ ಕುಡಿಕೆ; ಒಂದು ಮಣ್ಣಿನ ಮುಚ್ಚಳ. ಆ ಮುಚ್ಚಳದಲ್ಲಿ ಅರ್ಧ ಹಿಡಿ ಒರಟು ದಬ್ಬಣ ಸಾಲಾ ಅಕ್ಕಿ, ಅರ್ಧ ಹಿಡಿ ರಾಗಿ ಹಸಿಟ್ಟು, ಒಂದೂವರೆ ಮೆಣಸಿನ ಕಾಯಿ - ಗೋಲಿಗಾತ್ರದ ಹುಣಿಸೆಹಣ್ಣು, ಒಂದು ಚಿಟಿಕೆ ಕರಿ ಉಪ್ಪು. ಒಂದು ಸಣ್ಣ ಕಟ್ಟು ಪುಳ್ಳೆ ಸೌದೆ. ಇದು ಪ್ರತಿ ಕೈದಿಗೂ ದಿನದ ಪಡಿತರ. ಹೀಗೆ ದೊರೆತ ಅಕ್ಕಿ, ರಾಗಿ ಹಸಿಟ್ಟು, ಮೆಣಸಿನಕಾಯಿ, ಹುಣಸೆಹಣ್ಣು,

ಉಪ್ಪು ಇವುಗಳನ್ನೆಲ್ಲ ಒಟ್ಟುಗೂಡಿಸಿ ಬೆಳಿಗ್ಗೆಗೆ ಒಂದು ಹಿಡಿ ಅನ್ನವನ್ನೂ, ರಾತ್ರೆಗೆ ಒಂದು ಬಟ್ಟಲು ರಾಗಿಗಂಜಿ ತಯಾರು ಮಾಡಿ ಎಲ್ಲರೂ ಹಂಚಿಕೊಳ್ಳುತ್ತಿದ್ದೆವು. ಆದರೆ ಯಾರಿಗೂ ಹೊಟ್ಟೆ ತುಂಬುತ್ತಿರಲಿಲ್ಲ. ವಿದ್ಯಾರ್ಥಿಗಳು, ಹುಡುಗರಿಗಂತೂ ಇದು ಏನೇನೂ ಸಾಲದು. ಸ್ನಾನಕ್ಕೆ ನೀರಿಲ್ಲ, ಬಟ್ಟೆ ಒಗೆಯಲು ಸೋಪು ಇಲ್ಲ, ಬದಲಾಯಿಸಲು ಬೇರೆ ಬಟ್ಟೆ ಇಲ್ಲ - ಎಲ್ಲೂ... ಇಲ್ಲ... ಇಲ್ಲ...[೧೯]

ಈ ಸ್ಥಿತಿಯಿಂದ ಕರ್ನಾಟಕದ ಬಂದಿಖಾನೆಗಳು ಮೇಲೆದ್ದು ಬಂದದ್ದು ಕೇಂದ್ರ ಸರಕಾರ 'ಅಖಿಲ ಭಾರತ ಬಂದಿಖಾನೆ ಕೈಪಿಡಿ ಸಮಿತಿ ೧೯೫೭ - ೫೯' ಯನ್ನು ರಚಿಸಿ, ಆ ಸಮಿತಿಯ ಮೂಲಕ 'ಮಾದರಿ ಬಂದಿಖಾನೆ ಕೈಪಿಡಿ'ಯೊಂದನ್ನು ಸಿದ್ಧಪಡಿಸಿದ ನಂತರ. ಅಖಿಲ ಭಾರತ ಬಂದಿಖಾನೆ ಕೈಪಿಡಿ ಸಮಿತಿಯ ಶಿಫಾರಸಿನಂತೆ ಕೇಂದ್ರ ಸರಕಾರವು ೧೯೬೧ ರಲ್ಲಿ ಸುಧಾರಣಾ ಸೇವೆಗಳ ಕೇಂದ್ರದಳವೊಂದನ್ನು (Central Bureau of Correctional Services) ನೇಮಿಸಿ, ಅದರ ವ್ಯಾಪ್ತಿಗೆ ಪ್ರತೀ ರಾಜ್ಯದ ಬಂದಿಖಾನೆಗಳ ಸುಧಾರಣೆಯನ್ನು ಗಮನಿಸುವ ಹೊಣೆಯನ್ನು ವಿಧಿಸಿ, ಪ್ರತೀ ರಾಜ್ಯವೂ ಕೇಂದ್ರ ಸರಕಾರದ 'ಮಾದರಿ ಬಂದಿಖಾನೆ ಕೈಪಿಡಿ' ಹಾಗೂ 'ಅಖಿಲ ಭಾರತ ಬಂದಿಖಾನೆ ಕೈಪಿಡಿ ಸಮಿತಿ'ಯ ಶಿಫಾರಸುಗಳನ್ನು ಅಳವಡಿಸಿಕೊಂಡು ತಮ್ಮ ಹಳೆಯ ಬಂದಿಖಾನೆ ಕೈಪಿಡಿಗಳನ್ನು ಪರಿಷ್ಕರಿಸುವಂತೆ ನೋಡಿಕೊಳ್ಳುವ ಜವಾಬ್ದಾರಿಯನ್ನು ಆ ದಳಕ್ಕೆ ಹೊರಿಸಿತು. ಈ ಹೊಸ ಜವಾಬ್ದಾರಿ ಹೊತ್ತ 'ಸುಧಾರಣಾ ಸೇವೆಗಳ ಕೇಂದ್ರ ದಳದ' ಕಣ್ಗಾವಲಿಂದ ಬಹಳ ವರ್ಷ ತಪ್ಪಿಸಿಕೊಂಡ ಕರ್ನಾಟಕ ರಾಜ್ಯ ತನ್ನ ಹಳೆಯ ಕೈಪಿಡಿಗಳಲ್ಲೇ ಬಂದಿಖಾನೆಗಳ ಆಡಳಿತವನ್ನು ದೂಡುತ್ತಿತ್ತು. ಕೊನೆಗೂ ೧೯೬೩ ರಲ್ಲಿ 'ಕರ್ನಾಟಕ ಬಂದಿಖಾನೆ ಅಧಿನಿಯಮ ೧೯೬೩' ಹಾಗೂ ೧೯೪ ಜುಲೈ ೨೫ ರಂದು 'ಕರ್ನಾಟಕ ಬಂದಿಖಾನೆ ನಿಯಮ - ೧೯೭೪'ನ್ನು ಸಿದ್ಧಪಡಿಸಿ ಆಡಳಿತಕ್ಕೆ ಅಳವಡಿಸಿಕೊಂಡ ನಂತರ ೧೯೭೮ ರಲ್ಲಿ 'ಕರ್ನಾಟಕ ಕಾರಾಗೃಹ ಕೈಪಿಡಿ'ಯನ್ನು ರಚಿಸಿ ಆಡಳಿತಕ್ಕೆ ಅದನ್ನು ಜಾರಿಗೊಳಿಸಿತು.

ಮುಂದೆ ರಾಜ್ಯದ ಬಂದಿಖಾನೆಗಳು ಈ ಕೆಳಕಂಡ ಆಡಳಿತಾತ್ಮಕ ಹೊಂದಿಕೆಯ ಕಾನೂನು ಮತ್ತು ನಿಯಮಗಳಂತೆ ಕಾರ್ಯನಿರ್ವಹಿಸತೊಡಗಿದವು.

೧. ಕರ್ನಾಟಕ ಬಂದಿಖಾನೆ ಅಧಿನಿಯಮ
೨. ಕರ್ನಾಟಕ ಬಂದಿಗಳ ಅಧಿನಿಯಮ
೩. ಕರ್ನಾಟಕ ಬಂದಿಖಾನೆಗಳ ನಿಯಮಗಳು
೪. ಕರ್ನಾಟಕ ಬಂದಿಖಾನೆ ಕೈಪಿಡಿ
೫. ಬಾಲಾಪರಾಧ ಶಾಲಾ ಅಧಿನಿಯಮ
೬. ಬಾಲಾಪರಾಧ ಶಾಲೆ ನಿಯಮಗಳು

'ಅಖಿಲ ಭಾರತ ಬಂದಿಖಾನೆ ಕೈಪಿಡಿ ಸಮಿತಿ'ಯ ಶಿಫಾರಸುಗಳನ್ನು ಕರ್ನಾಟಕ ಸರಕಾರ ತನ್ನ ಕೈಪಿಡಿಯಲ್ಲಿ ಬಳಸಿಕೊಂಡ ನಂತರ ರಾಜ್ಯದ ಬಂದಿಖಾನೆಗಳ ಚಿತ್ರಣವೇ ಬದಲಾಯ್ತು. ಕೈದಿಗೆ ದುಡಿತದ ಮೂಲಕ ಶಿಕ್ಷೆಯಲ್ಲಿ ಮಾಫಿ, ಶಿಕ್ಷೆಯನ್ನು ಅನುಭವಿಸುತ್ತಿರುವಾಗಲೇ ಸಮಾಜ - ಸಂಬಂಧಿಕರ ಸಂಪರ್ಕಕ್ಕಾಗಿ ಪೆರೋಲ್ ಮತ್ತು

ಫರ್ಲೋ ಮೇಲೆ ಬಿಡುಗಡೆ, ಪತ್ರ ಹಾಗೂ ಸಂದರ್ಶನಗಳಲ್ಲಿದ್ದ ಬಿಗುವಿನ ಸಡಿಲಿಕೆ, ಗ್ರಂಥಾಲಯ ಸೌಲಭ್ಯ, ಶಿಕ್ಷಣ ಮುಂದುವರಿಕೆ, ಕೈದಿಗಳಿಗೆ ಜ್ಞಾನ ಸಂವಹನ ಮಾಧ್ಯಮಗಳನ್ನು ಒದಗಿಸಿ ಅವರ ಮನಪರಿವರ್ತನೆಗೆ ಪ್ರಯತ್ನ, ಬಯಲು ಬಂದಿಖಾನೆಗಳನ್ನು ನಿರ್ಮಿಸಿ ದೀರ್ಘಾವಧಿ ಶಿಕ್ಷೆ ಅನುಭವಿಸಿದ ಕೈದಿಗಳಿಗೆ ಪರೋಕ್ಷವಾಗಿ ಸಮಾಜದ ಸಂಪರ್ಕ ಕಲ್ಪಿಸುವುದು - ಇತ್ಯಾದಿ ಕೈದಿ ಕೇಂದ್ರಿತ ಸುಧಾರಣೆಗಳಿಂದ ಬಂದಿಖಾನೆಯ ಪರಿಕಲ್ಪನೆಯಲ್ಲೇ ಮಹತ್ತರ ಬದಲಾವಣೆ ಉಂಟಾಯಿತು. ಈ ಎಲ್ಲ ಸುಧಾರಣೆಗಳ ಜತೆ ಕರ್ನಾಟಕ ಬಂದಿಖಾನೆ ಅಧಿನಿಯಮ, ಕರ್ನಾಟಕ ಬಂದಿಖಾನೆಗಳ ನಿಯಮಗಳೊಳಗಿನ ಸುಧಾರಣಾ ಕ್ರಮ - ನಿಯಮಗಳು, ಕೈದಿಗಳಿಗೆ ಕತ್ತಲ ಬದುಕಿನೊಳಗೆ ಹೊಸಬೆಳಕನ್ನು ಹನಿಸಿದಂತಾಯ್ತು.

### ೨.೧ ಕರ್ನಾಟಕದಲ್ಲಿ ಬಯಲು ಬಂದಿಖಾನೆ

ಕರ್ನಾಟಕದಲ್ಲಿ ಬಯಲು ಬಂದಿಖಾನೆಯೊಂದು ಮೊದಲು ಆರಂಭಗೊಂಡಿದ್ದು ೧೯೬೮ರಲ್ಲಿ ಬೆಳಗಾವಿ ಜಿಲ್ಲೆಯ ಸೌಂದತ್ತಿ ತಾಲೂಕು ಉಗರಗೋಳದಲ್ಲಿ. ಮಲಪ್ರಭಾ ಯೋಜನೆಗಾಗಿ ಕಾಲುವೆಗಳನ್ನು ಅಗೆಯಲು ರಾಜ್ಯದ ಕೈದಿಗಳನ್ನು ಬಳಸಿಕೊಳ್ಳಲು ಆ ಬಂದಿಖಾನೆಯನ್ನು ನಿರ್ಮಿಸಲಾಗಿತ್ತು. ಉದ್ದೇಶಿತ ಕಾರ್ಯ ಪೂರ್ಣವಾದೊಡನೆ ಆ ಬಯಲು ಬಂದಿಖಾನೆಯನ್ನು ಮುಚ್ಚಿ, ಬೆಂಗಳೂರಿನಲ್ಲಿ ಬಯಲು ಬಂದಿಖಾನೆಯೊಂದನ್ನು ಸ್ಥಾಪಿಸಲು ಉದ್ದೇಶಿಸಲಾಯಿತು.

ಅಖಿಲ ಭಾರತ ಬಂದಿಖಾನೆ ಕೈಪಿಡಿ ಸಮಿತಿಯು (೧೯೫೭-೫೯) ಜೀವಾವಧಿ ಕೈದಿಗಳಿಗೆ ಬಯಲು ಬಂದಿಖಾನೆ ನಿರ್ಮಿಸುವ ಅವಶ್ಯಕತೆಯ ಬಗ್ಗೆ ತನ್ನ ಶಿಫಾರಸಿನಲ್ಲಿ ಸ್ಪಷ್ಟಪಡಿಸಿರುವುದರಿಂದ, ರಾಜ್ಯ ಸರಕಾರವು ೧೯೭೧-೭೨ ರಲ್ಲಿ ಬೆಂಗಳೂರು ಜಿಲ್ಲೆಯ ದೇವನಹಳ್ಳಿ ತಾಲೂಕು, ಕೋರಮಂಗಲ ಗ್ರಾಮದಲ್ಲಿ ೧೧೪ ಎಕ್ರೆ ಜಮೀನಿನಲ್ಲಿ ಬಯಲು ಬಂದೀಖಾನೆಯೊಂದನ್ನು ಸ್ಥಾಪಿಸಿತು. ಇಲ್ಲಿ ಅತ್ಯಂತ ಕನಿಷ್ಠ ಭದ್ರತೆಯಲ್ಲಿ ಕೆಲಸ ಮಾಡುವ ಬಂದಿಗಳಿಗೆ ತಾವೂ ಹೆಚ್ಚುಕಡಿಮೆ ಬಿಡುಗಡೆಯಾಗಿರುವ ಕೈದಿಗಳಂತೆ ತಾವೂ ಸಮಾಜದಲ್ಲೇ ಜೀವಿಸುತ್ತಿದ್ದೇವೆ ವಿನಃ ಬಂಧನದಲ್ಲಿಲ್ಲ ಎಂಬ ಮನಸ್ಥಿತಿ - ಪರಿಸರವನ್ನು ಅವರಿಗೆ ಕಲ್ಪಿಸಿಕೊಡುವುದೇ ಈ ಬಯಲು ಬಂದಿಖಾನೆಯ ಸ್ಥಾಪನೆಯ ಹಿಂದಿರುವ ಉದ್ದೇಶ.

ಕೇಂದ್ರ ಬಂದಿಖಾನೆಯಲ್ಲಿ ಕನಿಷ್ಟ ಅವರ ಜೀವಾವಧಿ ಶಿಕ್ಷೆ ಅನುಭವಿಸಿರುವ ಉತ್ತಮ ನಡವಳಿಕೆಯುಳ್ಳ, ಕೃಷಿ ಕೆಲಸವನ್ನು ಪ್ರೀತಿಸುವ ಆರಾಧಿಸುವ ಕೈದಿಗಳನ್ನು ಇಲ್ಲಿಗೆ ವರ್ಗಾಯಿಸಲಾಗುತ್ತದೆ. ಜೀವಾವಧಿ ಶಿಕ್ಷೆ ಅನುಭವಿಸಲು ಬಂದಿಖಾನೆಗಳಿಗೆ ಬರುವ ಬಹುಪಾಲು ಜೀವಾವಧಿ ಕೈದಿಗಳಲ್ಲಿ ಹೆಚ್ಚಿನವರು ಗ್ರಾಮೀಣ ಹಿನ್ನೆಲೆಯಿಂದ ಬರುವವರಾಗಿರುವುದರಿಂದ, ಆಧುನಿಕ ಕೃಷಿ ಪದ್ಧತಿಯಲ್ಲಿ ತರಬೇತಿ ಕೊಟ್ಟರೆ ಅವರು ಬಿಡುಗಡೆಯ ನಂತರ ಉತ್ತಮ ವ್ಯವಸಾಯಗಾರರಾಗಬಹುದು ಎಂಬ ದೃಷ್ಟಿಯಿಂದ ಬಯಲು ಬಂದಿಖಾನೆಯಲ್ಲಿ ಕೃಷಿ ಹಿನ್ನೆಲೆಯ ಕೈದಿಗಳಿಗೆ ಪ್ರಥಮ ಪ್ರಾಶಸ್ತ್ಯ ನೀಡಲಾಗುತ್ತದೆ.

ಬಯಲು ಬಂದಿಖಾನೆಯಲ್ಲಿ ಆಧುನಿಕ ಕೃಷಿ ಪದ್ಧತಿ ಹಾಗೂ ತೋಟಗಾರಿಕೆಯಲ್ಲಿ ಹೆಚ್ಚಿನ ತರಬೇತಿಯನ್ನು ನೀಡಲಾಗುತ್ತದೆ. ರಾಗಿ, ಭತ್ತ, ತೊಗರಿ, ತೆಂಗು, ಕಬ್ಬು, ಹತ್ತಿ, ಜೋಳದಿಂದ ಹಿಡಿದು ವಿವಿಧ ತರಕಾರಿ ಹಣ್ಣು-ಹಂಪಲುಗಳವರೆಗೆ ಇಲ್ಲಿ ಬೆಳೆಯಲಾಗುತ್ತದೆ. ರೇಷ್ಮೆ, ಕುರಿ, ಮೊಲ, ಹಂದಿ, ಕೋಳಿ, ಮೀನು ಸಾಕಾಣಿಕೆ ಬಗ್ಗೆ ಇಲ್ಲಿ ತರಬೇತಿ ನೀಡಲಾಗುತ್ತದೆ. ಮಣ್ಣು ಸಂರಕ್ಷಣೆ ಮತ್ತು ಹನಿ ನೀರಾವರಿ ಬಳಕೆ ಬಗ್ಗೆ ಪ್ರಾತ್ಯಕ್ಷಿಕೆ ತರಬೇತಿ ನೀಡಲಾಗುತ್ತದೆ. ಆಧುನಿಕ ಕೃಷಿ ಸಲಕರಣೆ, ಯಂತ್ರವನ್ನು ಬಳಸುವ ಬಗ್ಗೆಯೂ ಇಲ್ಲಿ ತರಬೇತಿ ನೀಡಲಾಗುತ್ತದೆ. ಇಲ್ಲಿ ಅಧಿಕೃತವಾಗಿ ೮೦ ಮಂದಿ ಕೈದಿಗಳಿಗೆ ಸ್ಥಳಾವಕಾಶವಿದ್ದರೂ ಸದ್ಯಕ್ಕೆ ೪೫ ಮಂದಿ ಕೈದಿಗಳಿದ್ದಾರೆ. ತೋಟಗಾರಿಕೆ ಕೃಷಿ ವಿಭಾಗದಲ್ಲಿ ದುಡಿಯುವ ಕೈದಿಗಳಿಗೆ ದಿನವೊಂದಕ್ಕೆ ೪೫ ರೂ.ಗಳ ದಿನಗೂಲಿ ನೀಡಲಾಗುತ್ತದೆ. ಅದರಲ್ಲಿ ಊಟ ಬಟ್ಟೆಗಾಗಿ ೨೫ ರೂ.ಗಳನ್ನು ಕಡಿತಗೊಳಿಸಲಾಗುತ್ತದೆ. ಇಲ್ಲಿನ ಕೃಷಿ ಮೂಲದಿಂದ ರಾಜ್ಯ ಬಂದಿಖಾನೆ ಇಲಾಖೆಗೆ ಹಲವು ಲಕ್ಷಗಳ ಆದಾಯ ಲಭ್ಯವಾಗುತ್ತದೆ.

### ೨.೨ ಬಂದಿಖಾನೆ ಸಿಬ್ಬಂದಿಗಳಿಗೆ ತರಬೇತಿ ಸಂಸ್ಥೆಗಳ ಆರಂಭ

ಕೈದಿಗಳನ್ನು ತಿದ್ದುವ ಕೆಲಸಕ್ಕಾಗಿ ತರಬೇತಿ ಹೊಂದಿರುವ ಸಿಬ್ಬಂದಿಗಳ ಅವಶ್ಯಕತೆಗಳನ್ನು ಮನಗಂಡ ಕೇಂದ್ರ ಸರಕಾರವು, ಅಖಿಲ ಭಾರತ ಬಂದಿಖಾನೆ ಕೈಪಿಡಿ ಸಮಿತಿಯ ಶಿಫಾರಸು ಹಾಗೂ ೧೯೭೨-೭೩ ರಲ್ಲಿ ಭಾರತ ಸರ್ಕಾರದಿಂದ ನೇಮಿಸಲ್ಪಟ್ಟ ಬಂದಿಖಾನೆ ಸುಧಾರಣಾ ಸಮಿತಿಯೊಂದರ ಶಿಫಾರಸಿನ ಮೇರೆಗೆ ದಕ್ಷಿಣ ಭಾರತದ ಕರ್ನಾಟಕ, ಕೇರಳ, ಆಂಧ್ರ ಪ್ರದೇಶ ಹಾಗೂ ತಮಿಳುನಾಡು ಸರ್ಕಾರಗಳು ಒಂದಾಗಿ, ದಕ್ಷಿಣ ಭಾರತದ ಪ್ರಾದೇಶಿಕ ಆಡಳಿತ ಸುಧಾರಣಾ ತರಬೇತಿ ಸಂಸ್ಥೆಯನ್ನು ದಿನಾಂಕ ೧.೧೦.೧೯೭೮ ರಲ್ಲಿ ವೆಲ್ಲೂರಿನಲ್ಲಿ ಆರಂಭಿಸಿದವು. ಅಲ್ಲಿ ಜೈಲರ್, ಚೀಫ್ ಜೈಲರ್, ಸಹಾಯಕ ಅಧೀಕ್ಷಕರು ಹಾಗೂ ಪ್ರೊಬೇಷನರಿ ಅಧಿಕಾರಿಗಳಿಗೆ ತರಬೇತಿ ನೀಡತೊಡಗಿದವು. ಇಲ್ಲಿ ಆರು ತಿಂಗಳ ಅವಧಿಯ ಎರಡು ತಂಡಗಳಿಗೆ ವರ್ಷವಿಡೀ ತರಬೇತಿ ನೀಡಲಾಗುತ್ತದೆ. ಕರ್ನಾಟಕ ರಾಜ್ಯಕ್ಕೆ ೧೨ ತರಬೇತಿದಾರರ ಸ್ಥಾನಗಳಿರುತ್ತವೆ. ಇದುವರೆಗೆ ೮೫ ಜನ ಅಧಿಕಾರಿ ಹಾಗೂ ಸಿಬ್ಬಂದಿಗಳಿಗೆ ಒಂದು ವರ್ಷದ ತರಬೇತಿ ನೀಡಲಾಗಿದೆ. ಸಂಸ್ಥೆಯ ವೆಚ್ಚವನ್ನು ನಾಲ್ಕು ರಾಜ್ಯಗಳು ಸಮನಾಗಿ ಭರಿಸುತ್ತವೆ. ನಾಲ್ಕೂ ರಾಜ್ಯಗಳ ಬಂದಿಖಾನೆ ಇಲಾಖೆಯ ಮಹಾನಿರೀಕ್ಷಕರು ಆಡಳಿತ ಮಂಡಳಿಯ ಸದಸ್ಯರಾಗಿರುತ್ತಾರೆ ಹಾಗೂ ಸರದಿಯ ಪ್ರಕಾರ ಒಂದು ರಾಜ್ಯದವರು ಒಂದು ವರ್ಷ ಸಂಸ್ಥೆಯ ಚೇರ್ಮನ್ ಆಗಿ ಕಾರ್ಯನಿರ್ವಹಿಸುತ್ತಾರೆ.[೨೦]

ಕೇಂದ್ರ ಸರಕಾರದಿಂದ ೧೯೭೨-೭೩ ರಲ್ಲಿ ನೇಮಕಗೊಂಡ ಬಂದಿಖಾನೆ ಸುಧಾರಣಾ ಸಮಿತಿಯು, ಬಂದಿಖಾನೆಗಳ ಕೆಳದರ್ಜೆಯ ಅಧೀನ ವಿಧಿನಿರ್ವಾಹಕ (ಆಡಳಿತ) ಸಿಬ್ಬಂದಿ, ಅಂದರೆ ಕಾವಲುಗಾರ (ವಾರ್ಡರ್), ಮುಖ್ಯ ಕಾವಲುಗಾರ (ಹೆಡ್ ವಾರ್ಡರ್), ಚೀಫ್ ವಾರ್ಡರ್ ಮುಂತಾದವರಿಗೂ ತರಬೇತಿ ನೀಡಬೇಕೆಂದು ಶಿಫಾರಸು ಮಾಡಿರುವ ಹಿನ್ನೆಲೆಯಲ್ಲಿ ರಾಜ್ಯ ಬಂದಿಖಾನೆ ಇಲಾಖೆಯು ೧೯೭೭ ರಲ್ಲಿ 'ಬಂದಿಖಾನೆ ಸಿಬ್ಬಂದಿ ತರಬೇತಿ ಸಂಸ್ಥೆ'ಯನ್ನು ಮೈಸೂರಿನಲ್ಲಿ ಆರಂಭಿಸಿತು. ಈ ಸಂಸ್ಥೆಯು ಕೇಂದ್ರ ಬಂದಿಖಾನೆಗಳ ಹಿರಿಯ ಅಧೀಕ್ಷಕರ ಹುದ್ದೆಯ ಪ್ರಾಚಾರ್ಯರನ್ನು ಮುಖ್ಯಸ್ಥರನ್ನಾಗಿಯೂ ಸಹಾಯಕ ಅಧೀಕ್ಷಕರನ್ನು ಸಹಾಯಕರನ್ನಾಗಿಯೂ ಹಾಗೂ

ಆಯುಧ ತರಬೇತಿ, ದೇಹಧಾರ್ಢ್ಯ ಬೋಧಕರನ್ನು ಮತ್ತು ಲಿಪಿಕ ಸಿಬ್ಬಂದಿಯನ್ನು ಹೊಂದಿದೆ. ವಿಶ್ವವಿದ್ಯಾಲಯದಿಂದ, ಆರಕ್ಷಕ ತರಬೇತಿ ವಿದ್ಯಾಲಯದಿಂದ, ತೋಟಗಾರಿಕೆ, ಕೃಷಿ, ವೈದ್ಯಕೀಯ ಇಲಾಖೆಗಳಿಂದ ಪರಿಣಿತ ವಿಷಯ ತಜ್ಞರನ್ನು ಉಪನ್ಯಾಸಕ್ಕಾಗಿ ಆಮಂತ್ರಿಸಲಾಗುತ್ತದೆ. ಈವರೆಗೆ ೨೬ ತಂಡಗಳಿಗೆ ಒಟ್ಟು ೭೩೨ ವಾರ್ಡರ್ ೨೩೨ ಹೆಡ್ ವಾರ್ಡರ್‌ಗಳಿಗೆ ತರಬೇತಿ ನೀಡಲಾಗಿದೆ.

ಕೈದಿಗಳ ಸುಧಾರಣೆ - ಪುನರ್ವಸತಿಗಾಗಿ ಈಗಾಗಲೇ ಇರುವ ಉದ್ಯಮಗಳ ಜತೆಗೆ ಇನ್ನೂ ಹಲವು ಉದ್ಯಮಗಳನ್ನು ಆರಂಭಿಸಲಾಯಿತು. ಮಹಿಳಾ ಕೈದಿಗಳಿಗೂ ಅಕ್ಷರಾಭ್ಯಾಸ, ಶಿಕ್ಷಣದ ಜತೆಗೆ ಕೆಲವು ಸ್ವಉದ್ಯೋಗಗಳ ತರಬೇತಿ ಹಾಗೂ ಮಜೂರಿ ಪಡೆವ ದುಡಿಯುವ ವ್ಯವಸ್ಥೆಯನ್ನು ಕಲ್ಪಿಸಿಕೊಡಲಾಯಿತು. ಬಯಲು ಬಂದಿಖಾನೆಯ ಪ್ರಕೃತಿ ಪಾಠದ ಜತೆಗೆ ರಾಜ್ಯದ ಎಲ್ಲ ಬಂದಿಖಾನೆಗಳಲ್ಲೂ ಕೃಷಿ ಭೂಮಿಯನ್ನು ವಿಸ್ತರಿಸಿಕೊಳ್ಳಲಾಯಿತು. ಅಲ್ಲೂ ತೋಟಗಾರಿಕೆ - ಕೃಷಿ ತರಬೇತಿ, ಆಧುನಿಕ ಕೃಷಿಯಲ್ಲಿ ಕೈದಿಗಳನ್ನು ತೊಡಗಿಸಲಾಯಿತು. ಅನಕ್ಷರಸ್ಥರಿಗೆ ಕಡ್ಡಾಯ ಅಕ್ಷರ ಕಲಿಕೆ ಆರಂಭವಾಯಿತು. ಎಲ್ಲ ಬಂದಿಖಾನೆಗಳಲ್ಲಿ ಪ್ರಾಥಮಿಕ ಶಿಕ್ಷಣದ ಸೌಲಭ್ಯಗಳೂ ಆರಂಭಗೊಂಡವು. ಶಿಕ್ಷಕರೂ ನೇಮಕಗೊಂಡರು. ಬಂದಿಖಾನೆಯೊಳಗಿದ್ದೇ ಉನ್ನತ ಶಿಕ್ಷಣದ ಅವಕಾಶಗಳನ್ನೂ ಕಲ್ಪಿಸಲಾಯಿತು. ಬಂದಿಖಾನೆ ಆಡಳಿತದ ಸುಧಾರಣೆ - ಆಧುನೀಕರಣಕ್ಕಾಗಿ ಕೇಂದ್ರ ಸರಕಾರವೂ ಆರ್ಥಿಕ ಸಹಾಯ ಆರಂಭಿಸಿತು. ಇತ್ತೀಚಿನ ವರ್ಷಗಳಲ್ಲಿ ಪ್ರಗತಿಪರ ಸಂಘ-ಸಂಸ್ಥೆಗಳು, ಸರ್ಕಾರೇತರ ಸಂಸ್ಥೆಗಳು (N.G.O) ಬಂದಿಖಾನೆ ಆಡಳಿತದ ಜತೆ ಕೈಜೋಡಿಸಿ ಕೈದಿಗಳನ್ನು ಸುಧಾರಿಸುವ ಹಲವು ಯೋಜನೆಗಳ ಮೂಲಕ ಬಂದಿಖಾನೆ ಆಡಳಿತವನ್ನು ಸುಧಾರಿಸಲು ಮುಂದಾಗಿವೆ. ಬಂದಿಖಾನೆಗಳ ಆಡಳಿತದಲ್ಲಿ ಸುಧಾರಣೆಯ ಬೆಳಕು ಹರಡಿರುವುದು ಕೈದಿಗಳ ಪರಿವರ್ತನೆಗೂ ದಾರಿದೀಪವಾಗಿದೆ.

## ೩. ಕರ್ನಾಟಕದ ಬಂದಿಖಾನೆಗಳ ವರ್ತಮಾನ

ವರ್ತಮಾನದಲ್ಲಿ ಪಡೆದ ಮಾಹಿತಿಯಂತೆ ಕರ್ನಾಟಕ ರಾಜ್ಯದಲ್ಲಿ ಒಟ್ಟು ೯೬ ಬಂದಿಖಾನೆಗಳಿದ್ದು ಅವುಗಳಲ್ಲಿ ೬ ಕೇಂದ್ರ ಬಂದಿಖಾನೆಗಳು, ೬ ಜಿಲ್ಲಾ ಬಂದಿಖಾನೆಗಳು, ೭ ಜಿಲ್ಲಾ ಕೇಂದ್ರ ಉಪಬಂದಿಖಾನೆಗಳು, ೨ ವಿಶೇಷ ಉಪಬಂದಿಖಾನೆಗಳು, ೨೯ ಬಂದಿಖಾನೆ ಇಲಾಖಾ ಸಿಬ್ಬಂದಿಗಳ ನೇರ ಆಡಳಿತದಲ್ಲಿರುವ ತಾಲೂಕು ಉಪ ಬಂದಿಖಾನೆಗಳು, ೪೩ ಪೊಲೀಸ್ ಸಿಬ್ಬಂದಿ ಮತ್ತು ಕಂದಾಯ ಇಲಾಖೆಯ ಪದನಿಮಿತ್ತ ಅಧೀಕ್ಷಕರ ಆಡಳಿತದಲ್ಲಿರುವ ತಾಲೂಕು ಉಪ ಬಂದಿಖಾನೆಗಳು, ೧ ಬಯಲು ಬಂದಿಖಾನೆ, ೧ ತರುಣ ಬಂದಿಖಾನೆ, ೧ ಬಾಲಾಪರಾಧಿ ಶಾಲೆ. ಕೋಷ್ಟಕ ೧ ರಲ್ಲಿ ಗಮನಿಸಬಹುದು.

## ಕೋಷ್ಟಕ ೧

## ಕರ್ನಾಟಕ ರಾಜ್ಯದಲ್ಲಿ ಕೆಲಸ ನಿರ್ವಹಿಸುತ್ತಿರುವ ವಿವಿಧ ಬಂದಿಖಾನೆಗಳ ವಿವರಗಳು

| ಕ್ರ.ಸಂ. | ವಿವರ | ಸಂಖ್ಯೆ |
|---|---|---|
| ೧. | **ಕೇಂದ್ರ ಬಂದಿಖಾನೆಗಳು**<br>ಬೆಂಗಳೂರು, ಬೆಳಗಾವಿ, ಬಳ್ಳಾರಿ, ಕಲಬುರ್ಗಿ, ಮೈಸೂರು ಹಾಗೂ ಬಿಜಾಪುರ | ೬ |
| ೨. | **ಜಿಲ್ಲಾ ಬಂದಿಖಾನೆಗಳು**<br>ಮಂಗಳೂರು ಮಡಿಕೇರಿ, ರಾಯಚೂರು, ಬೀದರ್, ಶಿವಮೊಗ್ಗ ಮತ್ತು ಕಾರವಾರ | ೬ |
| ೩. | **ಜಿಲ್ಲಾ ಕೇಂದ್ರ ಉಪ ಬಂದಿಖಾನೆಗಳು**<br>ಮಂಡ್ಯ, ಚಿತ್ರದುರ್ಗ, ಕೋಲಾರ, ಹಾಸನ, ಚಿಕ್ಕಮಗಳೂರು, ತುಮಕೂರು ಮತ್ತು ಧಾರವಾಡ | ೭ |
| ೪. | **ವಿಶೇಷ ಉಪ ಬಂದಿಖಾನೆಗಳು**<br>ದಾವಣಗೆರೆ ಹಾಗೂ ಕೆ.ಜಿ.ಎಫ್. | ೨ |
| ೫. | **ಇಲಾಖಾ ಸಿಬ್ಬಂದಿಯ ನೇರ ಆಡಳಿತದಲ್ಲಿರುವ ತಾಲ್ಲೂಕು ಉಪ ಬಂದಿಖಾನೆಗಳು** | ೨೮ |
| ೬. | **ಪೊಲೀಸ್ ಸಿಬ್ಬಂದಿ ಮತ್ತು ಕಂದಾಯ ಇಲಾಖೆಯ<br>ಪದನಿಮಿತ್ತ ಅಧೀಕ್ಷಕರ ಆಡಳಿತದಲ್ಲಿರುವ ತಾಲ್ಲೂಕು ಉಪಬಂದಿಖಾನೆಗಳು** | ೪೪ |
| ೭. | **ಬಯಲು ಬಂದಿಖಾನೆ, ಕೋರಮಂಗಲ** | ೧ |
| ೮. | **ತರುಣ ಬಂದಿಖಾನೆ, ಧಾರವಾಡ** | ೧ |
| ೯. | **ಬಾಲಾಪರಾಧಿ ಶಾಲೆ, ಧಾರವಾಡ** | ೧ |
| | **ಒಟ್ಟು** | ೯೬ |

ಕರ್ನಾಟಕದ ಕೇಂದ್ರ ಬಂದಿಖಾನೆಗಳು ಇತ್ತೀಚೆಗೆ ಸುಧಾರಣಾ ಗೃಹಗಳಾಗಿ ನಿಧಾನಕ್ಕೆ ಪರಿವರ್ತನೆಗೊಳ್ಳುತ್ತಿವೆ. ಬಂದಿಖಾನೆಗಳ ಅಸ್ತಿತ್ವದ ಉದ್ದೇಶವೇ ಕೈದಿಗಳನ್ನು ಸುಧಾರಣೆಗೊಳಿಸಿ ಯೋಗ್ಯ ವ್ಯಕ್ತಿಯನ್ನಾಗಿ ಸಮಾಜಕ್ಕೆ ಮರಳಿಸುವುದು ಎಂಬುದನ್ನು ಸರಕಾರದಿಂದ ನೇಮಕಗೊಂಡ ಎಲ್ಲ ಬಂದಿಖಾನೆ ಸುದಾರಣಾ ಸಮಿತಿಗಳು ಸ್ಪಷ್ಟಗೊಳಿಸಿದೆಯಲ್ಲದೆ, ಪ್ರಗತಿಪರ ಚಿಂತಕರ ಒತ್ತಾಯವೂ ಅದೇ ಅಗಿದೆ. ಕೈದಿಗಳ ಪರಿವರ್ತನೆಯನ್ನು ಗಮನದಲ್ಲಿಟ್ಟುಕೊಂಡು ಬಂದಿಖಾನೆಯೊಳಗೆ ವಿವಿದ ಜ್ಞಾನಸಂವಹನಾ ಮಾಧ್ಯಮಗಳು ಪ್ರವೇಶ ಪಡೆಯುತ್ತಿವೆ.



ಅಖಿಲ ಭಾರತ ಬಂದಿಖಾನೆ ಸುದಾರಣಾ ಸಮಿತಿಯ ಶಿಫಾರಸ್ಸನ್ನು ಅನುಷ್ಠಾನಗೊಳಿಸುವ ನಿಟ್ಟಿನಲ್ಲಿ ಬಂದಿಖಾನೆ ಆಡಳಿತವನ್ನು ಆಧುನೀಕರಣಗೊಳಿಸಲು ಕೇಂದ್ರ ಸರಕಾರವು ಹಲವಾರು ಯೋಜನೆಗಳನ್ನು ಹಮ್ಮಿಕೊಂಡಿದ್ದು, ರಾಜ್ಯ ಸರಕಾರದ ಹೊಂದಾಣಿಕೆ ಅನುದಾನದೊಂದಿಗೆ ಅವುಗಳನ್ನು ಕೈಗೊಳ್ಳಲು ೧೯೮೮ ರಿಂದ ೨೦೦೨ ರವರೆಗೆ ಒಟ್ಟು ೬೬೭.೩೫ ಲಕ್ಷ ರೂ.ಗಳನ್ನು ವ್ಯಯಿಸಿದೆ. ಕೈದಿಗಳತ್ತ ಜ್ಞಾನದ ಸೆಲೆಯನ್ನು ಹರಿಸಲು ಹಲವಾರು ಹೊಸ ಜ್ಞಾನಸಂವಹನಾ ಮಾಧ್ಯಮಗಳನ್ನು ಕೈದಿಗಳಿಗೆ ಒದಗಿಸಲಾಗಿದೆ.

ಕೈದಿಗಳಿಗೆ ಬಿಡುಗಡೆಯ ನಂತರದಲ್ಲಿ ಅವರ ಮರುನೆಲೆಗೆ ಅನುಕೂಲವಾಗಲೆಂದು ಎಲ್ಲ ಬಂದಿಖಾನೆಗಳಲ್ಲಿ ಆಧುನಿಕ ಕೃಷಿ ಹಾಗೂ ತೋಟಗಾರಿಕೆಯ ತರಬೇತಿಗಾಗಿ ಹೊಸ ತಂತ್ರಜ್ಞಾನವುಳ್ಳ ಕೃಷಿ ಸಾಧನಗಳನ್ನು

ಪರಿಚಯಿಸಲಾಗಿದೆ. ಬಂದಿಖಾನೆಗಳ ಒಳಗಿರುವ ಉದ್ಯಮಗಳಲ್ಲಿ ವೃತ್ತಿ ತರಬೇತಿ ಹಾಗೂ ದುಡಿಮೆ ನೀಡಿರುವುದಲ್ಲದೆ ಕಡಿಮೆ ಆರ್ಥಿಕ ಬಂಡವಾಳವನ್ನು ಬೇಡುವ ಅನೇಕ ಕಿರು ಉದ್ಯಮಗಳಲ್ಲಿ ಹಾಗೂ ಅನೇಕ ಉತ್ಪಾದನಾ ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ಕೈದಿಗಳನ್ನು ತರಬೇತುಗೊಳಿಸಲಾಗುತ್ತಿದೆ.

ಎಲ್ಲಾ ಕೈದಿಗಳಿಗೂ ದೂರಶಿಕ್ಷಣ - ಅಂಚೆಶಿಕ್ಷಣ ಮುಂದುವರಿಸುವ ಸೌಲಭ್ಯವಿದ್ದು, ಆಸಕ್ತ ಕೈದಿಗಳು ಶಿಕ್ಷಣ ಮುಂದುವರಿಸತೊಡಗಿದ್ದಾರೆ. ಈಗ ಕಂಪ್ಯೂಟರ್ ಶಿಕ್ಷಣವೂ ಬಂದಿಖಾನೆಯೊಳಗೆ ಅವರಿಗೆ ಲಭ್ಯವಾಗಿದೆ. ಕೈದಿಗಳ ಮನಪರಿವರ್ತನೆಗೆ ಒತ್ತುಕೊಟ್ಟು ಕೈದಿಗಳನ್ನು ನಾಟಕಗಳಲ್ಲಿ ತೊಡಗಿಸುವ ಪ್ರಯತ್ನ ಸಫಲವಾಗಿದೆ. ಬಂದಿಖಾನೆಗಳನ್ನೇ ತಾತ್ಕಾಲಿಕವಾಗಿ ನಾಟಕ ಶಾಲೆಗಳಂತೆ ಪರಿವರ್ತಿಸಿ, ಅಲ್ಲಿ ಕಲಾ ಕಮ್ಮಟಗಳನ್ನು ಆಯೋಜಿಸಿ ಕೈದಿಗಳಿಂದಲೇ ರಂಗಪರಿಕರಗಳನ್ನು ತಯಾರು ಮಾಡಿಸಿ ನಾಟಕಗಳನ್ನು ಆಡಿಸಲಾಗಿದೆ. ಇದೀಗ ಪುರುಷ ಕೈದಿಗಳಂತೆ, ಮಹಿಳಾ ಕೈದಿಗಳೂ ನಾಟಕಗಳಲ್ಲಿ ಪಾತ್ರವಹಿಸಿ, ತಮ್ಮ ರಂಗ ಪರಿಕರಗಳನ್ನು ತಾವೇ ಸಿದ್ಧಪಡಿಸಿಕೊಳ್ಳುವಷ್ಟರ ಮಟ್ಟಿಗೆ ವರ್ತಮಾನದಲ್ಲಿ ಬಂದಿಖಾನೆಗಳು ಸುಧಾರಣೆಯತ್ತ ವಾಲುತ್ತಿವೆ. ಬಂದಿಖಾನೆಗಳಲ್ಲಿನ ಈ ಸುಧಾರಣೆಗಳು ಕೈದಿಗಳ ಮನಪರಿವರ್ತನಾ ಪ್ರಕ್ರಿಯೆಯಲ್ಲಿ ಮಹತ್ತರವಾದ ಪ್ರಭಾವ ಬೀರುತ್ತಿವೆ. ಅದು ವರ್ತಮಾನ ಕಾಲದ ಬಂದಿಖಾನೆಗಳ ಪ್ರಮುಖ ಆಶಯವೂ ಹೌದು.

❑ ❑

## ಅಡಿಟಿಪ್ಪಣಿ

೧. Krishna, M.H., 1985. A Guide to Srirangapatna. Mysore, Directorate of Archaelogy and Museums. Pp. 16.

೨. Ibid., Pp. 17.

೩. ಮಠದ, ಸಿ.ವಿ, ೧೯೭೭. ಕಿತ್ತೂರ ನಾಡಿನ ಇತಿಹಾಸ ಮತ್ತು ಸಂಸ್ಕೃತಿ : ಕಿತ್ತೂರ ನಾಡಿನ ವೀರರು. ಧಾರವಾಡ, ಕರ್ನಾಟಕ ವಿಶ್ವವಿದ್ಯಾಲಯ. ಪುಟ ೯೦.

೪. ಕಾಮತ್, ಸೂರ್ಯನಾಥ, ೧೯೭೭. ದಕ್ಷಿಣ ಕನ್ನಡದಲ್ಲಿ ಸ್ವಾತಂತ್ರ್ಯ ಹೋರಾಟ, ಪುಟ ೧೩೦-೧೩೪. ಸುದರ್ಶನ : ಡಾ. ತೋನ್ಸೆ ಮಾಧವ ಪೈ ಅಭಿನಂದನಾ ಗ್ರಂಥ, ಅಡ್ಯನಡ್ಕ ಕೃಷ್ಣಭಟ್ ಸಂ., ಮುಲ್ಕಿ, ವಿಜಯಾ ಕಾಲೇಜು ಟ್ರಸ್ಟ್.

೫. ಕರ್ನಾಟಕ ಸರಕಾರ, ೧೯೮೫. ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಭಾಗ ೨. ಪುಟ ೫೨೯.

೬. Government of Karnataka, 1988. Karnataka State Gazetter : Mysore District. Pp. 539-547.

೭. ಕರ್ನಾಟಕ ಸರಕಾರ, ೧೯೮೫. ಕರ್ನಾಟಕ ರಾಜ್ಯ ಗ್ಯಾಸೆಟಿಯರ್ : ಬಳ್ಳಾರಿ ಜಿಲ್ಲೆ. ಪುಟ ೫೨೦.

೮. ಕರ್ನಾಟಕ ಸರಕಾರ, ೧೯೮೫. ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಭಾಗ ೨. ಪುಟ ೫೩೦.

೯. ಕರ್ನಾಟಕ ಸರಕಾರ, ೧೯೮೫. ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಭಾಗ ೨. ಪುಟ ೫೩೧.

೧೦. ಕರ್ನಾಟಕ ಸರಕಾರ, ೧೯೭೭. ಕರ್ನಾಟಕ ರಾಜ್ಯ ಗ್ಯಾಸೆಟಿಯರ್ : ಗುಲಬರ್ಗಾ ಜಿಲ್ಲೆ (ಪರಿಷ್ಕೃತ ಆವೃತ್ತಿ). ಪುಟ ೪೪೮-೪೫೧.

೧೧. Mulla, A.N., Chairman, 1983. Report of All India Committee on Jail Reforms. 1980-83, Vol. 1. New Delhi, Ministry of Home Affairs. Pp. 1.

೧೨. Ibid., Pp. 2.

೧೩. ನಗರಿಬಾಬಯ್ಯ, ೧೯೮೭. ಕಗ್ಗತ್ತಲ ಜಗತ್ತಲ್ಲಿ ೯೦ ದಿನ. ಬೆಂಗಳೂರು, ಪ್ರಿಯದರ್ಶಿನಿ ಪ್ರಕಾಶನ. ಪುಟ ೪೧.

೧೪. Government of Karnatka, 1988. Karnataka State Gazetter : Mysore District. Pp. 539-547.

೧೫. Mulla, A.N., 1983. Report of All India Committee on Jail Reforms 1980-83, Vol. 1. New Delhi, Ministry of Home Affairs. Pp. 4.

೧೬. ಕಾಮತ್, ಸೂರ್ಯನಾಥ, ೧೯೮೮. ಸ್ವಾತಂತ್ರ್ಯ ಹೋರಾಟದ ಹಲವು ಮುಖಗಳು. ಹುಬ್ಬಳ್ಳಿ ಬಿಂದು ಮಾಧವ ಸ್ಮಾರಕ ಪ್ರತಿಷ್ಠಾನ. ಪುಟ ೩೦.

೧೭. ಪಾಟೀಲ, ಜಿ.ಸಿ., ಮತ್ತು ಕುಂಚೂರು, ಬಸವರಾಜ, ೧೯೮೧. ಕಿಡಿಕಾರಿದ ಮೊರಬ. ಮೊರಬ, ಜ್ಞಾನೋದಯ ವಾಚನಾಲಯ. ಪುಟ ೭೫-೭೯.

೧೮. ಲಿಂಗಪ್ಪ, ಸಿ., ೨೦೦೦. ಸ್ವಾತಂತ್ರ್ಯ ಸಂಗ್ರಾಮದಲ್ಲಿ ಈಸೂರು. ಬೆಂಗಳೂರು, ನಾಮದೇವ ಪ್ರಕಾಶನ. ಪುಟ ೫೮-೫೯.

೧೯. ಚಂದ್ರಶೇಖರ್, ಸಿ.ಬಿ., ೨೦೦೧. ಅವಲೋಕನ : ಕಾಗೋಡು ಒಂದು ನೆನಪು. ಸುಧಾ (ಜೂನ್ ೨೧).

೨೦. ಕರ್ನಾಟಕ ಸರಕಾರ, ರಾಜ್ಯ ಬಂದಿಖಾನೆ ಇಲಾಖೆ, ೨೦೦೦. ವಾರ್ಷಿಕ ವರದಿ ೧೯೯೯-೨೦೦೦. ಪುಟ ೧೨.

೧೬. ಕಾಮತ್, ಸೂರ್ಯನಾಥ, ೧೯೮೮. ಸ್ವಾತಂತ್ರ್ಯ ಹೋರಾಟದ ಹಲವು ಮುಖಗಳು. ಹುಬ್ಬಳ್ಳಿ ಬಿಂದು ಮಾಧವ ಸ್ಮಾರಕ ಪ್ರತಿಷ್ಠಾನ. ಪುಟ ೩೦.

೧೭. ಪಾಟೀಲ, ಜಿ.ಸಿ., ಮತ್ತು ಕುಂಚೂರು, ಬಸವರಾಜ, ೧೯೮೧. ಕಿಡಿಕಾರಿದ ಮೊರಬ. ಮೊರಬ, ಜ್ಞಾನೋದಯ ವಾಚನಾಲಯ. ಪುಟ ೭೫-೭೯.

೧೮. ಲಿಂಗಪ್ಪ, ಸಿ., ೨೦೦೦. ಸ್ವಾತಂತ್ರ್ಯ ಸಂಗ್ರಾಮದಲ್ಲಿ ಈಸೂರು. ಬೆಂಗಳೂರು, ನಾಮದೇಪ ಪ್ರಕಾಶನ. ಪುಟ ೫೮-೫೯.

೧೯. ಚಂದ್ರಶೇಖರ್, ಸಿ.ಬಿ., ೨೦೦೧. ಅವಲೋಕನ : ಕಾಗೋಡು ಒಂದು ನೆನಪು. ಸುಧಾ (ಜೂನ್ ೨೧).

೨೦. ಕರ್ನಾಟಕ ಸರಕಾರ, ರಾಜ್ಯ ಬಂದಿಖಾನೆ ಇಲಾಖೆ, ೨೦೦೦. ವಾರ್ಷಿಕ ವರದಿ ೧೯೯೯-೨೦೦೦. ಪುಟ ೧೨.

ಅಧ್ಯಾಯ ೪

# ಕೈದಿಗಳ ಮನಪರಿವರ್ತನೆಯ ಪರಿಕಲ್ಪನೆ ಮತ್ತು ವಾಸ್ತವ

೪

# ಕೈದಿಗಳ ಮನಪರಿವರ್ತನೆಯ ಪರಿಕಲ್ಪನೆ ಮತ್ತು ವಾಸ್ತವ

## ೧. ಪರಿಕಲ್ಪನೆ

ಕೈದಿಗಳ ಮನಪರಿವರ್ತನೆ - ಇದು ಸಮಾಜವಾದದ ಪರಿಕಲ್ಪನೆ. ಸಾಮಾಜಿಕ ನೀತಿ ನಿಯಮಗಳನ್ನು, ಆದರ್ಶ ಮೌಲ್ಯಗಳನ್ನು ರೂಪಿಸುವ ಮಹತ್ತರ ಉದ್ದೇಶವುಳ್ಳ ಸಮಾಜವಾದ, ಸಮಾಜದ ಮೂಲ ಅಣುವಾದ ವ್ಯಕ್ತಿಯ ನಡವಳಿಕೆಯನ್ನು ತಿದ್ದುವ ಸುಧಾರಿಸುವ ನಿಯಂತ್ರಿಸುವ ಮತ್ತು ಮುನ್ನಡೆಸುವಂತಹ ಗುರುತರವಾದ ಜವಾಬ್ದಾರಿಯನ್ನು ಹೊತ್ತಿದೆ. ಮನುಷ್ಯನ ಪ್ರತಿಯೊಂದು ನಡವಳಿಕೆಯನ್ನು ಸಮಾಜವು ಹಾಕಿಕೊಟ್ಟ ಸಂವಿಧಾನದ ಚೌಕಟ್ಟಿನಲ್ಲೇ ನೋಡಬೇಕಾದುದರಿಂದ ಈ ಸಾಮಾಜಿಕ ಸಂವಿಧಾನದ ಚೌಕಟ್ಟನ್ನು ಮೀರುವ ಯಾವುದೇ ವ್ಯಕ್ತಿಯನ್ನು ಸಮಾಜವು 'ಸಮಾಜ ವಿರೋಧಿ' ಎಂದು ಗುರುತಿಸಬೇಕಾಗುತ್ತದೆ. ಸಮಾಜವಿರೋಧಿಯೇ ಕಾನೂನಿನಡಿ 'ಅಪರಾಧಿ' ಎಂದು ಕರೆಯಲ್ಪಡುತ್ತಾನೆ. ಅಪರಾಧಿ ಅಥವ ಸಮಾಜವಿರೋಧಿ ಮತ್ತೆ ಸಮಾಜದ ಮುಖ್ಯವಾಹಿನಿಗೆ ಬಂದು ಸಮಾಜ ಕಟ್ಟಿದ ಸಂವಿಧಾನದ ಚೌಕಟ್ಟಿನೊಳಗಡೆ ಬದುಕಬೇಕಾದರೆ ಆತನ ವಿಕಾರಗೊಂಡ ಮನಸ್ಥಿತಿಯನ್ನು ತಿದ್ದಿ, ಮನಸ್ಸೊಳಗಿರುವ ಸಮಾಜ ವಿರೋಧಿ 'ಚಿಂತನೆ' ಗಳನ್ನೆಲ್ಲ ನಾಶಪಡಿಸಿ ಸದ್ವರ್ತನೆಯನ್ನು ಬೆಳೆಸಬೇಕಾಗುತ್ತದೆ.

ಆತನ ಅಪರಾಧಕ್ಕೆ ಕಾನೂನು ಪರಿಪಾಲಕರು ವಿಧಿಸುವ ಶಿಕ್ಷೆಯನ್ನು ಆತ ಅನುಭವಿಸುತ್ತಿರುವಾಗ, ಸಮಾಜವಾದದ ಪ್ರಮುಖ ಹರಿಕಾರ ಆಗಸ್ಟ್ ಕಾಂಟ್‌ನಂದ 'ಮನುಷ್ಯ ತಾನು ನೋವನ್ನು ಸಹಿಸಿಕೊಳ್ಳುತ್ತಿಲ್ಲವಾದ್ದರಿಂದ ಇತರರಿಗೂ ನೋವನ್ನುಂಟು ಮಾಡಬಾರದು' ಎಂಬ ಮಾತಿನಲ್ಲಿನ ಸತ್ಯದ ಮನವರಿಕೆ ಅಥವ ಅನುಭವವು ಆತನಿಗಾಗಬೇಕು. ಆ ಮೂಲಕವೇ ಶಿಕ್ಷೆಯ ಪ್ರಮುಖ ಉದ್ದೇಶ ಹಾಗೂ ಸಿದ್ಧಾಂತಗಳಲ್ಲಿ ಒಂದಾದ ಪಶ್ಚಾತ್ತಾಪ ಸಿದ್ಧಾಂತ (Theory of Expiation) ದಂತೆ ತನ್ನ ಸಮಾಜ ವಿರೋಧಿ ಅಪಕೃತ್ಯಕ್ಕೆ ಆತ ಪಶ್ಚಾತ್ತಾಪ ಪಡುವಂತಾಗಬೇಕು ಅಥವ ಕೈದಿಯಾಗಿರುವಷ್ಟು ಕಾಲ ಆತನಿಗೆ ಪಶ್ಚಾತ್ತಾಪ ಪಡುವ ಅವಕಾಶ

ನೀಡಿ, ತನ್ನನ್ನು ತಾನೇ ಪರಿವರ್ತಿಸಿಕೊಳ್ಳಲು ಅವಕಾಶ ನೀಡಬೇಕು. ಇದರ ಜತೆಗೇ ಶಿಕ್ಷೆಯ ಇನ್ನೊಂದು ಉದ್ದೇಶ ಅಥವ ಸಿದ್ಧಾಂತವಾದ ಸುಧಾರಣಾ ಸಿದ್ಧಾಂತದ (Theory of reformation) ಮೂಲಕ ಆ ಅಪರಾಧಿಯನ್ನು ಶೈಕ್ಷಣಿಕ ಹಾಗೂ ನೈತಿಕ ಮೌಲ್ಯವುಳ್ಳ ಆರೋಗ್ಯಕರ ವಾತಾವರಣದಲ್ಲಿಟ್ಟು ಆತನನ್ನು ಜ್ಞಾನಮುಖಿಯನ್ನಾಗಿರಿಸಿ, ಆತ ಕ್ರಮಿಸಿ ಬಂದ ಅಡ್ಡದಾರಿಯನ್ನು ಆತನಿಂದಲೇ ಕಂಡುಕೊಳ್ಳುವಂತೆ ಮಾಡಿ ಆತನನ್ನು ಸಮಾಜದ ಉಪಯುಕ್ತ ಬುದ್ಧಿವಂತ ಸತ್ಪ್ರಜೆಯನ್ನಾಗಿ ಮಾಡಿ ಸಮಾಜದಮುಖ್ಯವಾಹಿನಿಗೆ ಕಳುಹಿಸುವುದು ಕೈದಿಯ ಮನಪರಿವರ್ತನೆಯ ಪರಿಕಲ್ಪನೆ.

## ೨. ವಾಸ್ತವ

ಭಾರತೀಯ ದಂಡ ಸಂಹಿತೆಯಡಿ ಅಪರಾಧಿ ಎಂದು ಸಾಬೀತಾದೊಡನೆ ದಂಡ ಪ್ರಕ್ರಿಯಾ ಸಂಹಿತೆಯಡಿ ಸೆರೆವಾಸದ ದಂಡನೆ ಜಾರಿಯಾದ ಕ್ಷಣದಿಂದಲೇ ಅಪರಾಧಿಯ (ಕೈದಿಯ) ಮನಪರಿವರ್ತನಾ ಪ್ರಕ್ರಿಯೆ ತಾತ್ತ್ವಿಕವಾಗಿ ಆರಂಭಗೊಳ್ಳುತ್ತದೆ.

ಸಮಾಜಘಾತುಕ ಶಕ್ತಿಯಿಂದ ಸಮಾಜಕ್ಕೆ ಅಥವ ಸಮುದಾಯಕ್ಕೆ ರಕ್ಷಣೆಕೊಡುವ ಕಾರಣದಿಂದ ಆತನನ್ನು ಸಮಾಜದಿಂದ ಬೇರ್ಪಡಿಸಿ ಸೆರೆಯಲ್ಲಿಡುವುದು ಶಿಕ್ಷೆಗೆ ಒಂದು ಕಾರಣವಾದರೆ, ಸೆರೆವಾಸದ ಅವಧಿಯಲ್ಲಿ ಪಶ್ಚಾತ್ತಾಪ ರೂಪದಲ್ಲಿ ತಕ್ಕ ಪ್ರಾಯಶ್ಚಿತ್ತವನ್ನು ಅನುಭವಿಸುವಂತೆ ಮಾಡಿ, ಆತನ ಮನಸ್ಸು - ಚಿಂತನೆಯನ್ನು ಸುಧಾರಿಸುವುದೇ ಶಿಕ್ಷೆಯ ಮತ್ತೊಂದು ಮಹತ್ತರ ಉದ್ದೇಶ. ದಂಡನೆಯೊಂದಿಗೆ ಪ್ರಾಯಶ್ಚಿತ್ತವನ್ನೂ ಸೇರಿಸಿರುವುದು ಯುಕ್ತವೋ - ಅಯುಕ್ತವೋ - ಆದರೆ ಪಶ್ಚಾತ್ತಾಪರೂಪದಲ್ಲಿ ಪ್ರಾಯಶ್ಚಿತ್ತ ಅನುಭವಿಸುವುದು ಅಪರಾಧಿಯ ಮನಪರಿವರ್ತನಾರೂಪವಾದ ಸುಧಾರಣಾ ಕ್ರಮವನ್ನು ಸೂಚಿಸುವುದೆಂದು ಮಾತ್ರ ಹೇಳಬಹುದು. ಅಪರಾಧಿಗೆ ಆತನ ನೈತಿಕ ಹೊಣೆಯನ್ನು, ಸಾಮಾಜಿಕ ಪ್ರಜ್ಞೆಯನ್ನು ಜ್ಞಾಪಿಸುವುದೇ ಪ್ರಾಯಶ್ಚಿತ್ತದ ಮುಖ್ಯ ಉದ್ದೇಶವಾಗಿತ್ತೆಂದು ಅನೇಕ ವಿಮರ್ಶಕರು ಅಭಿಪ್ರಾಯ ಪಟ್ಟಿದ್ದಾರೆ.[೧]

ಅಪರಾಧಿ ಬಂದಿಖಾನೆಯ ಹೆಬ್ಬಾಗಿಲನ್ನು ದಾಟಿದ ತಕ್ಷಣ ತನ್ನ ಸ್ವಾತಂತ್ರ್ಯವನ್ನು ಕಳೆದುಕೊಂಡು ಮನಪರಿವರ್ತನೆಯ ಮನೆಯನ್ನು ಕಡ್ಡಾಯವಾಗಿ ಹೊಗಬೇಕಾಗುತ್ತದೆ. ಕೈದಿಯ ಪೂರ್ವಾಶ್ರಮದ ವಿವರ, ಅಪರಾಧ ಮತ್ತು ಶಿಕ್ಷೆಯ ವೃತ್ತಾಂತವುಳ್ಳ ಚರಿತ್ರೆ ಚೀಟಿ (History ticket) ಯೊಂದನ್ನು ಆತನಿಗೆ ಮೀಸಲಿಟ್ಟೊಡನೆ ಆತನ ಶೈಕ್ಷಣಿಕ ಅರ್ಹತೆ, ಔದ್ಯೋಗಿಕ ಹಿನ್ನಲೆ, ಅಪರಾಧದ ಹಾಗೂ ಕೌಟುಂಬಿಕ ಹಿನ್ನಲೆಯ ಜತೆ ದೇಹಸಾಮರ್ಥ್ಯ, ಬೌದ್ಧಿಕ ಚತುರತೆಯನ್ನೆಲ್ಲ ಅಧ್ಯಯನ ಮಾಡಿದ ಬಂದಿಖಾನೆಯ ಅಧಿಕಾರಿಗಳು ಆತನಿಗೆ ಅರ್ಹವಾದ ವೃತ್ತಿ ಶಿಕ್ಷಣ - ತರಬೇತಿ ಅಥವ ದುಡಿಮೆಯಲ್ಲಿ ಆತನನ್ನು ತೊಡಗಿಸುತ್ತಾರೆ. ವಂಚನೆ, ದಮನ, ಹಿಂಸೆಗಳನ್ನೊಳಗೊಂಡ ಯಾವುದೇ ಬಗೆಯ ಕೆಲಸಗಳನ್ನು ಕೈದಿಗಳಿಂದ ಮಾಡಿಸಬಾರದು ಹಾಗೂ ಕೈದಿಗಳ ದುಡಿಮೆ ಅರ್ಥಹೀನ, ಅತಿಶ್ರಮದ ಚಟುವಟಿಕೆ ಆಗಿರದೆ ರಚನಾತ್ಮಕವಾಗಿದ್ದು, ಸಮಾಜದ ಆರ್ಥಿಕಾಭಿವೃದ್ಧಿ ಹಾಗೂ ಅಪರಾಧಿಗಳ ಜೀವನಾಂಶ ಮತ್ತು ಬದುಕಿಗೆ ಮಾರ್ಗವಾಗುವಂತಿರಬೇಕು - ಎಂಬ ಸ್ಪಷ್ಟ ನಿಯಮ ರಾಜ್ಯ ಬಂದಿಖಾನೆಗಳ ಕೈಪಿಡಿ ಹಾಗೂ ಅಧಿನಿಯಮದಲ್ಲಿರುವುದರಿಂದ, ಬಂದಿಖಾನೆ ಆಡಳಿತವು ಕೈದಿಗಳಿಗೆ ಪ್ರತಿಫಲದಾಯಕ

(Remunerative work) ವಾಗುವ ಕೆಲಸಗಳಲ್ಲೇ ಅವರನ್ನು ತೊಡಗಿಸುವ ಮೂಲಕ ಮನಪರಿವರ್ತನೆಯ ಕೈಕಂರ್ಯವನ್ನು ಆರಂಭಿಸುತ್ತದೆ. ಆರು ತಿಂಗಳ ವೃತ್ತಿಶಿಕ್ಷಣ ತರಬೇತಿಯ ನಂತರ ಅದೇ ವೃತ್ತಿ ದುಡಿಮೆ (ಉದ್ಯಮದಲ್ಲಿ) ಯಲ್ಲಿ ಮುಂದುವರಿಯುವ ಕೈದಿ, ತಾನು ಮತ್ತೆ ಈ ಸಮಾಜದಲ್ಲಿ ಇದೇ ವೃತ್ತಿಯಿಂದಲೆ ಗೌರವದಿಂದ ಜೀವಿಸಬಲ್ಲೆ, ಇದು ನ್ಯಾಯವಾದ ಮಾರ್ಗದ ದುಡಿಮೆ ಎಂಬ ಭಾವನೆ ಮೂಡಿಸುವಷ್ಟರ ಮಟ್ಟಿಗೆ ಬಂದಿಖಾನೆಯಲ್ಲಿ ಅವರನ್ನು ದುಡಿಸಿಕೊಳ್ಳಲಾಗುತ್ತದೆ.

ಈ ದುಡಿಮೆಯು ಹೊಂದಿರುವ ಉದ್ದೇಶ ಒಂದಲ್ಲ, ಎರಡಲ್ಲ - ಹಲವು.

೧. ದುಡಿಸುವ ಮೂಲಕ ಅಪರಾಧಿಗೆ ಶಿಸ್ತು ಕಲಿಸುವುದು, ಕೆಲಸದಲ್ಲೂ ಶಿಸ್ತು ಕಲಿಸುವುದು.

೨. ಕೆಲಸ ಅಥವ ದುಡಿಮೆಯ ಬಗ್ಗೆ ಗೌರವ, ಅದರ ಸಾಮಾಜಿಕ ಉದ್ದೇಶ ಹಾಗೂ ಪ್ರಯೋಜನದ ಅರಿವು ಮೂಡಿಸುವುದು.

೩. ಬುದ್ಧಿ ಕುಶಲತೆಯ, ದೈಹಿಕ ಕೆಲಸದ ಮೂಲಕ ಬುದ್ಧಿವಿಕಾಸ, ಮಾನಸಿಕ ಆರೋಗ್ಯ ವೃದ್ಧಿಯಾಗುವಂತೆ ಮಾಡುವುದು.

೪. ನಿರಂತರ ಕಠಿಣ ಕೆಲಸ ಮಾಡುವ ಸಾಮರ್ಥ್ಯವನ್ನು ಬೆಳೆಸುವುದು, ಕೆಲಸದಲ್ಲಿ ಕ್ರಮಬದ್ಧತೆ ಮತ್ತು ನಿಷ್ಕೃಷ್ಟತೆಯನ್ನು ಸಾಧಿಸುವುದು.

೫. ಸಮೂಹ ಪ್ರಯತ್ನ, ಸೌಹಾರ್ದ ಮನೋವೃತ್ತಿ ಮತ್ತು ಸಹಕಾರ ಜೀವನ ಈ ಮನೋಭಾವವನ್ನು ಪೋಷಿಸಿಕೊಂಡು ಬರುವುದು.

೬. ಕೈದಿಗಳನ್ನು ಅರ್ಥಪೂರ್ಣ ಮತ್ತು ಉತ್ಪಾದನಾ ಕಾರ್ಯಗಳಲ್ಲಿ ತೊಡಗಿಸುವ ಮೂಲಕ ಆತನಲ್ಲಿ ಬೇರು ಬಿಟ್ಟಿರುವ ಸೋಮಾರಿತನವನ್ನು ನಿವಾರಿಸುವುದು.

೭. ಕೈದಿಗಳಲ್ಲಿ ಆತ್ಮವಿಶ್ವಾಸ ಮತ್ತು ಸ್ವಾವಲಂಬನೆಯ ಮನೋಭಾವವನ್ನು ಜಾಗೃತಗೊಳಿಸಿ, ಬೆಳೆಸುವುದು.

೮. ಉತ್ತಮ ತರಬೇತಿ ಮತ್ತು ಆರ್ಥಿಕ ಭದ್ರತೆಯ ಭಾವನೆಯನ್ನು ಮೂಡಿಸಿ ಸಾಮಾಜಿಕ ಹೊಂದಾಣಿಕೆಗೆ ತಯಾರುಗೊಳಿಸುವುದು.[೨]

ರಾಜ್ಯದ ಬಂದಿಖಾನೆಗಳಲ್ಲಿರುವ ಉದ್ಯಮಗಳು, ಕೈದಿಗಳಿಗೆ ಉದ್ಯೋಗದ ಮೂಲಕ ಸ್ವಾವಲಂಬನೆಯ ಮನೋಭಾವ ಭರಿಸುವಲ್ಲಿ ಸಮರ್ಥವಾಗಿವೆ. ಕೈದಿಗಳ ಸದ್ವರ್ತನೆ, ಅಧಿಕ ಶ್ರಮ, ಉತ್ತಮ ಕೆಲಸಕ್ಕೆ ಪ್ರೋತ್ಸಾಹಕಾರಿಯಾಗಿ 'ಇಂತಿಷ್ಟು ದಿನಗಳ ಕೆಲಸಕ್ಕೆ, ಇಂತಿಷ್ಟು ದಿನ ಶಿಕ್ಷೆಯಲ್ಲಿ ಮಾಫಿ' ಎಂಬ ಮಾಫಿ ಪದ್ಧತಿ ಚಾಲ್ತಿಯಲ್ಲಿದೆ. ಈ ಪದ್ಧತಿಯಿಂದ ಕೈದಿಗಳ ನಡವಳಿಕೆ, ದುಡಿಮೆಯಲ್ಲಿನ ನಿಷ್ಠೆಯಲ್ಲಿ ಮಹತ್ತರ ಬದಲಾವಣೆಯುಂಟಾಗುತ್ತದೆ. ಈ ಮೂಲಕ ಕೈದಿ ಸ್ವತಾ ತನ್ನನ್ನು ತಿದ್ದಿಕೊಳ್ಳಲು ಯತ್ನಿಸುತ್ತಾನೆ. ಈ ನಿಟ್ಟಿನಲ್ಲೂ ಕರ್ನಾಟಕ ರಾಜ್ಯದ ಬಂದಿಖಾನೆ ಇಲಾಖೆ ಕೈದಿಗಳ ಮನಸ್ಸಿಗೆ ಸ್ಪಂದಿಸುವಂತಹ ನಿಯಮಗಳನ್ನು ತನ್ನ ಅಧಿನಿಯಮದಲ್ಲಿ ಅಳವಡಿಸಿಕೊಂಡಿದೆ.

ಸದ್ವರ್ತನೆಯುಳ್ಳ ಕೈದಿ, ತನ್ನ ಶ್ರೇಯಾಭಿವೃದ್ಧಿಗೆ ನಿಷ್ಠೆಯಿಂದ ದುಡಿಮೆಗೈಯ್ಯುತ್ತಿದ್ದರೆ, ಇಂತಿಷ್ಟು ವರ್ಷಗಳ ಶಿಕ್ಷೆ ಅನುಭವಿಸಿದ ನಂತರ ಆತನಿಗೆ ವಚನದತ್ತ ರಜೆ (ಪೆರೋಲ್ - Parole) ಮತ್ತು ತುರ್ತು ಬಿಡುಗಡೆ (ಫರ್ಲೋ - Furloe) ಯ ರಜಾ ಸೌಲಭ್ಯವನ್ನು ನೀಡಲಾಗುತ್ತದೆ. ಇದು ಕೈದಿಯ ಮನಪರಿವರ್ತನೆಗೆ ಅತ್ಯಂತ ಸಹಕಾರಿ ಎಂದು ನಂಬಲಾಗಿದೆ.

ವೃತ್ತಿಪರ ಶಿಕ್ಷಣ - ತರಬೇತಿ ಹಾಗೂ ತರಬೇತಿ ಪಡೆದ ಉದ್ಯಮದಲ್ಲಿ ದುಡಿಯುವುದರ ಜತೆಗೆ (ಕೃಷಿ ಕೆಲಸದಲ್ಲಿ ತೊಡಗುವ ಕೈದಿಗೂ) ಶೈಕ್ಷಣಿಕ ಕಾರ್ಯಕ್ರಮ ಕಡ್ಡಾಯವಾಗಿದೆ. ಶೈಕ್ಷಣಿಕ ಅರ್ಹತೆಗನುಗುಣವಾಗಿ ಸಾಂಪ್ರದಾಯಿಕ ಶಿಕ್ಷಣ ಪಡೆಯಬೇಕಾದುದು ಮನಪರಿವರ್ತನಾ ಕ್ರಿಯೆಗೇರುವ ಇನ್ನೊಂದು ಮೆಟ್ಟಿಲು. ಆದರೆ ವೃತ್ತಿ ಶಿಕ್ಷಣ, ವೃತ್ತಿತರಬೇತಿ ಜೀವಾವಧಿ ಕೈದಿಗೆ ಅತೀ ಕಡ್ಡಾಯವೆಂದು ಬಂದಿಖಾನೆ ನಿಯಮಾನುಸಾರ ಘೋಷಿಸಿದ ನಂತರ ಅನಕ್ಷರಸ್ಥ ಕೈದಿಗಳಿಗೆ ಮಾತ್ರವೇ ವಯಸ್ಕ ಶಿಕ್ಷಣವನ್ನು ಕಡ್ಡಾಯಗೊಳಿಸಲಾಗಿದ್ದು, ಪ್ರಾಥಮಿಕ ಶಿಕ್ಷಣ ಹಾಗೂ ಅದಕ್ಕಿಂತ ಮೇಲ್ಪಟ್ಟ ಮಟ್ಟದ ಶಿಕ್ಷಣ ಈಗ ತೀರಾ ಕಡ್ಡಾಯವಲ್ಲ. ಆದರೂ ಕೈದಿಗಳನ್ನು 'ಮುಂದೆ ಓದಿ' ಎಂದು ಪ್ರೋತ್ಸಾಹಿಸುವ ಮೂಲಕ ಅವರಿಗೆ ಶಿಕ್ಷಣ ಮುಂದುವರಿಸುವ ಆರೋಗ್ಯಕರ ಒತ್ತಡವನ್ನು ಹಾಕುತ್ತಿರುವುದು ಕೆಲವು ಬಂದಿಖಾನೆಗಳಲ್ಲಿ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಗಮನಿಸಲಾಯಿತು.

'ಓದಿ ಏನಾಗಬೇಕು' ಎಂದು ಉಡಾಫೆ ತೋರಿಸುವ ಕೈದಿಗಳಿಗೆ ಓದಿನ ಮಹತ್ವ, ಶಿಕ್ಷಣದ ಅಗತ್ಯವನ್ನು ಒತ್ತಿ ಹೇಳುವ ಬಂದಿಖಾನೆಗಳ ಕೆಲವು ಅಧಿಕಾರಿಗಳು ಹಲವು ಮಂದಿ ಕೈದಿಗಳಿಗೆ ಉನ್ನತ ಮಟ್ಟದ ಶಿಕ್ಷಣ ಪಡೆಯುವ ಅವಕಾಶ ಮತ್ತು ಮಾನಸಿಕ ಸ್ಥಿತಿಯನ್ನು ಕಲ್ಪಿಸಿಕೊಟ್ಟಿದ್ದಾರೆ. ೧೪೯ ಕೈದಿಗಳು ಇಂದಿರಾಗಾಂಧಿ ರಾಷ್ಟ್ರೀಯ ಮುಕ್ತ ವಿಶ್ವವಿದ್ಯಾಲಯದಲ್ಲಿ (IGNOU) ಸ್ನಾತಕ ಪದವಿಗೆ, ಧೀರ್ಘಾವಧಿ-ಅಲ್ಪಾವಧಿ ಕೋರ್ಸ್‌ಗಳಿಗಾಗಿ ಪರೀಕ್ಷೆಗೆ ಹಾಜರಾಗಿರುವುದು ಹಾಗೂ ಹಲವು ಕೈದಿಗಳು ಕರ್ನಾಟಕ ಮುಕ್ತ ವಿಶ್ವವಿದ್ಯಾಲಯದಲ್ಲೂ ಸ್ನಾತಕ - ಸ್ನಾತಕೋತ್ತರ ಪದವಿಗಾಗಿ ಶಿಕ್ಷಣ ಮುಂದುವರಿಸಿದ್ದು, ಕೆಲವರು ಪದವಿ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದ್ದಾರೆ ಕೂಡಾ. ಇದನ್ನು ಕೋಷ್ಟಕ ೩ರಲ್ಲಿ ಗಮನಿಸಬಹುದು. ಜ್ಞಾನಮುಖಿಯಾಗುವ ಮನಸ್ಸು ಸದಾ ರಚನಾತ್ಮಕವಾದ ಕೆಲಸದಲ್ಲೇ ತಲ್ಲೀನವಾಗಿರುತ್ತದೆ ಎಂದು ಶಿಕ್ಷಣ ಮುಂದುವರಿಸಿರುವ ಕೈದಿಗಳ ಅನಿಸಿಕೆ. ಶಿಕ್ಷಣಕ್ಕೆ ತಗಲುವ ಸಂಪೂರ್ಣ ವೆಚ್ಚವನ್ನು ಬಂದಿಖಾನೆ ಭರಿಸಿಕೊಳ್ಳುವುದಲ್ಲದೆ, ಪ್ರತೀ ವರ್ಷದ ಅನುದಾನದಲ್ಲಿ ಶಿಕ್ಷಣಕ್ಕೆಂದೆ ಇಂತಿಷ್ಟು ಮೊತ್ತವನ್ನು ನಿಗದಿಗೊಳಿಸಿದೆ. ಶಿಕ್ಷಣದಿಂದ ಕೈದಿಗಳ ಮನಪರಿವರ್ತನೆ ಸಾಧ್ಯವಿದೆ ಎಂದು ಸತ್ಯವನ್ನು ಮನಗಂಡು ಬಂದಿಖಾನೆ ಇಲಾಖೆ ಈ ನಿರ್ಧಾರವನ್ನು ಮತ್ತಷ್ಟು ಬಲಗೊಳಿಸಿದೆ.

ಶಿಕ್ಷಣದ ಜತೆಗೆ ಸಾಕಷ್ಟು ವಿಫುಲವಾದ ಮನೋರಂಜಕ ಹಾಗೂ ಸಾಂಸ್ಕೃತಿಕ ಚಟುವಟಿಕೆಗಳು, ಶಾರೀರಿಕ ವ್ಯಾಯಾಮ, ಒಳಾಂಗಣ - ಹೊರಾಂಗಣ ಕ್ರೀಡೆಗಳು, ಯೋಗ ಶಿಕ್ಷಣ, ಕರಕುಶಲ ಶಿಕ್ಷಣಗಳನ್ನು ಕೈದಿಗಳ ಮನಪರಿವರ್ತನಾ ಪ್ರಕ್ರಿಯೆಗನುಗುಣವಾಗುವಂತೆ ಪೂರಕವಾಗಿ ನೀಡಲಾಗುತ್ತಿದ್ದು, ಅನೇಕ ರಾಷ್ಟ್ರೀಯ ಮಟ್ಟದ ಸ್ಪರ್ಧೆಗಳಲ್ಲಿ ಕೈದಿಗಳನ್ನು ಭಾಗವಹಿಸುವಂತೆ ಪ್ರೋತ್ಸಾಹಿಸಲಾಗುತ್ತದೆ.

ಹೊರಗಿನ ಸಮಾಜದಲ್ಲಿ ಬದಲಾಗುತ್ತಿರುವ ಪರಿಸ್ಥಿತಿಗನುಗುಣವಾಗಿ ಸಾಮಾಜಿಕ ಸಮಸ್ಯೆಯಾದ ಅಪರಾಧವನ್ನು ಮತ್ತು ಅಪರಾಧಿಯನ್ನು ಬೇರೆ ದೃಷ್ಟಿಕೋನದಿಂದಲೇ ಪರೀಕ್ಷಿಸಿ, ಚಿಕಿತ್ಸೆ ನೀಡುವ ಪ್ರಯತ್ನ ಬಂದಿಖಾನೆಯಲ್ಲಿ ಆರಂಭಗೊಂಡಿದೆ. ಆಧುನಿಕ ತಂತ್ರಜ್ಞಾನವುಳ್ಳ ಜ್ಞಾನಸಂವಹನಾ ಮಾಧ್ಯಮಗಳಾದ ದೂರದರ್ಶನ, ಕಂಪ್ಯೂಟರ್‌ಗಳು ಬಂದಿಖಾನೆಯೊಳಗೆ ಪ್ರವೇಶ ಪಡೆದಿವೆ. ನಿರಕ್ಷರಸ್ಥ ಕೈದಿಯು ಕೂಡಾ ದೃಶ್ಯ - ಶ್ರವ್ಯ ಮಾಧ್ಯಮದ ಮೂಲಕ ಜ್ಞಾನ ಪಡೆಯುವ ಹಂತಕ್ಕೆ ತಲುಪಿದ್ದಾನೆ. ಆತನಿಗೂ ಮನರಂಜನೆಯ ಮೂಲಕವೆ ಆರೋಗ್ಯಕರ ಚಿಂತನೆಯನ್ನು ಒದಗಿಸಲು ಈ ಮಾಧ್ಯಮವೂ ಸಹಕರಿಸಬಲ್ಲದು ಎಂಬ ನಿರೀಕ್ಷೆ ಬಂದಿಖಾನೆ ಇಲಾಖೆಗಿದೆ. ಬಂದಿಖಾನೆಯನ್ನು ಆಧುನೀಕರಣಗೊಳಿಸುವ ಮೂಲಕ ಕೈದಿಗಳ ಮನಸ್ಸನ್ನು ಆಧುನೀಕರಿಸಿ, ಅವರ ಚಿಂತನೆಯಲ್ಲಿ ಆಲೋಚನೆಯಲ್ಲಿ ಸುಧಾರಣೆ ತರಬೇಕೆಂದು ಕೇಂದ್ರ ಸರಕಾರ ಪಂಚವಾರ್ಷಿಕ ಯೋಜನೆಯಡಿ ನೀಡುತ್ತಿರುವ ಧನಸಹಾಯ ಹಲವು ಮೂಲಗಳಿಂದ ಹಲವು ರೂಪದಲ್ಲಿ ಕೈದಿಗಳನ್ನು ತಲುಪುತ್ತಿದೆ.

ಕೈದಿಗಳ ಶಿಕ್ಷಣ, ಮನೋವಿಕಾಸ, ಮನಪರಿವರ್ತನೆ, ಮನರಂಜನೆಯನ್ನು ಗಮನದಲ್ಲಿಟ್ಟುಕೊಂಡು ಬಂದಿಖಾನೆಯೊಳಗೆ ಇಲಾಖಾ ಗ್ರಂಥಾಲಯ ಹಾಗೂ ಸಾರ್ವಜನಿಕ ಗ್ರಂಥಾಲಯದ ಶಾಖೆಯನ್ನು ತೆರೆಯಲಾಗಿದೆ. ಪುಸ್ತಕಗಳ ಜತೆಗೆ ವರ್ತಮಾನ ಪತ್ರಿಕೆ, ನಿಯತಕಾಲಿಕೆಗಳೂ ಕೈದಿಗಳಿಗೆ ಲಭ್ಯವಾಗುತ್ತಿದೆ. ಈ ವ್ಯವಸ್ಥೆಯಲ್ಲಿ ಹಲವು ಸಮಸ್ಯೆಗಳಿದ್ದರೂ ಸ್ಥಾಪನಾ ಉದ್ದೇಶ ಕೈದಿಗಳ ಮನಪರಿವರ್ತನೆಯೇ ಆಗಿರುವುದರಿಂದ ಮನಪರಿವರ್ತನೆಯ ಕೆಲಸವೂ ಕೂಡಾ ಸದ್ದುಗದ್ದಲವಿಲ್ಲದೆ ನಡೆಯುತ್ತಿದೆ. ಜ್ಞಾನದ ಬೆಳಕಿನಲ್ಲೆ ತಮ್ಮೊಳಗಿನ ಕೆಡುಕನ್ನು ಕೆದಕಿ ನೋಡುವ ಹಂತಕ್ಕೆ ಕೈದಿಗಳನ್ನು ಜ್ಞಾನಮೂಲದತ್ತ ಒಯ್ಯುವ ಬಂದಿಖಾನೆ ಆಡಳಿತ, ಇತ್ತೀಚಿನ ವರ್ಷಗಳಲ್ಲಿ ರಂಗಭೂಮಿಯನ್ನೂ ಬಂದಿಖಾನೆಯೊಳಗೆ ಪರಿಚಯಿಸಿದೆ. ಕೈದಿಯ ಅಪರಾಧದ ಹಿನ್ನಲೆಯನ್ನು ಗಮನದಲ್ಲಿರಿಸಿ, ಅಪರಾಧ ಮನೋಭಾವವನ್ನು ಬದಲಾಯಿಸುವಂತಾ ಪಾತ್ರವನ್ನು ಅದೇ ಕೈದಿಗೆ ನೀಡುವುದರೊಂದಿಗೆ, ಪಾತ್ರಗಳ ಮೂಲಕ ಕೈದಿಗಳ ಮನಸ್ಸನ್ನು ಪರಿವರ್ತಿಸಲು ಪ್ರಯತ್ನ ನಡೆಸುತ್ತಿದೆ. ಮನರಂಜನೆಯ ಜತೆಗೆ ಕೈದಿಗಳಲ್ಲಿರುವ ಅಭಿನಯ ಸಾಮರ್ಥ್ಯವನ್ನು ಹೊರತೆಗೆಯುವುದರೊಂದಿಗೆ ಅವರಲ್ಲಿರುವ ಪ್ರತಿಭೆ - ಸಾಮರ್ಥ್ಯವನ್ನು ಅವರಿಗೇ ಪರಿಚಯಿಸಿ, ಅವರಲ್ಲಿ ಮನಸ್ಥೈರ್ಯ ಆತ್ಮವಿಶ್ವಾಸವನ್ನು ಹೆಚ್ಚಿಸಲಾಗುತ್ತಿದೆ.

ಬಂದಿಖಾನೆಯಲ್ಲಿರುವ ಶಿಸ್ತು ಕೂಡಾ ಸಣ್ಣ ಪ್ರಮಾಣದಲ್ಲಿ ಕೈದಿಗಳ ಮನಪರಿವರ್ತನೆಗೆ ಸಹಕಾರಿಯಾಗುವಂತಹದ್ದು. ಈ ಸೆರೆಮನೆಯ ಶಿಸ್ತಿನ ಬಗ್ಗೆ ಎರಡು ಬಗೆಯ ವಿಚಾರಧಾರೆಗಳು ಪ್ರಚಲಿತವಿದೆ. ಒಂದು ದಬ್ಬಾಳಿಕೆಯ ಹಾಗೂ ಕಠಿಣ ಶಿಸ್ತಿನಲ್ಲಿ ನಂಬಿಕೆ. ಸ್ವಾತಂತ್ರ್ಯಪೂರ್ವದಲ್ಲಿ ಈ ವಿಚಾರಧಾರೆಯದೇ ಮೇಲುಗೈ ಇತ್ತು. ಇನ್ನೊಂದು ಸ್ಪಷ್ಟ ಮತ್ತು ವಿಧಾಯಕ ಶಿಸ್ತಿನಲ್ಲಿ ನಂಬಿಕೆ ಇಡುವುದು.[೨] ಸ್ವಾತಂತ್ರ್ಯೋತ್ತರದಲ್ಲಿ ಶಿಸ್ತಿನ ಕಲ್ಪನೆಯಲ್ಲಿ ಮೂಲಭೂತ ಪರಿವರ್ತನೆಯಾಗಿದೆ. ಶಿಸ್ತು ಎಂಬುದನ್ನು ಮನಪರಿವರ್ತನಾ ಕಾರ್ಯದ ಮೂಲಭೂತ ಅಡಿಪಾಯವೆಂದು ಪರಿಗಣಿಸಬೇಕು. ಶಿಸ್ತು ಪ್ರತೀಕಾರಾತ್ಮಕವಾಗಿರಕೂಡದು, ಅನಾವಶ್ಯಕವೂ ಕಠಿಣವೂ ದಬ್ಬಾಳಿಕೆಯದೂ ಆಗಿರಬಾರದು. ಮುಖ್ಯವಾಗಿ ಅಪರಾಧಿಯ ಆಸಕ್ತಿ, ದೃಷ್ಟಿಕೋನ, ರೂಢಿ, ಪ್ರೇರಣೆಗಳನ್ನು ಗಮನದಲ್ಲಿರಿಸಿಕೊಂಡು ಶಿಸ್ತಿನ ಪರಿಪಾಲನೆಯಾಗಬೇಕು.



ಪರಪ್ಪನ ಅಗ್ರಹಾರದ ನಾಲ್ವರು ಜೈಲು ಸಿಬ್ಬಂದಿ ಹಲ್ಲೆ ಮಾಡಿರುವುದನ್ನು ಕೈದಿ ನಾಗರಾಜು ತೋರಿಸುತ್ತಿರುವ ದೃಶ್ಯ.

# ಜೈಲಿನ ಕಾನೂನು ಬಾಹಿರ ಚಟುವಟಿಕೆ ಬಹಿರಂಗ ಬೆದರಿಕೆ: ಕೈದಿ ಮೇಲೆ ಹಲ್ಲೆ

ಶಿಸ್ತಿನ ಸ್ವರೂಪವನ್ನು ಪ್ರತಿಯೊಬ್ಬ ಕೈದಿಯ ಅಗತ್ಯಗಳಿಗೆ ಅನುಗುಣವಾಗಿ ನಿರ್ಧರಿಸಬೇಕು ಎಂದು ಅಖಿಲಭಾರತ ಬಂದಿಖಾನೆ ಕೈಪಿಡಿ ಸಮಿತಿ ೧೯೫೭-೫೯, ಮಾಡಿರುವ ಶಿಫಾರಸನ್ನು ಪ್ರತಿಯೊಂದು ರಾಜ್ಯವೂ ತನ್ನ ಬಂದಿಖಾನೆ ಕೈಪಿಡಿಯಲ್ಲಿ ವ್ಯಾಖ್ಯಾನಿಸಬೇಕೆಂದು ಕೇಂದ್ರ ಸರಕಾರ ರಾಜ್ಯ ಸರಕಾರಗಳಿಗೆ ಸಲಹೆ ನೀಡಿತ್ತು. ಕರ್ನಾಟಕ ರಾಜ್ಯ ಬಂದಿಖಾನೆ ಕೈಪಿಡಿ - ೧೯೭೮, ಇದನ್ನು ಗಮನಿಸಿದಾಗ ಅದರಲ್ಲಿರುವ ಶಿಸ್ತು ಸ್ವಾತಂತ್ರ್ಯಪೂರ್ವದಲ್ಲಿದ್ದ ತೀರಾ ದಬ್ಬಾಳಿಕೆ - ಕಠಿಣ ಶಿಸ್ತು ಅಲ್ಲದಿದ್ದರೂ, ಕೆಲವು ಶಿಸ್ತುಗಳು ಕೈದಿಗಳನ್ನು ಮಾನಸಿಕವಾಗಿ ನಿಸ್ತೇಜರನ್ನಾಗಿ ಮಾಡುವ ಸಾಧ್ಯತೆಯಂತೂ ಇದೆ. ಬ್ಯಾರಕ್‌ನೊಳಗೆ ಕೈದಿಗಳು ಅನವಶ್ಯಕವಾಗಿ ನಗುವುದನ್ನು, ಗಟ್ಟಿದನಿಯಲ್ಲಿ ಮಾತನಾಡುವುದನ್ನು ಪಹರೆಗಾರ ತಕ್ಷಣವೇ ತಡೆಯತಕ್ಕದ್ದು ಮತ್ತು ಅಧಿಕಾರಿಗಳಿಗೆ ಅಪರಾಧಿಗಳ ಹೆಸರನ್ನು ವರದಿ ಮಾಡತಕ್ಕದ್ದು ಎಂಬ ನಿಯಮ ಇದಕ್ಕೊಂದು ಪುಟ್ಟ ಉದಾಹರಣೆ. 'ಜೈಲಿನ ಶಿಸ್ತು, ನಿಯಮಗಳೆಲ್ಲವೂ ಮನುಷ್ಯರಲ್ಲಿ ಗೌರವ ಮೂಡಿಸುವ ಬದಲು ಬೀಭತ್ಸತೆಯನ್ನು ಹುಟ್ಟು ಹಾಕುತ್ತದೆ. ಹೃದಯಾಂತರಾಳದ ಅನಿಸಿಕೆಗಳನ್ನು ಇಲ್ಲಿ ವ್ಯಕ್ತಪಡಿಸಲು ಸಾಧ್ಯವೆನಿಸುವುದಿಲ್ಲ. ಜೋರಾಗಿ ಮಾತನಾಡಲು, ಮನಃಪೂರ್ವಕವಾಗಿ ನಗಲು ಅಥವ ಅಳಲು ಆಗುವುದಿಲ್ಲ. ಕೈದಿಗಳ ಎಲ್ಲ ಚಟುವಟಿಕೆಗಳನ್ನು ಇಲ್ಲಿ ಖಾಕಿ ಬಟ್ಟೆಯವರ ಉಸ್ತುವಾರಿಯಲ್ಲಿ ನಿಯಂತ್ರಿಸಲ್ಪಡುವಾಗ ಇಲ್ಲಿ ಯಾವುದಕ್ಕೂ ಸಹಜ ಸ್ಥಿತಿ ಇರುವುದಿಲ್ಲವೆನಿಸುತ್ತದೆ' ಎಂದು ೧೯೮೭ ರಲ್ಲಿ ಮೈಸೂರು ಕೇಂದ್ರ ಬಂದಿಖಾನೆಯಲ್ಲಿ ಕೈದಿಯಾಗಿದ್ದ ಕೆ.ಗೋವಿಂದರಾಜು ಅವರು ತಮ್ಮ ಆತ್ಮಚರಿತ್ರೆ[೪]ಯಲ್ಲಿ ಹೇಳಿಕೊಂಡಿದ್ದಾರೆ. ಆದರೆ ಈ ರೀತಿಯ ಶಿಸ್ತು ಬಂದಿಖಾನೆಗಳಿಗೆ ಒಂದು ಗಂಭೀರತೆಯನ್ನು ತಂದು ಕೊಡುತ್ತದೆ - ಎಂದು ಅಧಿಕಾರಿಗಳು ಪ್ರತಿಕ್ರಿಯಿಸುತ್ತಾರೆ.

'ಶಿಸ್ತು ಇಲ್ಲದಿದ್ದರೆ ಬಂದಿಖಾನೆ ಎಂಬುದು ಸಮಾಜ ಘಾತುಕರಿಗೆ 'Holiday Home' ಆಗಿ ಮಾರ್ಪಡುವ ಅವಕಾಶವಿದೆ' ಎಂದು ಸಾರ್ವತ್ರಿಕ ಭಾವನೆಯೂ ಇದೆ. All India Committee on Jail Reforms ೧೯೮೦-೮೩, ಇದರ ಅಧ್ಯಕ್ಷ ಜಸ್ಟೀಸ್ ನರೇನ್ ಮುಲ್ಲಾ ಅವರು ಈ ಬಗ್ಗೆ ತಮ್ಮ ವರದಿಯಲ್ಲಿ ಅಭಿಪ್ರಾಯ ವ್ಯಕ್ತಪಡಿಸಿದ್ದು, "ಸಮಿತಿಯು ಕೈದಿಗಳಿಗೆ ಶಿಕ್ಷೆಯಾಗಬಾರದು ಎಂದು ಬಯಸುತ್ತಿಲ್ಲ ಅಥವ ಬಂದಿಖಾನೆ ಎಂಬುದು ಸಮಾಜ ಕಂಟಕರಿಗೆ 'ರಜಾ ದಿನಗಳನ್ನು ಕಳೆಯುವ ಮನೆ' ಯಾಗಬೇಕೆಂದೂ ಬಯಸುತ್ತಿಲ್ಲ. ಆದರೆ ಅಲ್ಲಿ ಕೈದಿಯ ಬದುಕು ಬರ್ಬರವಾಗದಂತಹ, ಅಮಾನವೀಯವಾಗದಂತಹ ಶಿಸ್ತುಪಾಲನೆ ಇರಲಿ"[೫] ಎಂದು ಹೇಳಿದ್ದಾರೆ.

ಇದೇ ವಿಚಾರವಾಗಿ ಅಂದರೆ ಬಂದಿಖಾನೆಗಳಲ್ಲಿ ಅತೀ ಶಿಸ್ತು ಹೇರುವುದರ ಬಗ್ಗೆ ಪಂಡಿತ ನೆಹರೂ ಅವರು ತಮ್ಮ ೧೯೩೪ರ 'Prison land' ಎಂಬ ಲೇಖನದಲ್ಲಿ ಹೀಗಂದಿದ್ದಾರೆ. 'ಜೈಲು ಪರಿಸ್ಥಿತಿಗಳನ್ನು ಸುಧಾರಿಸಿದರೆ ಜನರು ಜೈಲಿಗೆ ನುಗ್ಗುತ್ತಾರೆ ಎಂಬ ತಪ್ಪು ಕಲ್ಪನೆ ಜೈಲು ಆಡಳಿತದಲ್ಲಿದೆ. ಜೈಲು ಎಷ್ಟೇ ಒಳ್ಳೆಯದಿದ್ದರೂ ಯಾರೂ ಅದರೊಳಗೆ ಹೋಗಲಿಚ್ಚಿಸುವುದಿಲ್ಲ. ಸ್ವಾತಂತ್ರ್ಯ ಕಳೆದುಕೊಂಡು, ಕುಟುಂಬ ಸದಸ್ಯರು - ಸ್ನೇಹಿತರನ್ನು, ಇಡೀಯ ಮನೆಯ ವಾತಾವರಣವನ್ನು ಕಳೆದುಕೊಂಡು ತಮ್ಮ ಮಣ್ಣಿನ ವಾಸನೆಯನ್ನು ಬಿಟ್ಟು ಹೊಸ ವಾತಾವರಣಕ್ಕೆ ಯಾರೂ ಹೊಂದಿಕೊಳ್ಳಲಾರರು.'[೬]

ಬಂದಿಖಾನೆಯೆಂದರೆ ಕೈದಿಯನ್ನು ತಿಳುವಳಿಕೆಯುಳ್ಳ ಮಾನವನನ್ನಾಗಿಸುವ ಪರಿವರ್ತನಾ 'ತಾಣ' ವಿನಾ ಆತನ ಮೇಲೆ ಶಿಸ್ತಿನ ಮೂಟೆ ಹೇರಿ ಆ ಒತ್ತಡದಿಂದ ಪರಿವರ್ತಿಸುವ ತಾಣವಲ್ಲ. ಆದರೆ ರಾಜ್ಯದ ಬಂದಿಖಾನೆಯೊಳಗಿನ ಶಿಸ್ತಿನ ಪರಿಸ್ಥಿತಿಯನ್ನು ಗಮನಿಸಿದರೆ, (ಕ್ಷೇತ್ರಕಾರ್ಯದ ಸಂದರ್ಭ) ಅದು ಕೈದಿಗಳ ಮನಪರಿವರ್ತನೆಗೆ ಅಷ್ಟೊಂದು ಪೂರಕವಾಗಿಲ್ಲ. ಈ ಅಧ್ಯಯನ ಜೀವಾವಧಿ ಕೈದಿಗಳ ಮನಪರಿವರ್ತನೆಯ ಮೇಲೆ ಅವಲಂಬಿಸಿರುವುದರಿಂದ ಜೀವಾವಧಿ ಕೈದಿಗಳಿಗೆ ಶಿಸ್ತು ಅತಿಯಾಯಿತು ಎಂಬ ನನ್ನ ಅಭಿಪ್ರಾಯವನ್ನು ಆಡಳಿತ ವಲಯ ಒಪ್ಪಲಿಲ್ಲ. ಬಂದಿಖಾನೆಯಲ್ಲಿ ನಿಯಮ, ಶಿಸ್ತು ಎಂಬುದು ಜೀವಾವಧಿ ಕೈದಿಗಳಿಗೂ ಇತರ ಕೈದಿಗಳಿಗೂ ಒಂದೇ ರೀತಿ. ಜೀವಾವಧಿ ಕೈದಿಗಳಿಗೆ ಎಲ್ಲಿ ನಿಯಮ ಶಿಸ್ತು ಸಡಿಲಿಸಬೇಕೋ ಅಲ್ಲಿ ಮಾನವೀಯ ದೃಷ್ಟಿಯಿಂದ ಅದನ್ನು ಸಡಿಸಲಾಗುತ್ತದೆ ಎಂಬುದು ಅಧಿಕಾರಿಗಳ ಅಭಿಪ್ರಾಯ.

ಈ ಬಗೆಯ ಶಿಸ್ತು ಕೈದಿಯ ವರ್ತನೆ - ಆಸಕ್ತಿಯಲ್ಲೂ ಒಂದು ಬಗೆಯ ಶಿಸ್ತನ್ನು ಮೂಡಿಸುತ್ತದೆ ಎಂಬ ಬಂದಿಖಾನೆಯ ತಿದ್ದುಪಡಿ ಅಧಿಕಾರಿಗಳ ಮಾತು ಒಂದು ದೃಷ್ಟಿಕೋನದಲ್ಲಿ ನಿಜವೆನಿಸಿದರೂ ಬಂದಿಖಾನೆಯೊಳಗೆ ಕೈದಿಯ ಊಟ - ತಿಂಡಿ, ಸ್ನಾನ - ಶೌಚದಂತಹ ವಿಚಾರದಿಂದ ಹಿಡಿದು ಮಾತು - ನಗು - ಭಾವನೆ ಕೂಡಾ ಅನೇಕ ನಿಯಮಗಳಡಿ ಬಂಧಿಸಲ್ಪಡುವುದರಿಂದ ಆತನ ಮೂಲಭೂತ ಸ್ವಾತಂತ್ರ್ಯಕ್ಕೆ ಮಾತ್ರವಲ್ಲ ದಿನನಿತ್ಯದ ಸ್ವಚ್ಛಂದತೆಗೂ ಏನೋ ಅಡ್ಡಿಯುಂಟಾದಂತಾಗುತ್ತದೆ ಎಂಬುದೂ ಅಷ್ಟೇನಿಜ. ಶಿಸ್ತು, ನಿಯಮಗಳ ಕಡಿವಾಣ ಹಾಕಿರುವ ಈ ಅಸಹನೀಯ ಬದುಕಿಂದ ಆದಷ್ಟು ಬೇಗ ಬಿಡುಗಡೆ ಹೊಂದಿ, ಇನ್ನೆಂದೂ ಅಪರಾಧ ಲೋಕಕ್ಕೆ ಕಾಲಿಡದೆ ಸಮಾಜದ ಸಂವಿಧಾನಿಕ ಚೌಕಟ್ಟಿನಲ್ಲೇ ಬದುಕು ನಡೆಸಬೇಕೆನ್ನುವಷ್ಟರ ಮಟ್ಟಿಗೆ ಕೈದಿಯ ಮನಸ್ಸು ಇಲ್ಲಿ ಪರಿವರ್ತನೆಗೊಳ್ಳುತ್ತದೆ. ಬಂದಿಖಾನೆಯ ಶಿಸ್ತು, ನಿಯಮಗಳು ಕೈದಿಗೆ ಶಿಕ್ಷೆಯನ್ನು ಅನುಭವಿಸುವ ಕತ್ತಲಲೋಕ ಹಾಗೂ ಸಮಾಜಕ್ಕೂ ಇರುವ ವ್ಯತ್ಯಾಸವನ್ನು ಸೆರೆವಾಸದ ಅವಧಿಯಲ್ಲಿ ಸ್ಪಷ್ಟವಾಗಿ ಮನವರಿಕೆ ಮಾಡಿ ಕೊಡುವುದರಿಂದ, ನಾಗರಿಕ ಸಮಾಜದಲ್ಲಿರುವ ಗುಣಾತ್ಮಕ ಅಂಶಗಳು, ಅಲ್ಲಿ ಬದುಕಬೇಕಾಗಿರುವ ರೀತಿ ನೀತಿಗಳ ಬಗ್ಗೆ ದೊಡ್ಡ ಪಾಠವನ್ನೇ ಕೈದಿ ಬಂದಿಖಾನೆಯೊಳಗೆ ಕಲಿಯುತ್ತಾನೆ. ಇದು ನಿಜ.

ಈ ಅಧ್ಯಯನದ ವ್ಯಾಪ್ತಿಯಲ್ಲಿ ಜೀವಾವಧಿ ಕೈದಿಗಳನ್ನು ಮಾತ್ರವೇ ಬಳಸಿಕೊಂಡಿರುವುದರಿಂದ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಸಂದರ್ಶಿಸಿದ ೧೫೦ ಕೈದಿಗಳಲ್ಲಿ, ಬಯಲು ಬಂದಿಖಾನೆಯ ಒಬ್ಬ ಕೈದಿಯನ್ನು ಹೊರತುಪಡಿಸಿ ಮಿಕ್ಕವರೆಲ್ಲರೂ, 'ಈ ಶಿಸ್ತು - ನಿಯಮದಡಿಯ ಸೆರೆವಾಸ ಶಿಕ್ಷೆ ಸಾಕು. ಕುಟುಂಬ - ಸಮಾಜ ಎಲ್ಲವನ್ನು ಬಿಟ್ಟು ಪ್ರಾಣಿಗಳಂತೆ ಇಲ್ಲಿ ಭಾವನಾರಹಿತವಾಗಿ, ಮೂಕವಾಗಿ ರೆಕ್ಕೆ ಹರಿದ ಹಕ್ಕಿಗಳಂತೆ ಬದುಕುವುದು ನಮಗೇ.... ಕೊನೆಯಾಗಲಿ. ಅಪರಾಧ ಲೋಕದಿಂದ ದೂರವಿದ್ದು ಇಲ್ಲಿ ಕಲಿತ ವೃತ್ತಿಯಿಂದ ಸಮಾಜದಲ್ಲಿ ಗೌರವವಾಗಿ ಬದುಕುವ ಪ್ರಯತ್ನ ಮಾಡುತ್ತೇವೆ' ಎಂಬ ಅನಿಸಿಕೆ ವ್ಯಕ್ತಪಡಿಸಿದ್ದಾರೆ. ಉಳಿದ ಒಬ್ಬ ಕೈದಿ (ಬಯಲು ಬಂದಿಖಾನೆ) ಮಡದಿಯ ಪ್ರಿಯಕರನನ್ನು ಕೊಲೆಗೈದು ಬಂದಾತ, ಇನ್ನೆರಡು ತಿಂಗಳಲ್ಲಿ ಜೀವಾವಧಿ ಶಿಕ್ಷೆ ಮುಗಿಸಲಿದ್ದಾನೆ. ಆತ ಸೆರೆವಾಸದ ಬಗ್ಗೆ ಅತ್ಯಂತ ನಿರ್ಲಿಪ್ತ. ತನಗೆ ವಹಿಸಿರುವ ಕೃಷಿ ಕೆಲಸವನ್ನು ತನ್ಮಯತೆಯಿಂದ, ನಿಷ್ಠೆಯಿಂದ ಮಾಡುವಾತ. ತನ್ನ ಮಡದಿ ಮತ್ತೆ ಅನೈತಿಕ ಜೀವನ ನಡೆಸಿದ್ದಲ್ಲಿ ಕಳೆದ ಬಾರಿ ಮಾಡಿದಂತೆ ಆಕೆಯ

ಪ್ರಿಯಕರನನ್ನಷ್ಟೇ ಕೊಲೆಗೈದು ಮತ್ತೆ ಸೆರೆವಾಸದ ಶಿಕ್ಷೆಗೆ ಸಿದ್ಧನೆಂದು ತನ್ನ ಸ್ಪಷ್ಟ ನಿರ್ಧಾರವನ್ನು ವ್ಯಕ್ತಪಡಿಸಿದ್ದಾನೆ. ಬಂದಿಖಾನೆ ಎಂಬುದು ಅಪರಾಧಿಗೆ ನ್ಯಾಯಾಲಯ ನೀಡಿರುವ ಶಿಕ್ಷೆಯನ್ನು ಅನುಭವಿಸಲಿಕ್ಕಿರುವ ತಾಣವೇ ಹೊರತು ಮತ್ತೆ ಹೊಸ ಶಿಕ್ಷೆ ಕೊಡುವ ತಾಣವಲ್ಲ. ಈ (ಮೇಲೆ ಪ್ರಸ್ತಾಪಿಸಿರುವ) ಕೈದಿಗೂ ಬಂದಿಖಾನೆ ಇಲಾಖೆ ಆತನ ಅಪರಾಧಗೈಯುವ ನಿರ್ಧಾರಕ್ಕೆ ಮತ್ತೆ ಶಿಕ್ಷೆ ನೀಡುವಂತಿಲ್ಲ. ಇಂಥಾ ಕೈದಿಗಳನ್ನು ಮನಶಾಸ್ತ್ರೀಯ ಚಿಕಿತ್ಸೆಗೆ ಒಳಪಡಿಸಿ, ಆತನ ಮನಸ್ಸೊಳಗೆ ಆಳವಾಗಿ ಬೇರೂರಿರುವ ಭಾವನೆಯನ್ನು ತೊಡೆದು ಹಾಕುವ ಅವಶ್ಯಕತೆ ಇದೆ. ಇದು ಮನಪರಿವರ್ತನೆಗೆ ಕೊನೆಯ ಅಸ್ತ್ರವಾಗಿ ಬಳಸಬೇಕಾದ ಒಂದು ದಾರಿಯೂ ಹೌದು.

ಫ್ರಾಯ್ಡ್, ಯೂಂಗ್, ಎರಿಕ್ ಫ್ರೇಮ್‌ನಂತ ಮಾನವತಾವಾದಿಗಳು, ವ್ಯಕ್ತಿಯ ಮನಸ್ಥಿತಿಯ ವಿಕಾರತೆಯು ಅಪವರ್ತನೆಗೆ ಮೂಲವಾಗುವುದರಿಂದ ಮನಃಶಾಸ್ತ್ರಜ್ಞರ ನೆರವಿನಿಂದ ವ್ಯಕ್ತಿಯ ಅಪರಾಧಿ ಮನೋಭಾವವನ್ನು ತೊಡೆಯುವಂತೆ ಮಾಡಿ ಆರೋಗ್ಯಕರವಾದ ವ್ಯಕ್ತಿಯನ್ನು ಹಾಗೂ ಸಮಾಜವನ್ನು ನಿರ್ಮಾಣಗೊಳಿಸುವ ಮೂಲಕ ಅಷ್ಟೇ ಆರೋಗ್ಯಕರವಾದ ಮಾನವೀಯ ಜಗತ್ತನ್ನು ರೂಪುಗೊಳಿಸಬೇಕು ಎಂದಿದ್ದಾರೆ. ಸ್ವಾತಂತ್ರ್ಯಾನಂತರದಲ್ಲಿ ನೇಮಕಗೊಂಡ ಎಲ್ಲ ಬಂದಿಖಾನೆ ಸುಧಾರಣಾ ಸಮಿತಿಗಳು ಪ್ರತಿಯೊಂದು ಬಂದಿಖಾನೆಯಲ್ಲೂ ಮನಃಶಾಸ್ತ್ರಜ್ಞರ ಅವಶ್ಯಕತೆಯನ್ನು ತಮ್ಮ ಶಿಫಾರಸಿನಲ್ಲಿ ಸ್ಪಷ್ಟಗೊಳಿಸಿವೆ. ರಾಜ್ಯದ ಬಂದಿಖಾನೆ ಇಲಾಖೆಯಲ್ಲಿ ಮಂಜೂರಾಗಿರುವ ಎರಡು ಮನಃಶಾಸ್ತ್ರಜ್ಞ (Psychiatrist) ಹುದ್ದೆಗಳಿದ್ದು, ಆರೋಗ್ಯ ಇಲಾಖೆಯಿಂದ ಪ್ರತಿನಿಯೋಜನೆ ಮೇಲೆ ಅವರನ್ನು ನೇಮಿಸಿಕೊಳ್ಳಲಾಗುತ್ತದೆ. ಒಂದು ಹುದ್ದೆ ಬೆಳಗಾವಿ ಕೇಂದ್ರ ಬಂದಿಖಾನೆಗಿದ್ದರೆ ಮತ್ತೊಂದು ಹುದ್ದೆ ಬೆಂಗಳೂರು ಕೇಂದ್ರ ಬಂದಿಖಾನೆಗಿದೆ. ಆದರೆ ಸದ್ಯ ಎರಡೂ ಬಂದಿಖಾನೆಗಳಲ್ಲಿ (೩ ವರ್ಷದಿಂದ) ಆ ಹುದ್ದೆಗಳು ಖಾಲಿ ಬಿದ್ದಿವೆ. 'ವರ್ಗಾವಣೆಯಾಗಿದ್ದಾರೆ' ಎಂದು ಅಧಿಕಾರಿಗಳ ಉತ್ತರ. ತೀರಾ ಅವಶ್ಯವೆನಿಸಿದ್ದಲ್ಲಿ ಜಿಲ್ಲಾ ಆಸ್ಪತ್ರೆಗಳಲ್ಲಿ ಲಭ್ಯವಿರುವ ಮನಃಶಾಸ್ತ್ರಜ್ಞರನ್ನು ಕರೆತರಲಾಗುತ್ತದೆ ಅಥವ ಕೈದಿಯನ್ನೇ ಕರೆದೊಯ್ಯುವ ಸೌಲಭ್ಯವಿದೆ. ಸದ್ಯ ಬಂದಿಖಾನೆಗಳಲ್ಲಿ ಲಭ್ಯವಿರುವ ಸೌಲಭ್ಯದಂತೆ, ಮನೋವಿಕಾರವುಳ್ಳ ಕೈದಿಗೆ ಮಾತ್ರವೇ ಮನಃಶಾಸ್ತ್ರಜ್ಞರಿಂದ ಚಿಕಿತ್ಸೆ ಅಗತ್ಯವಲ್ಲ; ಅಪರಾಧಿ ಎನಿಸಿಕೊಂಡವರಿಗೆಲ್ಲ ಮನಃಶಾಸ್ತ್ರಜ್ಞರ 'ಮಾತಿನ ಭಾಗ್ಯ'ವನ್ನು ಕಲ್ಪಿಸಿಕೊಡುವ ಅವಶ್ಯಕತೆಯಿದೆ. ಅಪರಾಧಿಯೊಳಗೆ ಸುಪ್ತವಾಗಿರುವ ಅಪರಾಧ ಪ್ರಜ್ಞೆಯನ್ನು ಹೊರಗೆಳೆಯಲು ಇದರಿಂದ ಸಾಧ್ಯ. ವಾಸ್ತವ ಪರಿಸ್ಥಿತಿಯೆಂದರೆ ನಮ್ಮಲ್ಲಿ ಮನಃಶಾಸ್ತ್ರಜ್ಞರ ಬಳಕೆ ತೀರಾ ಅತ್ಯಲ್ಪ. ಬಂದಿಖಾನೆಯಲ್ಲಿ ಕರ್ತವ್ಯ ನಿರ್ವಹಿಸುವ ಮನಃಶಾಸ್ತ್ರಜ್ಞರು ತಾವು ಬಂದಿಖಾನೆಯೊಳಗಿರುವ ಉದ್ದೇಶವನ್ನೇ ಮರೆತಂತಿರುತ್ತಾರೆ ಎಂದು ಹಲವು ಕೈದಿಗಳು ಸಂದರ್ಶನದ ವೇಳೆ ತಿಳಿಸಿದ್ದಾರೆ. 'ಬಂದಿಖಾನೆಗೆ ವರ್ಗಾವಣೆ ಆದೇಶ ಬಂದೊಡನೆ ಒಂದಷ್ಟು ದಿನ ಬಂದಿಖಾನೆಯಲ್ಲಿ ಕರ್ತವ್ಯ ನಿರ್ವಹಿಸಿ ಮತ್ತೆ ಪಟ್ಟುಬಿಡದೆ ವರ್ಗಾವಣೆಗೆ ಪ್ರಯತ್ನಿಸಿ ಮಾತೃ ಸಂಸ್ಥೆಗೆ ವರ್ಗಾವಣೆ ಪಡೆದು ಹೋಗುತ್ತಾರೆ' ಎಂದು ಬಂದಿಖಾನೆ ಆಡಳಿತ ಗಾಳಿಗೆ ಮಾತು ಹಾರಿಸಿ ಕುಳಿತರೆ ಕೈದಿಗಳ ಮನಪರಿವರ್ತನೆಯ ಪ್ರಕ್ರಿಯೆಗೆ ಎಂದೂ ಅರ್ಥಬರದು. ಜ್ಞಾನಸಂವಹನ ಮಾಧ್ಯಮಗಳ ಜತೆಗೆ ಮನಃ ಶಾಸ್ತ್ರಜ್ಞರ 'ಮಾತೂ' ಕೈದಿಗಳ ಮನಪರಿವರ್ತನೆಗೆ ಅತ್ಯಗತ್ಯ.

## ನಿರಪರಾಧಿಗಳು ಅಪರಾಧಿಗಳಲ್ಲ

ನಮ್ಮ ರಾಜ್ಯದ ಬಂದಿಖಾನೆಗಳಲ್ಲಿರುವ ಜೀವಾವಧಿ ಕೈದಿಗಳಲ್ಲಿ ಹೆಚ್ಚಿನವರು ಇಂದಿಗೂ ತಾವು ನಿರಪರಾಧಿಗಳೆಂದು ಗೋಗರೆಯುತ್ತಾರೆ. ಕ್ಷೇತ್ರ ಕಾರ್ಯದ ವೇಳೆ, ಹಲವು ಕೈದಿಗಳು ತಾವು ಈ ಮೋಸದ ಜಾಲಕ್ಕೆ ಹೇಗೆ ಸಿಲುಕಿ ಬಿದ್ದೆವು, ತಮ್ಮ ಹಗರಣಗಳಲ್ಲಿ ನಿಜವಾದ ಅಪರಾಧಿ ಹೇಗೆ ಪಾರಾದ, ಹೇಗೆ ತಮ್ಮನ್ನು ನಂಬಿಸಿದ, ಅಪರಾಧವನ್ನು ಒಪ್ಪುವಂತೆ ಯಾವ ರೀತಿ ಸಮಜಾಯಿಷಿ ನೀಡಿದ, ಎಷ್ಟು ಹಣ ತೆತ್ತ, ಏನೇನು ಆಶ್ವಾಸನೆ ಕೊಟ್ಟ, ಕೊನೆಗೆ ಹೇಗೆ ಕೈಕೊಟ್ಟ - ಎಂಬುದನ್ನು ಆರೇಳು ವರ್ಷಗಳ ಶಿಕ್ಷೆಯ ನಂತರವೂ ಹಸಿ ಹಸಿಯಾಗಿಯೇ ಜ್ಞಾಪಿಸುತ್ತಾ ಹನಿಗಣ್ಣಾಗಿ ವಿವರಿಸಿದ್ದಾರೆ. ಇವರಲ್ಲಿ ಶೇಕಡಾ ೭೦ ಮಂದಿ ಹಳ್ಳಿಯ ಕೃಷಿಕರು. ಆರ್ಥಿಕ ಹಾಗೂ ರಾಜಕೀಯ ಬಲವಿದ್ದರೆ ನಿಜವಾದ ಅಪರಾಧಿ, ಹೇಗೆ 'ನ್ಯಾಯ'ವನ್ನು ಕೊಳ್ಳಬಲ್ಲ, ತಾವೂ ಆರ್ಥಿಕ ಬಲವಿದ್ದಲ್ಲಿ ಮೊದಲೇ 'ಕೊಟ್ಟು' ನ್ಯಾಯವನ್ನು ಕೊಳ್ಳುತ್ತಿದ್ದೆವು, ಇಲ್ಲಿರುವ ಸ್ಥಿತಿಯೇ ಬರುತ್ತಿರಲಿಲ್ಲ ಎಂದು ಹಲವು ಕೈದಿಗಳು ತಮ್ಮ ಅನಿಸಿಕೆ ವ್ಯಕ್ತಪಡಿಸಿದ್ದಾರೆ. ಇವರೆಲ್ಲರಿಗೂ ನಮ್ಮ ಸಮಾಜದ ಆರ್ಥಿಕ - ಸಾಮಾಜಿಕ ಅಸಮಾನತೆಯ ಬಗ್ಗೆ ನೋವಿದ್ದು, ಪೊಲೀಸ್ ವ್ಯವಸ್ಥೆ, ನ್ಯಾಯಾಂಗದ ಬಗ್ಗೆ ಅತ್ಯಂತ ಕೆಟ್ಟ ಭಾವನೆ ಇದೆ. ನ್ಯಾಯಾಂಗದ ಮೇಲೆ ವಿಶ್ವಾಸವನ್ನೇ ಕಳೆದುಕೊಂಡಿರುವ ಇವರು ಮನಪರಿವರ್ತನೆಯ ಅವಶ್ಯಕತೆಯನ್ನು ತಿರಸ್ಕರಿಸಿ, ನಿರಾಕರಿಸುತ್ತಿದ್ದಾರೆ. 'ನಿರಪರಾಧಿಗಳಾಗಿರುವ ನಾವು ನ್ಯಾಯದ ಕಣ್ಣಲ್ಲಿ ಅಪರಾಧಿಗಳೆನಿಸಿದ್ದೇವೆ - ಅದಕ್ಕೆ ಬಲಿಪಶುಗಳಾಗಿದ್ದೇವೆ. ನಮ್ಮನ್ನು ಯಾರೂ ಪರಿವರ್ತಿಸುವ ಅಗತ್ಯವಿಲ್ಲ. ಪರಿವರ್ತಿಸಬೇಕಾದುದು ಸಮಾಜದಲ್ಲಿರುವ ನಿಜವಾದ ಅಪರಾಧಿಗಳನ್ನು, ಸಮಾಜಘಾತುಕರನ್ನು ಮತ್ತು ನಮ್ಮ ಪೊಲೀಸ್ ವ್ಯವಸ್ಥೆ, ನ್ಯಾಯಾಂಗದ ವ್ಯವಸ್ಥೆಯನ್ನು. ಒಂದು ವೇಳೆ ನಮ್ಮನ್ನು ಪರಿವರ್ತಿಸಿ ನೀವು ಸಮಾಜಕ್ಕೆ ಬಿಟ್ಟರೂ, ಆ ಕ್ರೂರ ಸಮಾಜದಲ್ಲಿ ತುಂಬಿ ತುಳುಕುತ್ತಿರುವ ನಿಜವಾದ ಅಪರಾಧಿಗಳು ನಮ್ಮನ್ನು ಮತ್ತೆ ನ್ಯಾಯಾಂಗದ ಬಾಯಿಗೆ ತಳ್ಳಿ ಬಂದಿಖಾನೆಗೆ ಸೇರಿಸುವುದಿಲ್ಲವೆ' ಎಂದು ಹಲವು ಕೈದಿಗಳು ಈ ರೀತಿಯ ಅನಿಸಿಕೆ ವ್ಯಕ್ತಪಡಿಸಿದ್ದಾರೆ.

ಕ್ಷೇತ್ರ ಕಾರ್ಯದ ವೇಳೆ ಮೈಸೂರು ಬಂದಿಖಾನೆಯ ಇಬ್ಬರು ವಿದ್ಯಾವಂತ ಕೈದಿಗಳು ನ್ಯಾಯಾಂಗ ವ್ಯವಸ್ಥೆಯ ಮೇಲೆ ಕಿಡಿಕಾರುತ್ತಾ, ಶೂದ್ರಕ ಕವಿಯ 'ಮೃಚ್ಛಕಟಿಕ'ದ ಕನ್ನಡ ರೂಪಾಂತರ 'ಆವೆಯ ಮಣ್ಣಿನ ಆಟದ ಬಂಡಿ' ನಾಟಕ (ಬನ್ನಂಜೆ ಗೋವಿಂದಾಚಾರ್ಯ : ೨೦೦೧) ವನ್ನು ಓದುವಂತೆ ಸಲಹೆ ನೀಡಿದರು. ಸಾಮಾಜಿಕ ಜೀವನದ ಓರೆಕೋರೆಗಳನ್ನು ಆ ಕಾಲದಲ್ಲೇ ಪೋಣಿಸಿ ಹೆಣೆದ ಆ ನಾಟಕದಲ್ಲಿ 'ನ್ಯಾಯಾಂಗದಲ್ಲಿ ರಾಜನ ರಾಜಕೀಯ ಹಸ್ತಕ್ಷೇಪ, ನ್ಯಾಯಾಂಗದ ಅದಕ್ಷತೆಯಿಂದ ಸಮಾಜದಲ್ಲಿ ಎದ್ದಿರುವ ಅರಾಜಕತೆ, ಹಿರಿಯರ ಸಣ್ಣತನ, ಸಣ್ಣವರ ಹಿರಿತನ, ಸಂಭಾವಿತ ವರ್ಗದವರೂ ಕಾನೂನಿನ ಕಣ್ಣುತಪ್ಪಿಸಿ ಅಡ್ಡದಾರಿ ಹಿಡಿಯಬೇಕಾದ ಅನಿವಾರ್ಯತೆ, ಅಧಿಕಾರ ಲಾಲಸೆಗೊಳಗಾದ ನ್ಯಾಯಾಧೀಶ ನಿರಪರಾಧಿಗೆ ವಿಧಿಸುವ ಶಿಕ್ಷೆ, ನ್ಯಾಯಾಧೀಶನ ಮನದೊಳಗಿನ ಸಂಘರ್ಷ - ಇವೆಲ್ಲವೂ ಆ ನಾಟಕದಲ್ಲಿ ಬಹಳ ಕಟುವಾಗಿ ವರ್ಣಿಸಲ್ಪಟ್ಟಿದೆ.' ಶೂದ್ರಕ ಕವಿಯ ಕಾಲದಲ್ಲೇ ಇದ್ದ ಸಾಮಾಜಿಕ ವಿಡಂಬನೆಗಳು - ನ್ಯಾಯಾಂಗದ ಕುತ್ಸಿತತನ ಈಗಲೂ ಹಾಗೆಯೇ ಇದೆ ಎಂದೆನ್ನುವ ಆ ಕೈದಿಗಳು ಉದಾಹರಣೆ ರೂಪದಲ್ಲೇ ನ್ಯಾಯಾಂಗದ ಬಗ್ಗೆ ಅಪನಂಬಿಕೆ ವ್ಯಕ್ತಪಡಿಸುತ್ತ ಮನಪರಿವರ್ತನೆ ನಮಗೆ ಯಾಕೆ ಅವಶ್ಯಕತೆಯಿದೆ

ಎಂದು ನನ್ನನ್ನೆ ಪ್ರಶ್ನಿಸಿದರು. ಕಾನೂನಿನಡಿ ಈಗ ಲಭ್ಯವಿರುವ ಶಿಕ್ಷೆ ನಮ್ಮನ್ನು ಪರಿವರ್ತಿಸುತ್ತದೆ ಎಂದು ನ್ಯಾಯಾಂಗ ನಂಬಿದರೆ ಅದು ತಪ್ಪು ನಂಬಿಕೆ ಎಂದನ್ನುತ್ತಾನೆ ಬೆಂಗಳೂರು ಕೇಂದ್ರ ಕಾರಾಗೃಹದ ಒಬ್ಬ ಜೀವಾವಧಿ ಕೈದಿ. ತನ್ನ ಈ ಹೇಳಿಕೆಗೆ ಕೊಟ್ಟ ಉದಾಹರಣೆ ಹಾಗೂ ಶಿಕ್ಷೆ ಯಾವ ರೀತಿ ಇರಬೇಕೆಂದು ಆತ ಕೊಟ್ಟ ಮಾದರಿ ಇಲ್ಲಿದೆ :

'ಟಿಪ್ಪುಸುಲ್ತಾನನ ಕಾಲದಲ್ಲಿ ಆತ ಅಪರಾಧಿಗಳಿಗೆ ಹೊಸ ರೀತಿಯ ಶಿಕ್ಷೆ ವಿಧಿಸುವುದಕ್ಕೆ ಆಜ್ಞೆ ಮಾಡಿದ್ದನಂತೆ. ಕೈದಿಗಳು ಪರಿಸರ ಪ್ರೇಮಿಗಳಾಗಬೇಕು - ಪ್ರಕೃತಿಯನ್ನು ಪ್ರೀತಿಸಬೇಕು, ಜತೆಗೆ ತನ್ನ ನಾಡೂ ನಂದನವನವಾಗಬೇಕು ಎನ್ನುವ ಯೋಚನೆ ಮಾಡಿ, ಒಂದು ಪಗೋಡಾ ಜುಲ್ಮಾನೆ ವಿಧಿಸುವಂತಹ - ಅಪರಾಧ ಮಾಡಿರುವ ಅಪರಾಧಿಗೆ ಇನ್ನು ಮುಂದೆ ದಂಡ ವಿಧಿಸದೆ, ತಮ್ಮೂರ ತೋಪಿನಲ್ಲಿ ಅಥವ ಆತನ ಗ್ರಾಮದ ಎದುರಿಗೆ ಎರಡು ಮಾವಿನ ಸಸಿ ಮತ್ತು ಎರಡು ಜಂಬುನೇರಳೆ ಅಥವ ಹಲಸಿನ ಮರಗಳನ್ನು ನೆಟ್ಟು, ಅದಕ್ಕೆ ದಿನಾ ನೀರೆರೆದು ಅವು ಮೂರು ದೆರ್‍ರಾದಷ್ಟು ಎತ್ತರಕ್ಕೆ ಬೆಳೆಯುವವರೆಗೆ ಜೋಪಾನ ಮಾಡಿದ ನಂತರವೇ ಆತನ ಶಿಕ್ಷೆ ಮುಗಿಯತಕ್ಕದ್ದು' ಎಂದು ಟಿಪ್ಪು ಮಾಡಿರುವ ಕಟ್ಟಳೆಯಂತೆ ಈಗಲೂ ಆ ರೀತಿಯ ಶಿಕ್ಷೆ ವಿಧಿಸಿದರೆ ಸಮಾಜಕ್ಕೂ ಅನುಕೂಲ ಶಿಕ್ಷೆಗೂ ಒಂದು ಅರ್ಥ ಎಂದನ್ನುತ್ತಾನೆ ಆ ಕೈದಿ. ಟಿಪ್ಪುವಿನ ಕಾಲದ ಈ ವಿಷಯ ಎಲ್ಲಿಂದ ಸಂಗ್ರಹವಾಯಿತು, ಈತನಿಗೆ ಜ್ಞಾನಸಂವಹನೆ ಹೇಗಾಯಿತು? ಎಂದು ಕೇಳಿದಾಗ ಕೈದಿ ನೀಡಿದ ಪುಸ್ತಕದ ವಿವರಣೆಯ ಜಾಡು ಹಿಡಿದು ಹೊರಟರೆ ಆ ವಿಷಯ ೨ ಪುಸ್ತಕಗಳಲ್ಲಿರುವುದು ಪತ್ತೆಯಾಯಿತು.[೮೯]

ಹಲವು ಕೈದಿಗಳು ನೀಡಿರುವ ಅರ್ಥಪೂರ್ಣ ಅನಿಸಿಕೆ - ಅಭಿಪ್ರಾಯಗಳಿಂದಲೇ ಬಂದಿಖಾನೆಯೊಳಗೆ ಮನಪರಿವರ್ತನೆ ಎಂಬುದು ಕೈದಿಗಳಿಗೆ ತಿಳಿಯಂತೆಯೇ ಹೂ ಅರಳುವಷ್ಟೇ ಸದ್ದಿಲ್ಲದಂತೆ ನವಿರಾಗಿ, ಕಣ್ಣಿಗೆ ಗೋಚರಿಸದಷ್ಟು ಸೂಕ್ಷ್ಮವಾಗಿ ನಡೆಯುತ್ತಿದೆ ಎಂಬುದು ಸ್ಪಷ್ಟವಾಗುತ್ತಿದೆ. ಆದರೆ ನಿರಪರಾಧಿಗಳಲ್ಲಿ ಹೆಪ್ಪುಗಟ್ಟಿರುವ ನೋವು, ಅಸಹಾಯಕತೆ ಮನಪರಿವರ್ತನೆಯ ಅಗತ್ಯವನ್ನು ಪ್ರಶ್ನಿಸುತ್ತದೆ. ಅಪರಾಧಿಯಲ್ಲದವರಿಗೆ ಯಾಕೆ ಮನಪರಿವರ್ತನೆ ಎಂಬ ತಾತ್ವಿಕ ಪ್ರಶ್ನೆಯನ್ನು ಎದುರಿಗಿಟ್ಟರೆ, ನಾವು ನ್ಯಾಯಾಂಗವನ್ನು ಪ್ರಶ್ನಿಸಿದಂತಾಗುತ್ತದೆ; ಅದನ್ನು ಅನುಮಾನಿಸಿ ಅವಮಾನಿಸಿದಂತಾಗುತ್ತದೆ. ಆದರೆ ನ್ಯಾಯಾಂಗದಲ್ಲಿರುವ ಹುಳುಕು, ನಿರಪರಾಧಿಗಳಿಗೆ ಆಗುತ್ತಿರುವ ಶಿಕ್ಷೆಯ ಬಗ್ಗೆ ಶ್ರೇಷ್ಠ ನ್ಯಾಯಾಲಯದ ಕೆಲವು ನ್ಯಾಯಾಧೀಶರುಗಳೇ ಅಸಮಾಧಾನ, ಅಸಹಾಯಕತೆ ವ್ಯಕ್ತಪಡಿಸಿದ್ದಾರೆ.

ಸುಪ್ರೀಂ ಕೋರ್ಟಿನ ನ್ಯಾಯಮೂರ್ತಿ ಕೆ.ಟಿ. ಥಾಮಸ್ ಅವರು ಕರ್ನಾಟಕ ನ್ಯಾಯಾಂಗ ಅಕಾಡೆಮಿ ಏರ್ಪಡಿಸಿದ್ದ 'ಪರಿಣಾಮಕಾರಿ ಕ್ರಿಮಿನಲ್ ನ್ಯಾಯಾಂಗ ವ್ಯವಸ್ಥೆ' ಎಂಬ ವಿಚಾರ ಸಂಕಿರಣದ ಸಂದರ್ಭದಲ್ಲಿ, 'ಪ್ರಸಕ್ತ ನ್ಯಾಯಾಂಗ ವ್ಯವಸ್ಥೆಯಲ್ಲಿ ನಿಜವಾದ ಅಪರಾಧಿಗಳಿಗೆ ಶಿಕ್ಷೆ ವಿಧಿಸುವುದು ಕಡಿಮೆಯಾಗುತ್ತಿದ್ದು ನಿರಪರಾಧಿಗಳೇ ಶಿಕ್ಷೆಗೆ ಗುರಿಯಾಗುತ್ತಿದ್ದಾರೆ. ನಮ್ಮ ಭಾರತೀಯ ದಂಡ ಸಂಹಿತೆಯನ್ನು ಪರಿಣಾಮಕಾರಿಯಾಗಿ ಬಳಸಿಕೊಂಡರೆ ನಿಜವಾದ ಅಪರಾಧಿಗಳಿಗೆ ಶಿಕ್ಷೆ ವಿಧಿಸಲು ತೊಂದರೆ ಆಗುವುದಿಲ್ಲ'[೯೦] ಎಂದು ಅಭಿಪ್ರಾಯಿಸಿದ್ದಾರೆ. ಅಪರಾಧ ನ್ಯಾಯ ವಿತರಣಾ-ಸುಧಾರಣಾ ಸಮಿತಿಯ ಈಗಿನ ಅಧ್ಯಕ್ಷ ಹಾಗೂ ಕರ್ನಾಟಕ ಮತ್ತು ಕೇರಳ ಹೈಕೋರ್ಟ್‌ಗಳ ನಿವೃತ್ತ ಮುಖ್ಯ ನ್ಯಾಯಾದೀಶ ವಿ.ಎಸ್. ಮಳೀಮಠ್ ಅವರು ಕೂಡಾ ನ್ಯಾಯವ್ಯವಸ್ಥೆಯ

ಬಗ್ಗೆ ಇಂತಹದ್ದೇ ಅಭಿಪ್ರಾಯವನ್ನು ವ್ಯಕ್ತ ಪಡಿಸಿದ್ದಾರೆ: 'ದೇಶದ ನ್ಯಾಯಾಲಯಗಳ ಮುಂದೆ ಬರುವ ಪ್ರಕರಣಗಳಲ್ಲಿ ಕೇವಲ ಶೇಕಡ ೬ ರಷ್ಟು ಆರೋಪಿಗಳಿಗೆ ಮಾತ್ರ ಶಿಕ್ಷೆಯಾಗುತ್ತಿದೆ. ಶೇಕಡ ೯೪ ಆರೋಪಿಗಳು ನುಣುಚಿಕೊಳ್ಳುತ್ತಿದ್ದಾರೆ. ಇದರಿಂದಾಗಿ ಕಾನೂನು ವ್ಯವಸ್ಥೆಗಿಂತ 'ಅಪರಾಧಿ' ಬಲಿಷ್ಠವಾಗುತ್ತಿದ್ದಾನೆ. ಕಾನೂನಿನ ಭಯವಿಲ್ಲದೆ ಇಂತಹ ಅಪರಾಧಿಗಳು ಸಮಾಜದಲ್ಲಿ ಗಣ್ಯವ್ಯಕ್ತಿಗಳಾಗಿ ಜೀವನ ಸಾಗಿಸುವ ಪ್ರವೃತ್ತಿ ಕಂಡು ಬರುತ್ತಿದೆ. ಕಾನೂನು ಎಷ್ಟೇ ದೊಡ್ಡದಾಗಿದ್ದರೂ ಈ ರೀತಿಯ ಪ್ರವೃತ್ತಿಯಿಂದಾಗಿ ಜನರು ಕಾನೂನಿನ ಬಗ್ಗೆ ನಂಬಿಕೆ ಕಳೆದುಕೊಳ್ಳುತ್ತಿದ್ದಾರೆ' [೧೧] ಎಂದು ವಿಷಾದ ವ್ಯಕ್ತಪಡಿಸಿದ್ದಾರೆ.

ಕ್ಷುಲ್ಲಕವಾದ ಯಾವುದೋ ಹಳ್ಳಿ ಜಗಳ, ಹಳ್ಳಿಯಲ್ಲಿ ಮಾಮೂಲಾಗಿರುವ ರಾಜಕೀಯ ವಾಗ್ವಾದದೊಳಗೆ ಕುತೂಹಲದಿಂದ ಮೂಗುತೂರಿಸಲು ಹೋಗಿದ್ದೇ ಅಪರಾಧವೆಂಬಂತೆ, ನಿಜವಾದ ಅಪರಾಧಿಯನ್ನು ಮರೆಮಾಚಿ ತಮ್ಮಂತ ನಿರಪರಾಧಿಗಳಿಗೆ ಶಿಕ್ಷೆ ವಿಧಿಸಿರುವ ನ್ಯಾಯಾಂಗದ ನಿಜ ಅವಸ್ಥೆ ಹೇಗಿದೆ ಎಂಬುದನ್ನು ತಿಳಿಸುವುದಕ್ಕಾಗಿ ಕೈದಿಗಳು ಒಂದು ವರ್ತಮಾನ ಪತ್ರಿಕೆಯನ್ನೇ (ಗ್ರಂಥಾಲಯದ) ನನ್ನೆದುರಿಗಿಟ್ಟರು. ಆ ಪತ್ರಿಕೆಯಲ್ಲಿ ಸುಪ್ರೀಂ ಕೋರ್ಟಿನ ನ್ಯಾಯಾಧೀಶ ಆರ್.ಪಿ. ಸೇಥಿ ಅವರು 'ಪ್ರಸಕ್ತ ಇರುವ ಅಪರಾಧಿಕ ಕಾನೂನನ್ನು ಸಮಗ್ರವಾಗಿ ಬದಲಾಯಿಸಿ ಹೊಸದಾಗಿ ರಚಿಸಬೇಕಾಗಿದೆ. ಬ್ರಿಟಿಷರ ಕಾಲದಲ್ಲಿ ರಚಿಸಲಾದ ಈ ಭಾರತೀಯ ದಂಡ ಸಂಹಿತೆ (Indian penal code) ಇಂದಿನ ಸಾಮಾಜಿಕ ಪರಿಸ್ಥಿತಿಗೆ ಸೂಕ್ತವಲ್ಲ, ಅಪರಾಧಿಗಳನ್ನು ಗುರುತಿಸಿ ಶಿಕ್ಷೆ ನೀಡುವುದಕ್ಕೆ ಸಾಧ್ಯವಾಗುತ್ತಿಲ್ಲ. ದಂಡ ಸಂಹಿತೆಗೆ ಆಗಾಗ್ಗೆ ತಿದ್ದುಪಡಿ ತರುವುದರಿಂದ ಏನೇನೂ ಪ್ರಯೋಜನವಿಲ್ಲ. ಅಪರಾಧ ಪ್ರಕರಣದಲ್ಲಿ ಭಾಗಿಯಾದ ಶೇಕಡ ೬ ರಷ್ಟು ಆರೋಪಿಗಳಿಗೆ ಮಾತ್ರ ಶಿಕ್ಷೆಯಾಗುತ್ತಿದ್ದು, ಉಳಿದವರು (ಶೇಕಡಾ ೯೪) ಆರೋಪ ಸಾಬೀತಾಗದೆ ಮುಕ್ತರಾಗುತ್ತಿದ್ದಾರೆ. ಈಗಿನ ದಂಡ ಸಂಹಿತೆ ಹಾಗೂ ನ್ಯಾಯವ್ಯವಸ್ಥೆಯಲ್ಲಿರುವ ಕೊರತೆಯಿಂದಾಗಿ ಹಣವುಳ್ಳವರು ಶಿಕ್ಷೆಯಿಂದ ತಪ್ಪಿಸಿಕೊಳ್ಳುತ್ತಾರೆ. ಬಡವರು ನ್ಯಾಯ ಪಡೆದುಕೊಳ್ಳುವುದು ಕಷ್ಟವಾಗುತ್ತಿದೆ.[೧೨] ಎಂದವರು ಇಂದಿನ ನ್ಯಾಯಾಂಗ ಪರಿಸ್ಥಿತಿ ಬಗ್ಗೆ ಪಾರದರ್ಶಕವಾದ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ನಮ್ಮ ನ್ಯಾಯಾಂಗ ವ್ಯವಸ್ಥೆ ಹೇಗಿದೆ ಎನ್ನುವುದನ್ನು ನ್ಯಾಯಾಧೀಶರೇ ಬಿಚ್ಚಿಡುವಾಗ, ಕೈದಿಗಳ ಮನಪರಿವರ್ತನೆ ಎಷ್ಟು ಪ್ರಮಾಣದಲ್ಲಾಗಬಹುದು ಎಂಬುದನ್ನು ನಾವು ವಿವೇಚಿಸಬೇಕಾಗುತ್ತದೆ. ಇಂತಾ ಸಂದರ್ಭದಲ್ಲಿ ನಿರಪರಾಧಿಗಳೆಂದು ನೋವುಣ್ಣುವ ಕೈದಿಗಳಿಗೆ ಸಾಂತ್ವನ ಹೇಳಿ, ನ್ಯಾಯಾಂಗ ವ್ಯವಸ್ಥೆ ಹಾಗೂ ಸಮಾಜದ ಮೇಲೆ ಮರುನಂಬಿಕೆ ಭರಿಸಬೇಕಾದುದು ಬಂದಿಖಾನೆಯೊಳಗಿನ ಸಿಬ್ಬಂದಿಗಳ ಕರ್ತವ್ಯ.

ಆದರೆ ಬಂದಿಖಾನೆ ಎಂಬುದು ಸಮಾಜದಲ್ಲಿ 'ಕತ್ತಲ ಲೋಕ' ವಿದ್ದಂತೆ. ಈ ಕತ್ತಲ ಲೋಕದಲ್ಲಿ ಕನಸುಗಳು ಅರಳದು ಎಂಬ ಅಪವಾದವಿದೆ. ಸ್ವಾತಂತ್ರ್ಯಹೀನ ಅಪರಾಧಿಯನ್ನು ಸಂಪೂರ್ಣವಾಗಿ ಬದಲಾಯಿಸಿ ಆತನನ್ನು ಪರಿಪೂರ್ಣ ಮನುಷ್ಯನನ್ನಾಗಿ ರೂಪಿಸಿ ಆತನನ್ನು ಸಮಾಜಕ್ಕೆ ಒಪ್ಪಿಸುವ ಮಹತ್ತರ ಜವಾಬ್ದಾರಿ ಬಂದಿಖಾನೆಯಲ್ಲಿ ಅದೇ ಕಾರ್ಯಕ್ಕೆಂದು ನೇಮಕಗೊಂಡ ತಿದ್ದುವ ಸಿಬ್ಬಂದಿಗಳದ್ದು (Correctional Staff). ಆದರೆ ಸ್ವಾತಂತ್ರ್ಯಪೂರ್ವದಿಂದಲೂ, ಕಂಪನಿ ಸರಕಾರದ ಲಾರ್ಡ್ ಮೆಕಾಲೆಯ ಕಾಲದಲ್ಲೇ ಈ ಸಿಬ್ಬಂದಿಗಳು ತಮ್ಮ

ಕರ್ತವ್ಯಪ್ರಜ್ಞೆಯನ್ನು ಮರೆತಿರುತ್ತಾರೆ ಎಂಬ ಹುಯಿಲಿತ್ತು. ೧೯೧೯ ರಲ್ಲಿ ನೇಮಕಗೊಂಡ ಭಾರತೀಯ ಕಾರಾಗೃಹ ಸಮಿತಿ ೧೯೧೯ - ೨೦ ಯಂತೂ ಕೈದಿಗಳಿಗೆ ಮಾದರಿಯಾಗಿರಬೇಕಾದ ಬಂದಿಖಾನೆ ಆಡಳಿತದಲ್ಲಿರುವ ಅಶಿಸ್ತು, ಕೆಳಹಂತದ ಸಿಬ್ಬಂದಿಗಳಲ್ಲಿರುವ ಲಂಚಕೋರತನ, ಭ್ರಷ್ಟಾಚಾರ, ಸಿಬ್ಬಂದಿಗಳಲ್ಲಿರದ ಪ್ರಾಮಾಣಿಕತೆ, ದಕ್ಷತೆ, ಕರ್ತವ್ಯ ಪ್ರಜ್ಞೆ, ವೃತ್ತಿಪರತೆ ಇವುಗಳನ್ನೆಲ್ಲ ಸುಧಾರಿಸುವುದರ ಜತೆಗೆ, ಕೈದಿಗಳನ್ನು ತಿದ್ದುವ ಬಗ್ಗೆ ಸಿಬ್ಬಂದಿಗಳಿಗೆ ಸೂಕ್ತ ತರಬೇತಿ ಹಾಗೂ ಪ್ರಾಮಾಣಿಕರಾಗಿರಲು ಅವರ ವೇತನವನ್ನು ಹೆಚ್ಚಿಸುವಂತೆ ಶಿಫಾರಸು ಮಾಡಿತ್ತು.

ಸ್ವಾತಂತ್ರ್ಯಾ ನಂತರ ಭಾರತ ಸರಕಾರ ನೇಮಿಸಿದ 'ಅಖಿಲ ಭಾರತ ಬಂದಿಖಾನೆ ಕೈಪಿಡಿ ಸಮಿತಿ ೧೯೫೭ - ೫೯ ಕೂಡಾ ಇದೇ ಅಂಶವನ್ನು ಎತ್ತಿ ಹಿಡಿಯಿತಲ್ಲದೆ ಕೈದಿಗಳ ತಿದ್ದುವಿಕೆಗೆ ಸಿಬ್ಬಂದಿಗಳನ್ನು (ಚೀಫ್ ವಾರ್ಡ್‌ರ್, ಹೆಡ್‌ವಾರ್ಡ್‌ರ್, ವಾರ್ಡ್‌ರ್) ನೇಮಿಸಿಕೊಳ್ಳುವಾಗ ಶೈಕ್ಷಣಿಕ ಅರ್ಹತೆ ಹಾಗೂ ಅನುಭವದ ವಿಚಾರದಲ್ಲಿ ಸಾಕಷ್ಟು ಎಚ್ಚರಿಕೆ ವಹಿಸಬೇಕೆಂದು (೧೯೧೯ ರ ಸಮಿತಿಯೂ ಇದೇ ಸಲಹೆಯನ್ನು ನೀಡಿದೆ) ಸೂಚಿಸಿದೆಯಲ್ಲದೆ, ಆ ನೇಮಕಾತಿ ಮಾಡಿಕೊಳ್ಳುವ ಅಧಿಕಾರಿಯು ಕನಿಷ್ಠ ಸಹಾಯಕ ಅಧೀಕ್ಷಕನಾಗಿರಬೇಕು, ಆತ ಅಭ್ಯರ್ಥಿಗಳ ಪ್ರಾಮಾಣಿಕತೆ, ಯೋಗ್ಯತೆ, ತಿದ್ದುವ ಕಾರ್ಯದ ನಾಯಕತ್ವ ಗುಣಗಳಿಗೆ ಪ್ರಾಮುಖ್ಯತೆ ನೀಡಬೇಕು ಎಂದೂ ಸೂಚಿಸಿದೆ. ಕಾಲಕಾಲಕ್ಕೆ ಈ ಸಿಬ್ಬಂದಿಗಳಿಗೆ ಕೈದಿಗಳನ್ನು ತಿದ್ದುವ ಕಾರ್ಯದ ಬಗ್ಗೆ ತರಬೇತಿ ನೀಡಬೇಕೆಂದೂ ಸಲಹೆ ಮಾಡಿದೆ. ಮೈಸೂರಿನಲ್ಲಿ ಸಿಬ್ಬಂದಿ ತರಬೇತಿ ಕೇಂದ್ರವನ್ನು ಈ ಕಾರಣಕ್ಕಾಗಿಯೆ ತೆರೆಯಲಾಗಿದ್ದು, ಅತ್ಯಾಧುನಿಕ ರೀತಿಯಲ್ಲಿ ಇಲ್ಲಿ ಸಿಬ್ಬಂದಿಗಳಿಗೆ ತರಬೇತಿ ನೀಡಲಾಗುತ್ತದೆ.

೧೯೭೨ ರಲ್ಲಿ ಭಾರತ ಸರ್ಕಾರದಿಂದ ನೇಮಿಸಲ್ಪಟ್ಟ 'ಬಂದಿಖಾನೆ ಆಡಳಿತ ಸುಧಾರಣಾ ಸಮಿತಿ ೧೯೭೨ - ೭೩ರ ಶಿಫಾರಸಿನಂತೆ, ಕರ್ನಾಟಕ - ಕೇರಳ - ಆಂಧ್ರಪ್ರದೇಶ ಹಾಗೂ ತಮಿಳುನಾಡು ಸರಕಾರಗಳು ಒಂದಾಗಿ ೧೯೭೯ ರಲ್ಲಿ ಆರಂಭಿಸಿದ 'ಪ್ರಾದೇಶಿಕ ಆಡಳಿತ ಸುಧಾರಣಾ ತರಬೇತಿ ಸಂಸ್ಥೆ'ಯಲ್ಲಿ ಜೈಲರ್, ಚೀಫ್ ಜೈಲರ್, ಸಹಾಯಕ ಅಧೀಕ್ಷಕರು ಹಾಗೂ ಪ್ರೊಬೇಷನ್ ಅಧಿಕಾರಿಗಳಿಗೂ ಕೈದಿಗಳನ್ನು ತಿದ್ದುವ ಕಾರ್ಯದ ಬಗ್ಗೆ ತರಬೇತಿ ನೀಡಲಾಗುತ್ತದೆ. ಜಸ್ಟಿಸ್ ಮುಲ್ಲಾ ಅವರೂ ತಮ್ಮ ಸಮಿತಿ ವರದಿ (ಭಾರತೀಯ ಬಂದಿಖಾನೆ ಸುಧಾರಣೆ ಸಮಿತಿ, ೧೯೮೦ - ೮೩) ಯಲ್ಲಿ ಕೈದಿಗಳ ಮನಪರಿವರ್ತನೆಗೆ ಬಂದಿಖಾನೆ ನೌಕರರು ಮತ್ತು ಅಧಿಕಾರಿಗಳಲ್ಲಿರಬೇಕಾದಂತಹ ಮಾನವೀಯ ದೃಷ್ಟಿಕೋನ, ಪ್ರಾಮಾಣಿಕತೆ, ದಕ್ಷತೆಯ ಬಗ್ಗೆ ಪ್ರಸ್ತಾಪಿಸಿದ್ದಾರೆ. ಅದಿಲ್ಲದಿರುವುದನ್ನು ಗುರುತಿಸಿ ಹಲವು ಸಲಹೆಗಳನ್ನಿತ್ತಿದ್ದಾರೆ.

ಸರಕಾರದ ಇಷ್ಟೆಲ್ಲ ಪ್ರಯತ್ನ, ಸಲಹೆ, ಶಿಫಾರಸುಗಳಿದ್ದರೂ ಕೈದಿಗಳ ಮನಪರಿವರ್ತನಾ ಪ್ರಕ್ರಿಯೆಗೆ ಮೂಲ ಚಾಲಕರಾಗಿರುವ ಬಂದಿಖಾನೆ ಸಿಬ್ಬಂದಿಗಳಲ್ಲಿ ಹೆಚ್ಚಿನವರಲ್ಲಿ ಮಾನವೀಯತೆಯ ಕೊರತೆ ಸಾಕಷ್ಟು ಇರುವುದನ್ನು ಕ್ಷೇತ್ರ ಕಾರ್ಯದ ವೇಳೆ ಗಮನಿಸಲಾಗಿದೆ. ಎಲ್ಲ ಕೈದಿಗಳನ್ನು ಹಾಗೂ ಎಲ್ಲ ಅಪರಾಧಗಳನ್ನು ಒಂದೇ ತಕ್ಕಡಿಯಲ್ಲಿಟ್ಟು ತೂಗುವ ಮನೋಭಾವ, ಎಲ್ಲರಿಗೂ ಒಂದೇ ರೀತಿಯ ಚಿಕಿತ್ಸೆ ನೀಡುವ ಪ್ರಯತ್ನ ಎಂದೂ ಕೈದಿಯ ಮನಪರಿವರ್ತನೆಯನ್ನು ಪರಿಪೂರ್ಣಗೊಳಿಸದು. ಪಂಡಿತ ನೆಹರೂ ಅವರು ತಮ್ಮ ಲೇಖನ ಪ್ರಿಸನ್ ಲ್ಯಾಂಡ್ (1934) ನಲ್ಲಿ 'ಒಬ್ಬ ಅಪರಾಧಿ ಶಿಕ್ಷೆಯಾಗಿ ಸೆರೆಮನೆಗೆ ಕಳುಹಿಸಲ್ಪಡುತ್ತಾನೆ ಮತ್ತು ಶಿಕ್ಷೆಗಾಗಿ

ಅಲ್ಲ. ಆದ್ದರಿಂದ ಜೈಲಿನಲ್ಲಿ ಆತನಿಗೆ ಮತ್ತೆ ಶಿಕ್ಷೆಯಾಗದಂತೆ ಸುಧಾರಣೆ ಮಾಡಿ ಅತನನ್ನು ಉತ್ತಮ ನಾಗರಿಕನನ್ನಾಗಿರಿಸುವುದು ಬಂದಿಖಾನೆ ಆಡಳಿತದ ಮುಖ್ಯ ಧ್ಯೇಯ. ಆದರೆ ಈ ಧ್ಯೇಯ ಕೊನೇ ಪಕ್ಷ ಕೆಲವು ಜೈಲಾಧಿಕಾರಿಗಳಿಗಾದರೂ ಅರ್ಥವಾಗುತ್ತಿಲ್ಲ, ದುರಂತ' ಎಂದು ಪ್ರಸ್ತಾಪಿಸಿದ್ದಾರೆ.

ಪಂಡಿತ್ ನೆಹರೂ ೧೯೩೪ ರಲ್ಲಿ ಕಂಡ ಜೈಲಿನ ಆ ಚಿತ್ರಣ ಈಗಲೂ ಪ್ರಸ್ತುತವೆನಿಸುತ್ತದೆ. ಸರಕಾರದಿಂದ ಕೈದಿಗಳಿಗೆ 'ಮನಪರಿವರ್ತನೆಗಾಗಿ' ಬರುವ ಸೌಲಭ್ಯಗಳನ್ನು ಈ ಬಂದಿಖಾನೆ ಅಧಿಕಾರಿಗಳು ಕೈದಿಗಳಿಗೆ ಒದಗಿಸಿಕೊಡುತ್ತಾರೆಯೆ ವಿನಾ ತಮ್ಮ ಪ್ರೀತಿಯನ್ನು, ಅಂತಃಕರಣವನ್ನು ಕೈದಿಗಳತ್ತ ಹರಿಸುವವರು ಇವರಲ್ಲಿ ಬೆರಳೆಣಿಕೆಯಷ್ಟು ಮಂದಿ ಮಾತ್ರ.

ದೆಹಲಿಯ ತಿಹಾರ್ ಸೆರೆಮನೆಗಳ ಐ.ಜಿ. (ಇನ್ಸ್ ಪೆಕ್ಟರ್ ಜನರಲ್ ) ಆಗಿದ್ದ ಕಿರಣ್ ಬೇಡಿ ಅವರು, 'ನಮ್ಮ ಬಂಧಿಖಾನೆಗಳು ಅಪರಾಧಿಗಳನ್ನು ಪರಿವರ್ತಿಸುವುದಿಲ್ಲ. ಬದಲಿಗೆ ಅಪರಾಧಿಗಳ್ನು ಹುಟ್ಟು ಹಾಕುತ್ತವೆ. ಈ ಚಿತ್ರಣವನ್ನು ಬದಲಿಸಬೇಕಾದರೆ ನಾವು (ಅಧಿಕಾರಿಗಳು) ನಮ್ಮ ಗಮನವನ್ನು, ಶ್ರಮವನ್ನು ಅತ್ತ ಕೇಂದ್ರೀಕರಿಸಬೇಕಾಗಿದೆ.[೧೩] ಎಂದು ಹೇಳಿರುವುದು ಬಂದಿಖಾನೆಗಳೊಳಗಿನ ಪರಿಸ್ಥಿತಿಯನ್ನು, ಅಲ್ಲಿನ ಅಧಿಕಾರಿಗಳು ಬಂದಿಖಾನೆಯಲ್ಲಿ ಕೈದಿಗಳನ್ನು ತಿದ್ದುವ ಪರಿಯನ್ನು ಸ್ಪಷ್ಟಪಡಿಸುತ್ತದೆ.

೧೯೪೪ರಲ್ಲಿ ಲೋಹಿಯಾ ಅವರು ಲಾಹೋರ್ ಕೋಟೆಯ ಸೆರೆಮನೆಯಲ್ಲಿ ಬಂಧನದಲ್ಲಿದ್ದಾಗ, ಅವರನ್ನು ನಿರಂತರ ಹಿಂಸಿಸುತ್ತಿದ್ದ ಅಧಿಕಾರಿಗಳು, ಹಲವರು. ಆ ಹಿಂಸೆ ನಿಜವಾದ ಹಿಂಸೆಯ ರೂಪದಲ್ಲಿರಲಿಲ್ಲ. ಅದಕ್ಕಿಂತಲೂ ಭೀಕರವಾಗಿತ್ತು. ಸೆರೆಮನೆಯ ಅತ್ಯುನ್ನತ ಅಧಿಕಾರಿ ಲೋಹಿಯಾ ಜತೆ ತುಂಬ ಮೃದುವಾಗಿ ಮಾತನಾಡುತ್ತಿದ್ದ. ಅವರನ್ನು ಪ್ರಶಂಸಿಸುವಂತೆ ವ್ಯಂಗವಾಗಿ ಮಾತನಾಡಿ, ಅವರ ಮನಸ್ಸಿನ ಗಾಯದ ಮೇಲೆ ಬರೆ ಎಳೆಯುತ್ತಿದ್ದ. ಮತ್ತೊಬ್ಬ ಅಧಿಕಾರಿಯಂತೂ ಪೇದೆಯಿಂದ ಇನ್ಸ್‌ಪೆಕ್ಟರ್‌ನಾಗಿ ಬಡ್ತಿ ಪಡೆದು ಬಂದವ. ಆ ಅಧಿಕಾರಿ ಇತಿಹಾಸದಲ್ಲಿ ಎಂ.ಎ. ಮಾಡಿದ್ದ. ಆತನಿಗೆ ಇತಿಹಾಸದ ಜ್ಞಾನದ ಬಗ್ಗೆ ತುಂಬ ಗರ್ವವಿತ್ತು. ಒಂದು ದಿನ ಆತ, ಏಸುಕ್ರಿಸ್ತ ಇಂಗ್ಲಿಶ್ ಭಾಷೆಯಲ್ಲಿ ತುಂಬ ಚೆನ್ನಾಗಿ ಮಾತಾಡುತ್ತಿದ್ದ ಎಂದು ಲೋಹಿಯಾರಿಗೆ ಹೇಳಿದ. ನಿಜಕ್ಕೂ ಆತ ತುಂಬ ಹುಂಬ, ನಿರ್ದಯಿ ಹಾಗೂ ಕ್ರೂರಿಯಾಗಿದ್ದ. ಬಕ್ರೀದ್ ಹಬ್ಬದಂದು ಆತ ಅನಾನಸ್ ಹಣ್ಣೊಂದನ್ನು ತಂದು, ಆ ಹಣ್ಣನ್ನು ಲೋಹಿಯಾ ಅವರಿಗೆ ತೋರಿಸುತ್ತ 'ಇದನ್ನು ಎಂದಾದರೂ ತಿಂದಿದ್ದೀಯಾ?' ಎಂದು ಕೇಳಿದ. ಇದು ಆತನ ನಿರ್ದಯತೆಗೆ ಒಂದು ನಿದರ್ಶನ. ಕೆಲವೊಮ್ಮೆ ಆತ ಒಂದು ಕೋಳಿಯನ್ನು ಬಟ್ಟೆಯಲ್ಲಿ ಕಟ್ಟಿಕೊಂಡು ಬರುತ್ತಿದ್ದ. ಲೋಹಿಯಾರ ಎದುರೇ ಕೋಳಿಯನ್ನು ಕಟ್ಟಿದ್ದ ಮೂಟೆಯನ್ನು ಒಂದು ಗೂಟಕ್ಕೆ ನೇತುಹಾಕಿದ. ಲೋಹಿಯಾರಿಗೆ ಅದು ಅಸಭ್ಯತನ, ಕ್ರೌರ್ಯದ ದೃಶ್ಯವಾಗಿ ಕಂಡಿತ್ತು. ಗಂಟೆಗಟ್ಟಲೆ ಆ ಕೋಳಿ ಮೂಟೆಯಲ್ಲಿ ಉಸಿರುಗಟ್ಟಿ ಚಡಪಡಿಸುತ್ತಿತ್ತು ಹಾಗೂ ಒಮ್ಮೊಮ್ಮೆ ಕುಕೂಕೂ ಎಂದು ಕೂಗುತ್ತಿತ್ತು. ಸಂಜೆಯ ಹೊತ್ತಿಗೆ ಸಾವನ್ನು ಮನಸಾರೆ ಸ್ವಾಗತಿಸಿತೇನೋ ಎನ್ನುವಂತೆ ಶಾಶ್ವತವಾಗಿ ಮೌನವಾಗಿ ಬಿಟ್ಟಿತು. ಇಂಥ ಸಂಗತಿಗಳು ಲೋಹಿಯಾರ ಮೇಲೆ ತುಂಬಾ ಪರಿಣಾಮ ಬೀರುತ್ತಿದ್ದವು.[೧೪] ಲೋಹಿಯಾ ಅವರು ೧೯೪೪ರಲ್ಲಿ ಲಾಹೋರ್ ಕೋಟೆಯಲ್ಲಿ ಕಂಡಿರುವಂಥ ವಿಲಕ್ಷಣ ಮನಃಸ್ಥಿತಿಯುಳ್ಳ ಅಧಿಕಾರಿಗಳು ಇಂದೂ ನಮ್ಮ ಬಂದಿಖಾನೆಯಲ್ಲಿದ್ದಾರೆ.

ಕೈದಿಗಳಿಗೆ ಕಂಪ್ಯೂಟರ್ ಶಿಕ್ಷಣ ನೀಡುವುದನ್ನು ಕೆಲವು ಅಧಿಕಾರಿಗಳು ಇಷ್ಟಪಡುತ್ತಿಲ್ಲ. ಅದನ್ನು ಕೈದಿಗಳ ಎದುರೇ ವ್ಯಕ್ತಪಡಿಸುವುದು ತೀರಾ ಅಮಾನವೀಯವಾದುದು. ತರುಣ ಬಂದಿಖಾನೆಯಲ್ಲಿರುವ ಜೀವಾವಧಿ ತರುಣ ಕೈದಿಗಳನ್ನು ರೇಗಿಸುವಂತೆ ಒಬ್ಬ ಅಧಿಕಾರಿ 'ಇವುಗಳು ಇಲ್ಲಿ ಬಿಟ್ಟಿ ತಿಂದು ಕೊಬ್ಬುತ್ತಿವೆ. ಕಂಪ್ಯೂಟರ್-ಟಿ.ವಿ.ಗಳ ಬದಲಿಗೆ ಮಹಾನಿರೀಕ್ಷಕರಿಗೆ ನಾಲ್ಕು ರಾಗಿ ಬೀಸುವ ಕಲ್ಲುಗಳನ್ನು ಕಳುಹಿಸಿಕೊಡುವಂತೆ ಕೇಳಿದ್ದೇವೆ' ಎಂದು ಹೇಳಿರುವುದನ್ನು ಕ್ಷೇತ್ರಕಾರ್ಯದ ವೇಳೆ ದಾಖಲಿಸಿಕೊಳ್ಳಲಾಗಿದೆ. ದುಡಿಮೆಗೆ ಸೂಕ್ತ ಉದ್ಯಮಗಳನ್ನು ಕೈದಿಗಳಿಗೆ ಒದಗಿಸಬೇಕಾದುದು ಅಧಿಕಾರಿಗಳ ಕರ್ತವ್ಯವೇ ವಿನಾ, ಕೈದಿಗಳಿಗೆ ದುಡಿಮೆ ನೀಡದೆ 'ಬಿಟ್ಟಿ ಕೂಳು ತಿನ್ನುವವರು' ಎಂದು ಹಂಗಿಸುವ ಅಧಿಕಾರಿಗಳು, ಕೈದಿಗಳ ಮನಪರಿವರ್ತನೆಯನ್ನು ಅಥವ ಕೈದಿಗಳನ್ನು ತಿದ್ದುವ ಕೆಲಸವನ್ನು ಹೇಗೆ ನಿರ್ವಹಿಸಬಲ್ಲರು ಎಂಬುದನ್ನು ಅರ್ಥೈಸಬಹುದು.

ಬಂದಿಖಾನೆ ವ್ಯವಸ್ಥೆ ಎಂಬುದು ಸಮಾಜದ ಕನ್ನಡಿ ಇದ್ದಂತೆ. ಸಮಾಜದ ಪರಿಸ್ಥಿತಿಗನುಗುಣವಾಗಿ ಬಂದಿಖಾನೆಗಳು ಹಾಗೂ ಅಲ್ಲಿನ ಸಿಬ್ಬಂದಿಗಳಿರುವಾಗ, ಕೈದಿಗಳು ಮಾತ್ರವೇ ಸುಧಾರಿಸಬೇಕೆಂದು ನಿರೀಕ್ಷಿಸುವುದು ತಪ್ಪಾಗುತ್ತದೆ. ಬಂದಿಖಾನೆಯ ಸಿಬ್ಬಂದಿ, ಅಧಿಕಾರಿಗಳ ಮನಃಸ್ಥಿತಿಯಲ್ಲಿ ಸ್ವಲ್ಪವಾದರೂ ಬದಲಾವಣೆಯಾದರೆ, ಸರಕಾರ ಹಾಗೂ ಬಂದಿಖಾನೆ ಸುಧಾರಣಾ ಸಮಿತಿಗಳು ಬಯಸುವ ರೀತಿಯಲ್ಲಿ ಕೈದಿಗಳ ಮನಪರಿವರ್ತನೆ ನಡೆಯಬಹುದು - ಇಲ್ಲದಿದ್ದರೆ ನಡೆಯುವುದು 'ಮನಪರಿವರ್ತನಾ ಪ್ರಕ್ರಿಯೆ' ಒಂದು ಪ್ರಕ್ರಿಯೆಯಾಗಿ ಮಾತ್ರ.

❑ ❑

## ಅಡಿಟಿಪ್ಪಣಿ


೧. ಕಂಠೀರಾವ್, ೧೯೭೮. ಭಾರತೀಯ ನ್ಯಾಯಪದ್ಧತಿ. ಮೈಸೂರು, ಮೈಸೂರು ವಿಶ್ವವಿದ್ಯಾಲಯ. ಪುಟ ೨೩೨-೨೩೩.

೨. ಕರ್ನಾಟಕ ಸರಕಾರ, ರಾಜ್ಯ ಬಂದಿಖಾನೆ ಇಲಾಖೆ, ೧೯೯೬. ಕರ್ನಾಟಕ ಕಾರಾಗೃಹ ಕೈಪಿಡಿ ೧೯೭೮, ಸಂಪುಟ ೧-೨. ಬೆಂಗಳೂರು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ. ಪುಟ ೨೧೮-೨೧೯.

೩. ಕರ್ನಾಟಕ ಸರಕಾರ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ೧೯೮೭. ಭಾರತದ ಗ್ಯಾಸೆಟಿಯರ್ ಸಂಪುಟ ೪ : ಆಡಳಿತ ಮತ್ತು ಸಮಾಜ ಕಲ್ಯಾಣ. ಬೆಂಗಳೂರು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ. ಪುಟ ೪೬೮.

೪. ಗೋವಿಂದರಾಜು, ಕೆ., ೨೦೦೦. ಮನವಿಲ್ಲದವರ ಮಧ್ಯೆ. ಮೈಸೂರು, ಅಭಿರುಚಿ ಪ್ರಕಾಶನ. ಪುಟ ೨೦೧.

೫. Mulla, A.N., Chairman, 1983. Report of the All India Committee on Jail Reforms 1980-83 Vol. 1. New Delhi, Ministry of Home Affairs. Pp. xx.

೬. Nehru, Jawaharlal, 1934. Prisonland. Cited in India and World. Pp. 122.

೭. ಬನ್ನಂಜೆ, ಗೋವಿಂದಾಚಾರ್ಯ, ಅನು., ೨೦೦೦. ಆವೆಯ ಮಣ್ಣಿನ ಆಟದ ಬಂಡಿ : ಶೂದ್ರಕ ಕವಿಯ ಮೃಚ್ಛಕಟಿಕದ ರೂಪಾಂತರ. ಉಡುಪಿ, ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ.

೮. ಷೇಕ್ ಅಲಿ, ಬಿ., ಪ್ರ.ಸಂ., ೧೯೯೯. ಕರ್ನಾಟಕ ಚರಿತ್ರೆ ಸಂ ೫. ವಿದ್ಯಾರಣ್ಯ, ಕನ್ನಡ ವಿಶ್ವವಿದ್ಯಾಲಯ. ಪುಟ ೫೧೮.

೯. ಷೇಕ್ ಅಲಿ, ಬಿ., ೧೯೯೦. ಟಿಪ್ಪುಸುಲ್ತಾನ. ನವದೆಹಲಿ, ನ್ಯಾಷನಲ್ ಬುಕ್ ಟ್ರಸ್ಟ್. ಪುಟ ೯೬.

೧೦. ಪ್ರಜಾವಾಣಿ : ೨೦೦೦ ಜೂನ್ ೧೦ (ಸುದ್ದಿ)

೧೧. ಕನ್ನಡ ಪ್ರಭ : ೨೦೦೧ ಮಾರ್ಚ್ ೭ (ಸುದ್ದಿ)

೧೨. ವಿಜಯ ಕರ್ನಾಟಕ : ೨೦೦೨ ಜುಲೈ ೩ (ಸುದ್ದಿ)

೧೩. Kiran Bedi, 1999. Jail House Rocked. Any Help? : Putting Chocalate into Prisons. Times of India, November 26.

೧೪. ಓಂಕಾರ್ ಶರದ್, ೨೦೦೦. ಲೋಹಿಯಾ, ಅನು : ಹಸನ್ ನಯೀಂ ಸುರಕೋಡ್. ಬಳ್ಳಾರಿ, ಲೋಹಿಯಾ ಪ್ರಕಾಶನ. ಪುಟ ೧೦೧.

ಅಧ್ಯಾಯ ೫

# ಕರ್ನಾಟಕದ ಬಂದಿಖಾನೆಗಳಲ್ಲಿ ಜ್ಞಾನಸಂವಹನ ಮಾಧ್ಯಮಗಳ ಸ್ಥಿತಿ-ಗತಿ



ಇನ್ನೊಬ್ಬ ಕ್ರಾಂತಿಕಾರಿ ಸಂದರ್ಶಿಸುವ ಸಂದರ್ಭ ಇದು' ಎಂದು ಹೇಳಿ ಪುಸ್ತಕವನ್ನು ಇನ್ನಷ್ಟು ಗಳಿಗೆ ಓದಿಯೇ ನೇಣುಗಂಬದತ್ತ ಹೊರಡುತ್ತಾನೆ.[೨] ಸಾವಿನ ಹೊಸ್ತಿಲಲ್ಲಿ ನಿಂತಿದ್ದ ಭಗತ್ ಸಿಂಗನ ಜ್ಞಾನಲಾಲಸೆ, ಜ್ಞಾನದ ಅಮೂಲ್ಯತೆಗೊಂದು ಉತ್ತಮ ನಿದರ್ಶನ.

ಅದಕ್ಕೆಂದೇ ಫ್ರಾನ್ಸಿಸ್ ಬೇಕನ್ ಅಂದಿದ್ದಾನೆ - ಓದು ಮನುಷ್ಯನನ್ನು ಪರಿಪೂರ್ಣ ಮಾನವನನ್ನಾಗಿರಿಸುತ್ತದೆ, ಎಂದು. ಗ್ರಂಥವೆಂದೂ ನಿರ್ಜೀವ ವಸ್ತುವಲ್ಲ. ಅದು ಜ್ಞಾನತವನಿಧಿ, ಭಾವಾನುಭವ, ಆಲೋಚನೆಗಳ ಆಗರ. ಮಾನವ ತನ್ನ ಸಕಲ ಚಿಂತನೆ, ತರ್ಕ ಅನುಭಾವಗಳೆಲ್ಲ ಗಾಳಿಗೆ ತೂರಿ ಹೋಗದಂತೆ ಅವುಗಳಿಗೆ ಮೂರ್ತ ಸ್ವರೂಪ ನೀಡುವ ಮಾಧ್ಯಮ - ಗ್ರಂಥ. ಜ್ಞಾನ - ವಿವೇಕಗಳ ಬಾಗಿಲನ್ನು ತೆರೆಯುವ ಕೀಲಿಕೈ ಗ್ರಂಥಗಳ ಓದಿನಲ್ಲಿದೆ - ಎನ್ನುವುದಕ್ಕೆ ಕುವೆಂಪುರವರ ಗ್ರಂಥದ ಈ ಸಾಲನ್ನು ಉಲ್ಲೇಖಿಸಬಹುದು.

'...ಆ ಗ್ರಂಥಾಲಯದ ಬೀರುಗಳಲ್ಲಿ ಎತ್ತರೆತ್ತರದ ಅರೆಗಳಲ್ಲಿದ್ದ ಪುಸ್ತಕಗಳನ್ನು ಒಂದು ಚಕ್ರಕಾಲಿನ ಏಣಿಯ ಸಹಾಯದಿಂದ ನೋಡಬಹುದಿತ್ತು. ಹೀಗೆ ನೋಡುತ್ತಿದ್ದಾಗಲೇ ನನಗೆ ನನ್ನ ಜೀವನದ ದಿಕ್ಕನ್ನೇ ತಿರುಗಿಸಿ, ನನ್ನ ಬದುಕನ್ನೆಲ್ಲ ಮರ್ತ್ಯದಿಂದ ಅಮರ್ತ್ಯಕ್ಕೆ ಬೀಸಿದ ಭಗವತ್ ಕೃಪಾಹಸ್ತ ಸ್ವರೂಪದ ಶ್ರೀ ರಾಮಕೃಷ್ಣ - ವಿವೇಕಾನಂದ ವಿಷಯವಾದ ಗ್ರಂಥ 'ಕೃತಿಶ್ರೇಣಿ'ಯ ದರ್ಶನವಾದದ್ದು![೩] ವಿಚಾರದಾಹಿ ಕುವೆಂಪು ಅವರನ್ನು ಶ್ರೀ ರಾಮಕೃಷ್ಣ - ವಿವೇಕಾನಂದರ ವಿಚಾರಧಾರೆಯತ್ತ ಎಳೆದೊಯ್ದ ಈ ಗ್ರಂಥ ಅವರ ಬದುಕಿನ ದಿಕ್ಕು - ಯೋಚನಾ ದಿಕ್ಕನ್ನೇ ಬದಲಿಸಿತು.

## ೫

# ಕರ್ನಾಟಕದ ಬಂದಿಖಾನೆಗಳಲ್ಲಿ ಜ್ಞಾನ ಸಂವಹನ

## ಮಾಧ್ಯಮಗಳ ಸ್ಥಿತಿ - ಗತಿ

ಜ್ಞಾನಕ್ಕಿಂತ ಶ್ರೇಷ್ಠವಾದ ಪ್ರಬಲ ಶಕ್ತಿ ಬೇರೊಂದಿಲ್ಲ. ಮಾನವನ ಸಕಲ ಸಿದ್ಧಿಗಳಿಗೆ, ಸಾಧನೆಗೆ ಸುಜ್ಞಾನ - ವಿಜ್ಞಾನ - ಪ್ರಜ್ಞಾನಗಳೇ ಮೂಲ. ಜ್ಞಾನವೆಂಬ ದೀವಿಗೆಯಿಂದ ಅಜ್ಞಾನವೆಂಬ ಕತ್ತಲೆಯನ್ನು ಬೆಳಗುತ್ತಾ, ಮನುಷ್ಯನನ್ನು ಮೃಗತ್ವದಿಂದ ನರತ್ವಕ್ಕೆ, ನರತ್ವದಿಂದ ನಾರಾಯಣತ್ವಕ್ಕೆ ದಾರಿತೋರಿಸುವುದರಿಂದಲೇ ಅದು 'ಅನನ್ಯ ಶಕ್ತಿ' ಎನಿಸಿದೆ.

ಅಜ್ಞಾನದ ಕತ್ತಲು ದಾಸ್ಯಕೆ ದಾರಿಯಾದರೆ ಜ್ಞಾನದ ಬೆಳಕು ಸ್ವಾತಂತ್ರ್ಯಕೆ ದಾರಿ. ಮನುಷ್ಯನ ಸಕಲ ಶ್ರೇಯಸ್ಸಿಗೆ ಜ್ಞಾನವೇ ಮೂಲ, ಅದೇ ಸತ್ಯ, ಅದೇ ಮುಕ್ತಿ.[೧] ಈ ಜ್ಞಾನವನ್ನು ಪಡೆಯುವಂತಹ ದಾರಿ ಹಲವು. ಕಣ್ಣಿನಿಂದ ನೋಡಿ, ಕವಿಯಿಂದ ಕೇಳಿಯೂ ಜ್ಞಾನವನ್ನು ಪಡೆಯಬಹುದು. ಆದರೆ ಆ ಜ್ಞಾನ ಪರಿಮಿತವಾಗಿರುತ್ತದೆ. ಅಧ್ಯಯನ, ಚಿಂತನೆ, ತರ್ಕ, ಲೋಕವೀಕ್ಷಣೆ, ಸಂಶೋಧನೆ, ಅನುಭವ ಮತ್ತು ಅನುಭಾವ ಮುಂತಾದ ವಿಧಾನಗಳಿಂದ ವಿಪುಲ ಜ್ಞಾನಾರ್ಜನೆ ಸಾಧ್ಯ. 'ಗ್ರಂಥಗಳ ಅಧ್ಯಯನ' ಜ್ಞಾನಾರ್ಜನೆಯ ಪ್ರಮುಖ ಸಾಧನ. ಭಗತ್ ಸಿಂಗ್ ನೇಣುಗಂಬಕ್ಕೆ ಕೊರಳೊಡ್ಡಲು ಹೊರಡುವ ಕೊನೆಯ ಕ್ಷಣದ ವರೆಗೂ ಆತ ಗ್ರಂಥಾಧ್ಯಯನದಲ್ಲಿ ತಲ್ಲೀನನಾಗಿದ್ದ. ನೇಣುಗಂಬಕ್ಕೆ ಏರುವ ಎರಡು ಗಂಟೆಗಳ ಮುಂಚೆ ಆತನ ವಕೀಲ ಭಗತ್‌ನ ಆಸೆಯಂತೆ, ಲೆನಿನ್‌ನ ಜೀವನ ಚರಿತ್ರೆ ಪುಸ್ತಕವನ್ನು ತಂದುಕೊಟ್ಟಾಗ ಅದನ್ನಾತ ಆತುರದಿಂದ ಓದುತ್ತಿರುವಷ್ಟರಲ್ಲಿ ಜೈಲಿನ ಅಧಿಕಾರಿ ಬಂದು 'ಗಲ್ಲಿಗೇರಿಸಲು ಆಜ್ಞೆ ಬಂದಿದೆ ಕೂಡಲೇ ತಯಾರಾಗು' ಎಂದು ಒತ್ತಾಯಿಸುತ್ತಾನೆ. ಬಲಗೈಯಲ್ಲಿ ಪುಸ್ತಕ ಹಿಡಿದಿದ್ದ ಭಗತ್ ತಲೆಎತ್ತದೆ ಎಡಗೈಯಿಂದ ಸಂಜ್ಞೆ ಮಾಡಿ 'ಸ್ವಲ್ಪ ನಿಧಾನಿಸು, ನಾನೀಗ ಈ ಪುಸ್ತಕ ಓದುತ್ತಿದ್ದೇನೆ. ಒಬ್ಬ ಕ್ರಾಂತಿಕಾರಿಯನ್ನು



ಇನ್ನೊಬ್ಬ ಕ್ರಾಂತಿಕಾರಿ ಸಂದರ್ಶಿಸುವ ಸಂದರ್ಭ ಇದು' ಎಂದು ಹೇಳಿ ಪುಸ್ತಕವನ್ನು ಇನ್ನಷ್ಟು ಗಳಿಗೆ ಓದಿಯೇ ನೇಣುಗಂಬದತ್ತ ಹೊರಡುತ್ತಾನೆ.[೨] ಸಾವಿನ ಹೊಸ್ತಿಲಲ್ಲಿ ನಿಂತಿದ್ದ ಭಗತ್ ಸಿಂಗನ ಜ್ಞಾನಲಾಲಸೆ, ಜ್ಞಾನದ ಅಮೂಲ್ಯತೆಗೊಂದು ಉತ್ತಮ ನಿದರ್ಶನ.

ಅದಕ್ಕೆಂದೇ ಪ್ರಾನ್ಸಿಸ್ ಬೇಕನ್ ಅಂದಿದ್ದಾನೆ - ಓದು ಮನುಷ್ಯನನ್ನು ಪರಿಪೂರ್ಣ ಮಾನವನನ್ನಾಗಿರಿಸುತ್ತದೆ, ಎಂದು. ಗ್ರಂಥವೆಂದೂ ನಿರ್ಜೀವ ವಸ್ತುವಲ್ಲ. ಅದು ಜ್ಞಾನತವನಿಧಿ, ಭಾವಾನುಭವ, ಆಲೋಚನೆಗಳ ಆಗರ. ಮಾನವ ತನ್ನ ಸಕಲ ಚಿಂತನೆ, ತರ್ಕ ಅನುಭಾವಗಳೆಲ್ಲ ಗಾಳಿಗೆ ತೂರಿ ಹೋಗದಂತೆ ಅವುಗಳಿಗೆ ಮೂರ್ತ ಸ್ವರೂಪ ನೀಡುವ ಮಾಧ್ಯಮ - ಗ್ರಂಥ. ಜ್ಞಾನ - ವಿವೇಕಗಳ ಬಾಗಿಲನ್ನು ತೆರೆಯುವ ಕೀಲಿಕೈ ಗ್ರಂಥಗಳ ಓದಿನಲ್ಲಿದೆ - ಎನ್ನುವುದಕ್ಕೆ ಕುವೆಂಪುರವರ ಗ್ರಂಥದ ಈ ಸಾಲನ್ನು ಉಲ್ಲೇಖಿಸಬಹುದು.

'...ಆ ಗ್ರಂಥಾಲಯದ ಬೀರುಗಳಲ್ಲಿ ಎತ್ತರೆತ್ತರದ ಅರೆಗಳಲ್ಲಿದ್ದ ಪುಸ್ತಕಗಳನ್ನು ಒಂದು ಚಕ್ರಕಾಲಿನ ಏಣಿಯ ಸಹಾಯದಿಂದ ನೋಡಬಹುದಿತ್ತು. ಹೀಗೆ ನೋಡುತ್ತಿದ್ದಾಗಲೇ ನನಗೆ ನನ್ನ ಜೀವನದ ದಿಕ್ಕನ್ನೇ ತಿರುಗಿಸಿ, ನನ್ನ ಬದುಕನ್ನೆಲ್ಲ ಮರ್ತ್ಯದಿಂದ ಅಮರ್ತ್ಯಕ್ಕೆ ಬೀಸಿದ ಭಗವತ್ ಕೃಪಾಹಸ್ತ ಸ್ವರೂಪದ ಶ್ರೀ ರಾಮಕೃಷ್ಣ - ವಿವೇಕಾನಂದ ವಿಷಯವಾದ ಗ್ರಂಥ 'ಕೃತಿಶ್ರೇಣಿ'ಯ ದರ್ಶನವಾದದ್ದು! [೩] ವಿಚಾರದಾಹಿ ಕುವೆಂಪು ಅವರನ್ನು ಶ್ರೀ ರಾಮಕೃಷ್ಣ - ವಿವೇಕಾನಂದರ ವಿಚಾರಧಾರೆಯತ್ತ ಎಳೆದೊಯ್ದ ಈ ಗ್ರಂಥ ಅವರ ಬದುಕಿನ ದಿಕ್ಕು - ಯೋಚನಾ ದಿಕ್ಕನ್ನೇ ಬದಲಿಸಿತು.

ಪುಸ್ತಕ ಎಂದಿಗೂ ಜಡವಸ್ತುವಲ್ಲ. ಅದು ಚಿಂತನೆಗೆ ಪುಷ್ಟಿಕೊಡುವಂತಾದ್ದು. ತರ್ಕಕ್ಕೆ ಪ್ರಚೋದನೆ ನೀಡಿ ಪ್ರಖರಗೊಳಿಸುವಂಥದ್ದು. ತನ್ನ ವಿಚಾರಗಳಿಂದ ಇಡೀಯ ಮಾನವ ಕುಲದ ಮೇಲೆ ಪರಿಣಾಮ ಬೀರುವ ಗ್ರಂಥಗಳು, ಮನುಷ್ಯನ ಚಿಂತನೆಯನ್ನೇ ಬದಲಿಸಬಲ್ಲಷ್ಟು ಪ್ರಬಲವಾದವು. ಯಾವ ಸದ್ದು ಗದ್ದಲ ಆರ್ಭಟಗಳಿಲ್ಲದೆ ಮನುಷ್ಯನನ್ನು - ಜಗತ್ತನ್ನು ಬದಲಿಸಬಲ್ಲ ಈ ಪುಸ್ತಕಗಳನ್ನು ಮುಂದಿನ ಪೀಳಿಗೆಗಾಗಿ ಸಂಪಾದಿಸಿ ಸಂಗ್ರಹಿಸುವ ಗ್ರಂಥಾಲಯಗಳು ಆಯಾ ದೇಶದ ಸಂಸ್ಕೃತಿಯ ಪಂಜುಗಳೆನಿಸಿವೆ. ಗ್ರಂಥಾಲಯಗಳು ಜ್ಞಾನವನ್ನು ಸಂವಹಿಸುವ ಮೂಲಕ ಜ್ಞಾನವಿಕಾಸಕ್ಕೆ ಸ್ಫೂರ್ತಿಕೇಂದ್ರವೆನಿಸಿವೆ.

'ಜ್ಞಾನ ಸಂವಹನೆ'ಯ ಪರಿಕಲ್ಪನೆಯಲ್ಲಿ ಗ್ರಂಥಾಲಯವೆಂಬ ವ್ಯವಸ್ಥೆಯನ್ನು ಜ್ಞಾನ ಸಂವಹನ ಮಾಧ್ಯಮವೆಂದು ಪರಿಗಣಿಸಲಾಗಿದೆ. ಇದು ಜ್ಞಾನವನ್ನು ಏಕ ವ್ಯಕ್ತಿಗೆ ಅಥವಾ ಗುಂಪಿಗೆ ಸಂವಹನ ಮಾಡುವ ಪಾರಂಪರಿಕ ಮಾಧ್ಯಮ. ಇಲ್ಲಿ ಸಂವಹನಗೊಳ್ಳುವ ಜ್ಞಾನ ಲಿಖಿತ - ಮುದ್ರಿತ ಗ್ರಂಥ ರೂಪದಲ್ಲಿರಬಹುದು. ಅಥವ ನಕ್ಷೆ, ಛಾಯಾಚಿತ್ರ, ಚಿತ್ರಸಂಪುಟ ರೂಪದಲ್ಲಿರಬಹುದು. ಅಥವ ವಿಜ್ಞಾನ ಮತ್ತು ತಂತ್ರಜ್ಞಾನದ ಆವಿಷ್ಕಾರವಾದ ಮೈಕ್ರೊ ಫಿಲ್ಮ್, ಮೈಕ್ರೊ ಫಿಶ್, ಕ್ಯಾಸೆಟ್, ಫ್ಲಾಪಿ, ಡಿಸ್ಕ್ ರೂಪದಲ್ಲಿರಬಹುದು. ಈ ಪಾರಂಪರಿಕ ಜ್ಞಾನ ಸಂವಹನ ಮಾಧ್ಯಮ, ಏಕಕಾಲದಲ್ಲಿ ಅನೇಕ ಮಂದಿಗೆ ಜ್ಞಾನವನ್ನು ತಲುಪಿಸುವುದಕ್ಕಾಗಿ ವಿದ್ಯುನ್ಮಾನ ತಾಂತ್ರಿಕ ಸಾಧನವನ್ನು ಸಂವಹನೆಯ ಕಾಲದಲ್ಲಿ ಬಳಸಿಕೊಳ್ಳಬಹುದು.

ಜ್ಞಾನ ಸಂವಹನ ಪ್ರಕ್ರಿಯೆಯಲ್ಲಿ ಗ್ರಂಥಾಲಯ ಪ್ರಬಲ 'ಪಾರಂಪರಿಕ ಸಂವಹನ ಮಾಧ್ಯಮ' ಎಂದು ಪರಿಗಣಿಸಲ್ಪಟ್ಟಂತೆ, ನಾಟಕ, ಉಪನ್ಯಾಸ ಮತ್ತು ಶಿಕ್ಷಣವೂ ಅತ್ಯಂತ ಪರಿಣಾಮಕಾರಿ ಪಾರಂಪರಿಕ ಜ್ಞಾನ ಸಂವಹನ ಮಾಧ್ಯಮಗಳೆಂದು ಪರಿಗಣಿಸಲ್ಪಟ್ಟಿದೆ. ಆತ್ಮವನ್ನು ಸಂಸ್ಕರಿಸಬಲ್ಲ, ಚೈತನ್ಯವನ್ನು ಪುಟಿಗೊಳಿಸಬಲ್ಲ, ಮನಸ್ಸನ್ನು ಹಸನುಗೊಳಿಸಿ ಉತ್ಸಾಹವನ್ನು ಚಿಗುರಿಸಬಲ್ಲ ಶಕ್ತಿ ಈ ಮಾಧ್ಯಮಗಳಿಗಿರುವುದರಿಂದ ಇವು ಆಧುನಿಕ ಜಗತ್ತಿನಲ್ಲಿ ಇಂದಿಗೂ ಜೀವಂತವಾಗಿದ್ದು ಸರ್ವರ ಮನ್ನಣೆ ಪಡೆದಿದೆ.

ಇವುಗಳ ಜತೆ ಇತರ ಜ್ಞಾನ ಸಂವಹನ ಸಮೂಹ ಮಾಧ್ಯಮಗಳಾದ ಚಲನಚಿತ್ರ, ಆಕಾಶವಾಣಿ, ಕಂಪ್ಯೂಟರ್ ನೆಟ್‌ವರ್ಕ್, ದೂರದರ್ಶನಗಳು ಕೂಡಾ ವಿದ್ಯುನ್ಮಾನ, ವಿದ್ಯುನ್ಮಾನೇತರ ಸಾಧನಗಳಾದ ಟಿ.ವಿ. ರೇಡಿಯೋ, ಕಂಪ್ಯೂಟರ್, ಪ್ರಾಜೆಕ್ಟರ್ ಇತ್ಯಾದಿಗಳನ್ನು ಬಳಸಿ ಜ್ಞಾನಸಂವಹನಾ ಕ್ರಿಯೆಯನ್ನು ನಡೆಸುವ ಮೂಲಕ ಏಕ ಕಾಲದಲ್ಲೇ, ಭೌಗೋಳಿಕ ಎಲ್ಲೆಯನ್ನು ಲೆಕ್ಕಿಸದೆ ಜ್ಞಾನದಾಹಿಗಳ ಜ್ಞಾನದ ಹಸಿವನ್ನು ಇಂಗಿಸುತ್ತಿವೆ.

ಒಟ್ಟಿನಲ್ಲಿ ಮನುಕುಲವನ್ನು ಬೆಳಗಬಲ್ಲ ಅದ್ಭುತ ಶಕ್ತಿಯುಳ್ಳ, ಜ್ಞಾನ ಸಂವಹನ ಮಾಧ್ಯಮಗಳೆನಿಸಿರುವ ಈ ಜ್ಞಾನಮೂಲಗಳು ಇದೀಗ 'ಹೃದಯಹೀನ - ನಿರ್ಲಕ್ಷಿತ ಜಗತ್ತು' ಎಂದೇ ಅಪಖ್ಯಾತಿಗೊಳಗಾದ ಬಂದಿಖಾನೆಗಳ 'ಅಂಧಕಾರ'ವನ್ನು ತೊಡೆಯಬಲ್ಲದು ಎಂಬ ದೃಢ ವಿಶ್ವಾಸ ಹಾಗೂ ನಂಬಿಕೆಯಿಂದ ಆ ಜಗತ್ತಿಗೂ ಈ ಜ್ಞಾನಸಂವಹನ ಮಾಧ್ಯಮಗಳನ್ನು ಪರಿಚಯಿಸಲಾಗಿದೆ. ಸದ್ಯ ಬಂದಿಖಾನೆಯೊಳಗೆ ಪ್ರಚಲಿತವಿರುವ ಜ್ಞಾನ ಸಂವಹನ ಮಾಧ್ಯಮಗಳನ್ನು ಮುಖ್ಯವಾಗಿ ಹೀಗೆ ವರ್ಗೀಕರಿಸಬಹುದು.

| ೧. ಪಾರಂಪರಿಕ ಜ್ಞಾನ ಸಂವಹನ ಮಾಧ್ಯಮಗಳು | ೨. ಆಧುನಿಕ ಜ್ಞಾನ ಸಂವಹನ ಮಾಧ್ಯಮಗಳು |
|---|---|
| ೧. ಗ್ರಂಥಾಲಯ ವ್ಯವಸ್ಥೆ | ೧. ದೂರದರ್ಶನ |
| ೨. ಶಿಕ್ಷಣ (ಸಾಕ್ಷರತಾ ಸಾಂಪ್ರದಾಯಿಕ ಶಿಕ್ಷಣ, ವೃತ್ತಿಪರ ಶಿಕ್ಷಣ) | ೨. ಆಕಾಶವಾಣಿ |
| ೩. ಕೃಷಿ ಶಿಕ್ಷಣ | ೩. ಕಂಪ್ಯೂಟರ್ ನೆಟ್‌ವರ್ಕ್ |
| ೪. ನಾಟಕ - ಕಲಾಶಿಬಿರ | |

ಅಕ್ಷರ ಜ್ಞಾನವೇ ಅಪರೂಪವಾಗಿದ್ದ ಅಥವ ಅದು ಮೇಲ್ವರ್ಗಕ್ಕಷ್ಟೇ ಸೀಮಿತವಾಗಿದ್ದ ಕಾಲದಲ್ಲೂ ಜ್ಞಾನದಾಹಕ್ಕಾಗಿ, ಮನರಂಜನೆಗಾಗಿ, ದುಡಿಮೆಯೆ ಮೂಲವಾಗಿ ಪಾರಂಪರಿಕವಾಗಿ ಬಂದ ಜ್ಞಾನಸಂವಹನ ಮಾಧ್ಯಮಗಳೆಂದರೆ, ಅನೇಕ ವೃತ್ತಿ ಕೆಲಸಗಳು, ಕೃಷಿ ದುಡಿಮೆ, ರಂಗಭೂಮಿ (ನಾಟಕ), ಶಿಕ್ಷಣ ಹಾಗೂ ಸಾಂಪ್ರದಾಯಿಕ ಗ್ರಂಥಾಲಯಗಳು. ಆಧುನಿಕತೆಯ ಗಂಧವೇ ಇಲ್ಲದ ಕಾಲದಲ್ಲೂ ಈ ಪಾರಂಪರಿಕ ಜ್ಞಾನ ಸಂವಹನ ಮಾಧ್ಯಮಗಳು ಸೀಮಿತ ಸಮೂಹಕ್ಕಾದರೂ ಜ್ಞಾನಸಂವಹನ ಕ್ರಿಯೆಯನ್ನು ಯಶಸ್ವಿಯಾಗಿ ನಡೆಸುತ್ತಿದ್ದವು. ಇಂದಿಗೂ ಈ ಆಧುನಿಕ ಸಮಾಜದಲ್ಲಿಆಧುನಿಕ ಜ್ಞಾನಸಂವಹನಾ ಮಾಧ್ಯಮಗಳು ವಿಜೃಂಭಿಸುತ್ತಿರುವಾಗಲೂ ಈ ಮಾಧ್ಯಮಗಳು ಅಷ್ಟೇ ಪರಿಣಾಮಕಾರಿಯಾಗಿ ಜ್ಞಾನಸಂವಹನಾ ಕ್ರಿಯೆಯನ್ನು ನಡೆಸುತ್ತಿವೆ.

## ೧. ಪಾರಂಪರಿಕ ಜ್ಞಾನಸಂವಹನ ಮಾಧ್ಯಮಗಳು

ರಾಜ್ಯದ ಬಂದಿಖಾನೆಗಳಲ್ಲಿ ಲಭ್ಯವಿರುವ ಪಾರಂಪರಿಕ ಜ್ಞಾನಸಂವಹನ ಮಾಧ್ಯಮಗಳು ನಾಲ್ಕು.

೧. ಗ್ರಂಥಾಲಯ ವ್ಯವಸ್ಥೆ

೨. ಶಿಕ್ಷಣ (ಸಾಕ್ಷರತಾ ಸಾಂಪ್ರದಾಯಿಕ ಶಿಕ್ಷಣ, ವೃತ್ತಿಪರ ಶಿಕ್ಷಣ)

೩. ಕೃಷಿ ಶಿಕ್ಷಣ

೪. ನಾಟಕ - ಕಲಾಶಿಬಿರ

### ೧.೧ ಗ್ರಂಥಾಲಯ ವ್ಯವಸ್ಥೆ

'ಬಂದಿಖಾನೆ ಆಡಳಿತದ ಮಾನವೀಕರಣ ಮತ್ತು ಸುಧಾರಣಾ ಸಮಿತಿ'ಗಳು ಹತ್ತೊಂಬತ್ತನೇ ಶತಮಾನದ ಮಧ್ಯದಲ್ಲೇ ಬಂದಿಖಾನೆಯೊಳಗೆ ಗ್ರಂಥಾಲಯವನ್ನು ಹಾಗೂ ಶಿಕ್ಷಣವನ್ನು ಕೊಂಡೊಯ್ಯಬೇಕೆಂದು ಸಲಹೆಯನ್ನಿತ್ತಿದ್ದವು. ಆಗಿನ ಸಾಮಾಜಿಕ ಮತ್ತು ರಾಜಕೀಯ ಪರಿಸ್ಥಿತಿಯಲ್ಲಿ ಬಂದಿಖಾನೆಯೊಳಗಿನ ಬದುಕು ಅಷ್ಟೇ ದುರ್ಭರವಾಗಿತ್ತು - ಯಾತನಾಮಯವಾಗಿತ್ತು. ಎಲ್ಲೆಲ್ಲೂ ಕೈದಿಗಳ ಮೇಲೆ ನಡೆಯುತ್ತಿದ್ದ ದಬ್ಬಾಳಿಕೆ, ಕ್ರೌರ್ಯಕ್ಕೇ ಯಾವುದೇ ಅಡೆತಡೆಯಿರಲಿಲ್ಲ. ಬಂಧನದ ಬದುಕು ಭಾರತೀಯ ಕೈದಿಗಳದ್ದು - ಚಾಟಿ, ಬಂದೂಕುಗಳು ಬ್ರಿಟಿಷ್ ಅಧಿಕಾರಿಗಳದ್ದು ಎಂಬಂಥ ಪರಿಸ್ಥಿತಿಯಲ್ಲಿ ಜ್ಞಾನವೆಂಬುದು ಕೈದಿಗಳಿಗೆ ಸೋಂಕುತ್ತಿರಲಿಲ್ಲ. ಅಂತಾ ಸಂಕಷ್ಟ ಪರಿಸ್ಥಿತಿಯಲ್ಲಿ ಭಾರತೀಯ ದಂಡ ಸಂಹಿತೆಯ ಕರ್ತೃವೆನಿಸಿದ್ದ ಲಾರ್ಡ್ ಮೆಕಾಲೆಯಂತಾ ಅಂತಃ

ಕರಣಿ ನ್ಯಾಯಶಾಸ್ತ್ರಜ್ಞ ಬಂದಿಖಾನೆಯೊಳಗೆ ಓದು - ಶಿಕ್ಷಣವನ್ನು ಪರಿಚಯಿಸುವ ಅನಿವಾರ್ಯ - ಅಗತ್ಯವಿದೆ ಎಂದು ೧೮೩೫ ರಲ್ಲೇ ಪ್ರತಿಪಾದಿಸಿದ್ದ. ಭಾರತೀಯ ಬಂದಿಖಾನೆಗಳೊಳಗಿನ ಸ್ಥಿತಿ - ಗತಿಗಳನ್ನು ತಿಳಿದುಕೊಳ್ಳುವುದಕ್ಕಾಗಿ ೧೮೩೫ ರಲ್ಲಿ ಆತ ಕಲ್ಕತ್ತದ ಆಲೀಪುರ ಬಂದಿಖಾನೆಗೆ ಭೇಟಿಕೊಟ್ಟಾಗ, ಅಲ್ಲಿನ ಅತ್ಯಂತ ಹೀನ, ಅಮಾನವೀಯ ದುಸ್ಥಿತಿಯನ್ನು ಕಂಡು 'This is 'Shocking to humanity' ಹಾಗೂ 'A grate dishonour on our goverment' ಎಂದು ಪ್ರತಿಕ್ರಿಯಿಸಿ, ಅಂದಿನ ಕಂಪನಿ ಸರಕಾರದ ಅಧಿಪತ್ಯ ವಹಿಸಿದ್ದ ಗವರ್ನರ್ ಜನರಲ್ ವಿಲಿಯಂ ಬೆಂಟಿಂಕನಲ್ಲಿ, ತಕ್ಷಣವೇ ಸಲಹಾ ಸಮಿತಿಯೊಂದನ್ನು ನೇಮಿಸುವಂತೆ ಸಲಹೆ ಮಾಡಿದ್ದ. ಮೆಕಾಲೆಯ ಸಲಹೆಯಂತೆ ಆತನ ಸದಸ್ಯತ್ವದಲ್ಲೇ ನೇಮಕವಾದ ಆ ಸಮಿತಿಯು, ಸನ್ನಡತೆಯ ಕೈದಿಗಳಿಗೆ ಧಾರ್ಮಿಕ ಹಾಗೂ ನೈತಿಕ ಬೋಧನೆ ನೀಡುವುದರ ಜತೆಗೆ ಓದು - ಶಿಕ್ಷಣದ ವ್ಯವಸ್ಥೆ ಮಾಡಬೇಕೆಂದು ಶಿಫಾರಸು ಮಾಡಿತು. ಇಲ್ಲಿಂದಲೇ ಬಂದಿಖಾನೆಗಳೊಳಗೆ ಜ್ಞಾನ ಸೆಲೆ ಸಣ್ಣದಾಗಿ ಹರಿಯತೊಡಗಿದ್ದು.

೧೯೧೯ - ೨೦ ರಲ್ಲಿ ಮತ್ತೆ ನೇಮಕಗೊಂಡ 'ಭಾರತೀಯ ಬಂದಿಖಾನೆಗಳ ಸಮಿತಿ ೧೯೧೯ - ೨೦' ಕೂಡಾ ಲಾರ್ಡ್ ಮೆಕಾಲೆ ಮಾಡಿದ್ದಂತಹ ಕೈದಿ ಸುಧಾರಣಾ ಶಿಫಾರಸುಗಳನ್ನು ಮಾಡಿದ ಫಲವಾಗಿ ದೇಶದ ಎಲ್ಲ ಬಂದಿಖಾನೆಗಳಲ್ಲಿ 'ಹೊಟ್ಟೆಯ ಹಸಿವು ತಣಿಸುವಂತೆ ಜ್ಞಾನದ ಹಸಿವನ್ನು ತಣಿಸಬೇಕು' ಎಂಬ ಎಚ್ಚರ ಕೆಲವು ಅಧಿಕಾರಿಗಳಲ್ಲಿ ಹುಟ್ಟಿತು. ಆ ಸಂದರ್ಭದಲ್ಲಿ ಮೈಸೂರು ಪ್ರಾಂತ್ಯದ ಬಂದಿಖಾನೆಗಳಲ್ಲೂ ಹೊಸ ಸುಧಾರಣಾ ಗಾಳಿ ತೆಳುವಾಗಿ ಬೀಸತೊಡಗಿತು. ಬಂದಿಖಾನೆಗಳೊಳಗೆ ಗ್ರಂಥಾಲಯವೆಂಬ ವ್ಯವಸ್ಥೆ ಸಣ್ಣದಾಗಿ ತಲೆ ಎತ್ತಿದ್ದು ಈ ಸುಧಾರಣಾ ಕಾಲದಲ್ಲೆ.

ಮೈಸೂರು ಪ್ರಾಂತ್ಯದ ಬಂದಿಖಾನೆಗಳಲ್ಲಿ ೧೮೮೧ ರ ಹೊತ್ತಿಗೇ ಕೈದಿಗಳಿಗೆ ಶಿಕ್ಷಣ ಹಾಗೂ ಹಿಂದಿ ತರಗತಿಗಳ ವ್ಯವಸ್ಥೆಯಿದ್ದು, ೧೯೧೦ - ೧೪ ರ ಕಾಲಕ್ಕೆ ಧಾರ್ಮಿಕ ಹಾಗೂ ನೀತಿ ವಿಷಯಗಳ ಬಗ್ಗೆ ಪ್ರವಚನಗಳನ್ನು ನೀಡಲಾಗುತ್ತಿತ್ತು, ಅಲ್ಲದೆ ಬಂಧಿಗಳ ಅನುಕೂಲಕ್ಕಾಗಿ ಸಾಧಾರಣ ಮಟ್ಟದ ಉತ್ತಮ ಗ್ರಂಥಾಲಯ ವ್ಯವಸ್ಥೆಯೂ ಅಲ್ಲಿತ್ತು. ಉತ್ತಮ ಗುಣನಡತೆ ತೋರುವ ಆಯ್ದ ಕೈದಿಗಳಿಗೆ ದಿನಕ್ಕೆ ಒಂದು ಗಂಟೆ ಪುಸ್ತಕ ಓದಲು ಅವಕಾಶ ಕೊಡಲಾಗುತ್ತಿತ್ತು - ಎಂಬ ಉಲ್ಲೇಖ ಕರ್ನಾಟಕ ರಾಜ್ಯ ಗಝೆಟಿಯರ್ ಭಾಗ ೨ ಮತ್ತು ಮತ್ತು ಮೈಸೂರು ರಾಜ್ಯ ಗಝೆಟಿಯರ್‌ನಲ್ಲಿದೆ.

ಆದರೆ ಈ ವ್ಯವಸ್ಥೆ, ಆ ಕಾಲದಲ್ಲಿ ಹಂಚಿ ಹರಿದು ಹೋಗಿ ಬೇರೆ ಪ್ರಾಂತ್ಯ/ ರಾಜ್ಯಗಳ ಜತೆ ಸೇರಿಕೊಂಡಿದ್ದ ಎಲ್ಲಾ ಜಿಲ್ಲೆಗಳಲ್ಲಿ ಇರಲಿಲ್ಲ. ಕಾರಣ ೧೯೩೫ ರ ಭಾರತ ಸರಕಾರದ ಅಧಿನಿಯಮ ಘೋಷಣೆಯನ್ವಯ, 'ಬಂದಿಖಾನೆ ಆಡಳಿತ' ವಿಷಯ ಆಯಾ ರಾಜ್ಯಗಳಿಗೆ ಸಂಬಂಧಿಸಿದ ವಿಷಯವಾಗಿದ್ದರಿಂದ, ಕೇಂದ್ರ ಸರಕಾರದಿಂದ ನೇಮಕವಾದ ಯಾವುದೇ ಸಮಿತಿಯ ಶಿಫಾರಸುಗಳನ್ನು, ಕಾಯಿದೆಗಳನ್ನು ಕಟ್ಟುನಿಟ್ಟಾಗಿ ಜಾರಿಗೆ ತರಲು ಅವು ಆಸಕ್ತಿ ತೋರಲಿಲ್ಲ ಹಾಗೂ ಬಂದಿಖಾನೆಗಳ ಆಡಳಿತ ಕ್ಷೇತ್ರಕ್ಕೆ ಕನಿಷ್ಠ ಆದ್ಯತೆ ನೀಡಿ ರಾಜ್ಯಕ್ಕೆ ಆದಾಯ ತರುವ ಬೇರೆ ಕ್ಷೇತ್ರಕ್ಕೆ ಹೆಚ್ಚಿನ ಆದ್ಯತೆ ನೀಡತೊಡಗಿದ್ದವು.[೪]

ಆದರೆ ಈ ಸ್ಥಿತಿ - ಈ ನಿರ್ಲಕ್ಷ ಹೆಚ್ಚುಕಾಲ ಮುಂದುವರಿಯಲಿಲ್ಲ. ಆಗಲೇ ಸ್ವಾತಂತ್ರ್ಯ ಸಮರದ ಜ್ವಾಲೆ ದೇಶವಿಡೀ ಹಬ್ಬತೊಡಗಿತ್ತು. ಸಂಗ್ರಾಮದ ಚುಕ್ಕಾಣಿ ಹಿಡಿದ ಭಾರತೀಯ ಧುರೀಣರು ಕೈದಿಗಳಾಗಿ ಬಂದಿಖಾನೆಯ ದು:ಸ್ಥಿತಿಯನ್ನು ಸ್ವತಾ ಅನುಭವಿಸುವಂತಾದರು, ಕೈದಿಗಳ ದುಃಖವನ್ನು ಕಾಣುವಂತಾದರು.

ಪಂಡಿತ ಜವಹರಲಾಲ್ ನೆಹರೂ ಅವರು ೧೯೩೦ ರಲ್ಲಿ ನೈನಿತಾಲ್ ಬಂದಿಖಾನೆಯಲ್ಲಿದ್ದಾಗ ಬರೆದ ತಮ್ಮ ಆತ್ಮಚರಿತ್ರೆಯಲ್ಲಿ ಹೇಳಿಕೊಂಡಂತೆ : 'ನಾನು ಕಂಡ ಅತ್ಯಂತ ದುಃಖದ ಸನ್ನಿವೇಶವೆಂದರೆ, ಇಲ್ಲಿನ ಬಂದಿಖಾನೆಯಲ್ಲಿ ಕೊಳೆಯುತ್ತಿರುವ ಅಪಾರ ಸಂಖ್ಯೆಯ ಹದಿಹರೆಯದ ಚುರುಕು ಹುಡುಗರು! ಇವರ ವ್ಯಕ್ತಿತ್ವ ಸುಧಾರಿಸಲು ಅವಕಾಶ ಕೊಟ್ಟಲ್ಲಿ ಇವರನ್ನೆಲ್ಲ ದೇಶದ ಉತ್ತಮ ಪ್ರಜೆಗಳನ್ನಾಗಿ ರೂಪಿಸಬಹುದು ಎನ್ನುವುದರಲ್ಲಿ ಅನುಮಾನವೇ ಇಲ್ಲ. ದಿನಗಳು ಕಳೆದಂತೆ ನಿಧಾನಕ್ಕೆ ಯಾವುದೋ ಒತ್ತಡಕ್ಕೆ ಒಳಗಾಗಿ ಅವರಿಗೂ ಓದು - ಬರೆಯುವ ಕಲಿಕೆಯ ಪ್ರಕ್ರಿಯೆ ಸೆರೆಮನೆಯಲ್ಲಿ ಆರಂಭವಾಯ್ತು. ಒತ್ತಡದ ಪ್ರಕ್ರಿಯೆ ಆದಾದುದರಿಂದ ಅದು ಏನೇನೂ ಪರಿಣಾಮಕಾರಿಯಾಗಿರದೆ, ಆಪ್ರಯೋಜಕ ಹಾಗೂ ತೀರಾ ಮಾಮೂಲಾಗಿತ್ತು. ಇಂಥ ಹದಿವಯಸ್ಸಿನ ಹುಡುಗರಿಗೆ ಆ ರೀತಿ ಓದು - ಬರಹವೇ ? ಹೋಗಲಿ... ಅವರಿಗೆ ಸಾಕಷ್ಟು ಆಟವಿಲ್ಲ, ಮನರಂಜನೆಯೂ ಇಲ್ಲ. ದಿನಪತ್ರಿಕೆ - ನಿಯತಕಾಲಿಕೆ - ಪುಸ್ತಕಗಳನ್ನಂತೂ ಓದುವ ಅವಕಾಶವೇ ಇಲ್ಲ....; ಹನ್ನೆರಡು ಗಂಟೆಗಳ ಕಾಲ ರಾತ್ರಿಯಿಡೀ ಬೀಗ ಜಡಿದ ಬ್ಯಾರಕ್ಕಲ್ಲೋ, ಪ್ರತ್ಯೇಕ ಸೆಲ್ಲಿನಲ್ಲೋ ಕಾಲದೂಡಬೇಕಾದರೆ, ಓದುವ ಸೌಕರ್ಯವಿಲ್ಲದೆ ಕಾಲದೂಡುವುದಾದರೂ ಹೇಗೆ ಸಾಧ್ಯ...?'[೫] ೧೯೩೦ ರಷ್ಟು ಹಿಂದಿನ ನೆಹರೂರವರ ಅನಿಸಿಕೆಯಂತೂ ಆ ಕಾಲದಲ್ಲೂ ಪ್ರಸ್ತುತ ಈ ಕಾಲದಲ್ಲು ಅಷ್ಟೇ ಪ್ರಸ್ತುತ.

ರಾಮಮನೋಹರ ಲೋಹಿಯಾ ಅವರು ೧೯೪೪ರಲ್ಲಿ ಲಾಹೋರ್ ಕೋಟೆಯ ಬಂದಿಖಾನೆಯಲ್ಲಿ ಬಂದಿಯಾಗಿ ಹಿಂಸೆ ಅನುಭವಿಸುತ್ತಿರುವಾಗ ಕಂಡಂಥ ಕೈದಿ ಬದುಕಿನ ಭೀಕರತೆಯನ್ನು ಅಲ್ಲಿ ಓದು ಬರವಣಿಗೆಯ ಅನಿವಾರ್ಯತೆಯನ್ನು ಹೀಗೆ ವ್ಯಕ್ತಪಡಿಸಿದ್ದಾರೆ: '...... ಕೈದಿ ಬಂದಿಖಾನೆಯೊಳಗೆ ದೈಹಿಕವಾಗಿ ಅಸಹಾಯಕನಾಗುತ್ತಾನೆ. ಮಾನಸಿಕವಾಗಿ ಶೂನ್ಯವಾಗಿರುತ್ತಾನೆ. ಆತನ ಬಳಿ ಮಾತುಕತೆಗಾಗಿ ಜೊತೆಗಾರ ಯಾರೂ ಇರುವುದಿಲ್ಲ. ಕೊಠಡಿಯ ಗೋಡೆಗಳೂ ಮೂಕವಾಗಿರುತ್ತದೆ. ಓದುವುದಕ್ಕೆ ಪುಸ್ತಕಗಳಾಗಲೀ ಬರೆಯುವುದಕ್ಕೆ ಕಾಗದ ಪೆನ್ನಾಗಲೀ ಇರುವುದಿಲ್ಲ. ಇಂಥದರಲ್ಲಿ ಒಳಗಿನ ಶೂನ್ಯ ಹಾಗೂ ಹೊರಗಿನ ಕತ್ತಲೆಯಿಂದ ಆತ ಸುತ್ತುವರಿಯಲ್ಪಟ್ಟಿರುತ್ತಾನೆ. ಆತ ಹೊರ ಜಗತ್ತಿನಿಂದ ಸಂಪೂರ್ಣ ಸಂಬಂಧ ಕಳಚಿಕೊಂಡಿರುತ್ತಾನೆ. ಆತನ ಭೂತ, ವರ್ತಮಾನ ಹಾಗೂ ಭವಿಷ್ಯತ್ತು ಆತನಿಂದ ದೂರವಾಗಿರುತ್ತದೆ (ಪೊಲೀಸ್ ಅಧಿಕಾರಿಗಳು). ಅದೃಷ್ಟವಶಾತ್ ಆತನಿಗೆ ಯಾವುದಾದರೂ ಮುಖ ಕಂಡರೂ ಅದು ಆತನ ಶತ್ರುವಿನದ್ದಾಗಿರುತ್ತದೆ. ಇನ್ನು ತನ್ನ ಬದುಕಿನಲ್ಲಿ ಬರೀ ಶತ್ರುಗಳೇ ಭೆಟ್ಟಿಯಾಗಲಿದ್ದಾರೆ ಎಂಬ ಭ್ರಮೆಯಂಥ ವಿಶ್ವಾಸ ಆತನ ಮನಸ್ಸಿನಲ್ಲಿ ಸಹಜವಾಗಿ ಮೂಡುತ್ತದೆ.'[೬] ಕೈದಿಯಾಗಿದ್ದ ಲೋಹಿಯಾ ಅವರ ಹಿಂದಿನ ಮನಸ್ಥಿತಿ - ಅನುಭವ ಇಂದು ಬಂಧನದಲ್ಲಿರುವ ಕೈದಿಯೊಬ್ಬನದ್ದೂ ಆಗಿದೆ ಎಂಬುದು ಸತ್ಯ.

ಹೀಗೆ ಕೈದಿ ಕಂಡಿರುವ ಸತ್ಯವನ್ನು ವ್ಯಕ್ತಪಡಿಸಿದವರು ನೆಹರೂ, ಲೋಹಿಯಾ ಮಾತ್ರವಲ್ಲ, ಹಲವು ಮುಖಂಡರೂ ಅದೇ ಸಂದರ್ಭದಲ್ಲಿ ಇಂಥ ಅನಿಸಿಕೆ ವ್ಯಕ್ತಪಡಿಸಿದ್ದರು. ಮಹಾತ್ಮಾಗಾಂಧಿಯವರು ಮಾರ್ಚ್ ೨೦, ೧೯೨೨ರಲ್ಲಿ ಸಬರ್ಮತಿ ಜೈಲಿನಿಂದ ಯರವಾಡ ಜೈಲಿಗೆ ವರ್ಗಾವಣೆಗೊಂಡು ಬಂದಾಗ, ಏಪ್ರಿಲ್ ೧೪ರಂದು ಹಕೀಂ ಅಜಮಲ್‌ಖಾನರಿಗೆ ಬರೆದ ಪತ್ರದಲ್ಲಿ ಯರವಾಡ ಜೈಲಿನಲ್ಲಿನ ಅವರ ಅನುಭವಗಳನ್ನು ಹೀಗೆ ಬರೆಯುತ್ತಾರೆ : 'ನಮ್ಮ ಜೈಲು ವ್ಯವಸ್ಥೆಯಲ್ಲಿ ಮಾನವೀಯತೆಗೆ ಸ್ಥಳವಿಲ್ಲ ಎಂದು ಸ್ಪಷ್ಟವಾಗುತ್ತದೆ. ಕೈದಿಗಳ ಭೌತಿಕ ಅವಶ್ಯಕತೆಗಳ ಪೂರೈಕೆ ಸಮರ್ಪಕವಾಗಿದೆ ಹೌದು. ಆದರೆ ಮಾನವೀಯ ಅವಶ್ಯಕತೆಗಳ ಬಗ್ಗೆ ಇಲ್ಲಿ ಯಾರೂ ಚಿಂತಿಸಿಯೇ ಇಲ್ಲ. ಸೆರೆಮನೆಗಳ ನಿಯಮಗಳೇ ಹಾಗೆ. ಇಲ್ಲಿ ನನ್ನಲ್ಲಿರುವ ಏಳು ಪುಸ್ತಕಗಳನ್ನು ಉಳಿಸಿಕೊಳ್ಳಲು ನನ್ನ ಬುದ್ಧಿ ಸಾಮರ್ಥ್ಯಗಳನ್ನೆಲ್ಲ ನಾನು ಉಪಯೋಗಿಸಬೇಕಾಯಿತು. ಅವುಗಳಲ್ಲಿ ೫ ಧರ್ಮಗ್ರಂಥಗಳು, ಒಂದು ಹಳೆಯ ನಿಘಂಟು, ನನಗದು ಅತೀ ಅಮೂಲ್ಯ, ಮತ್ತೊಂದು ಮೌಲಾನಾ ಅಬ್ದುಲ್ ಕಲಾಂ ಅಜಾದರು ಕೊಟ್ಟ ಉರ್ದು ಪಠ್ಯಪುಸ್ತಕ. ಜೈಲಿನ ಪುಸ್ತಕ ಭಂಡಾರದಲ್ಲಿರುವ ಪುಸ್ತಕಗಳನ್ನಲ್ಲದೆ ಬೇರಾವುದನ್ನೂ ಓದುವುದಕ್ಕೆ ಅವಕಾಶವಿಲ್ಲವೆಂಬ ಕಟ್ಟುನಿಟ್ಟಾದ ಆಜ್ಞೆ ಇದೆ. ನನ್ನ ಇಚ್ಛೆ ಇದಕ್ಕೆ ವಿರೋಧವಾಗಿತ್ತು. ನನ್ನ ಪುಸ್ತಕಗಳನ್ನು ಗ್ರಂಥಾಲಯಕ್ಕೆ ಕೊಟ್ಟು ಅಲ್ಲಿಂದ ಮರಳಿ ಪಡೆಯಬೇಕೆಂದು ಅಧಿಕಾರಿಗಳು ಸೂಚಿಸಿದರು. ನನ್ನ ಇತರ ಪುಸ್ತಕಗಳನ್ನು ಹೀಗೆ ಕೊಡಲು ಸಂತೋಷಿಸುತ್ತೇನೆ. ಆದರೆ ಇಲ್ಲಿನ ಈ ಪುಸ್ತಕಗಳು ಅದರಲ್ಲಿನ ಧಾರ್ಮಿಕ ವಿಷಯಕ್ಕಾಗಿಯೂ ಅವು ಸ್ನೇಹದ ಕೊಡುಗೆಗಳಾಗಿರುವುದರಿಂದಲೂ ನನಗೆ ಅವು ಅತ್ಯಮೂಲ್ಯ. ನನ್ನ ಬಲತೋಳುಗಳನ್ನೇ ಕತ್ತರಿಸಿಕೊಡಲು ಕೇಳಿದಂತೆ ಎಂದೆ; ಬಂದಿಖಾನೆಯ ಮುಖ್ಯಾಧಿಕಾರಿಗಳು ತನ್ನ ಮೇಲಿನವರನ್ನು ಹೇಗೆ ಒಲಿಸಿಕೊಂಡರೋ ಕಾಣೆ, ಅಂತೂ ನನ್ನ ಪುಸ್ತಕಗಳನ್ನಿಟ್ಟುಕೊಳ್ಳಲು ಸಮ್ಮತಿಯಿತ್ತರು' [೬] ಬಂದಿಖಾನೆಯ ಮೌನದಲ್ಲಿ, ಕಾಡುವ ಏಕಾಕಿತನದಲ್ಲಿ ತಮ್ಮ ಇಷ್ಟದ ಪುಸ್ತಕಗಳ ಸಂಗಾತಿತನ ಎಷ್ಟು ಅವಶ್ಯ-ಅನಿವಾರ್ಯ ಎಂಬ ಸತ್ಯವನ್ನು ಗಾಂಧಿಯವರು ಅಂದು ತಮ್ಮ ಪತ್ರದಲ್ಲಿ ವ್ಯಕ್ತಪಡಿಸಿದ್ದರೂ ಇಂದಿಗೂ ಆ ಸತ್ಯ ತೀರಾ ಪ್ರಸ್ತುತವೆನಿಸುತ್ತದೆ. ಬ್ರಿಟಿಷ್ ಆಡಳಿತದಿಂದ ರೋಸಿದ ರಾಷ್ಟ್ರನಾಯಕರು 'ಬಂದಿಖಾನೆ - ಕೈದಿ ಸುಧಾರಣೆ' ಬಗ್ಗೆ ಅತೃಪ್ತಿ ಸೂಚಿಸಿ ಸರಕಾರವನ್ನು ತರಾಟೆಗೆ ತೆಗೆದುಕೊಂಡ ಫಲವಾಗಿ ಬ್ರಿಟಿಷ್ ಸರಕಾರವು 'ಎಲ್ಲ ರಾಜ್ಯಗಳೂ ತಮ್ಮ ಬಂದಿಖಾನೆಗಳ ಸುಧಾರಣೆ ಬಗ್ಗೆ ಅಧ್ಯಯನ ನಡೆಸಲು ಸಮಿತಿಯೊಂದನ್ನು ರಚಿಸಬೇಕು' ಎಂದು ಆದೇಶ ನೀಡಿತು. ಆ ಆದೇಶದನ್ವಯ ಕೆಲವು ರಾಜ್ಯಗಳು ತಮ್ಮ ತಮ್ಮ ರಾಜ್ಯದ ಬಂದಿಖಾನೆಗಳ ಸುಧಾರಣೆಗಾಗಿ ಸಮಿತಿಗಳನ್ನು ರಚಿಸಿಕೊಂಡವು. ಆ ಸಮಿತಿಗಳಲ್ಲಿ ಮೈಸೂರು ಸೆರೆಮನೆಗಳ ಸುಧಾರಣಾ ಸಮಿತಿ (೧೯೪೦ - ೪೧) ಹಾಗೂ ಮುಂಬಯಿ ಸುಧಾರಣಾ ಸಮಿತಿ (೧೯೪೬ - ೪೮) ನಮಗೆ ಮುಖ್ಯವಾದವು. ಈ ಸಮಿತಿಗಳ ಶಿಫಾರಸಿನ ಅನ್ವಯ ಆಗ ಆಯಾ ಪ್ರಾಂತ್ಯಗಳಲ್ಲಿದ್ದ, (ಈಗಿನ ಅಖಂಡ ಕರ್ನಾಟಕದ) ಕೆಲವು ಬಂದಿಖಾನೆಗಳಲ್ಲಿ ಗ್ರಂಥಾಲಯ ವ್ಯವಸ್ಥೆ ಆರಂಭವಾಯಿತು.

ಆದರೆ ಆ ವ್ಯವಸ್ಥೆ ಬಹುಪಾಲು ರಾಜಕೀಯ ಕೈದಿಗಳಿಗಾಗಿ ಅಥವ ಅವರ 'ಕಣ್ಣೊರೆಸುವ ತಂತ್ರ' ಎಂದು ರಾಜಕೀಯ ಧುರೀಣರಿಗೆ ಅರಿವಾಗುವಷ್ಟರಲ್ಲಿ ದೇಶಕ್ಕೆ ಸ್ವಾತಂತ್ರ್ಯ ಬಂದಾಗಿತ್ತು. ರಾಷ್ಟ್ರನಾಯಕರೆಲ್ಲ ನವ ರಾಷ್ಟ್ರ

ಕಟ್ಟುವುದರಲ್ಲಿ ತಲ್ಲೀನರಾಗಿರುವಾಗ ಬಂದಿಖಾನೆಯೊಳಗೆ ಬೆಳೆದ 'ಕತ್ತಲೆ'ಯನ್ನು ಯಾರೂ ಗುರುತಿಸುವವರಿಲ್ಲದಾಯಿತು. ಕೈದಿಗಳ ಪಾಡು ಹಿಂದಿಗಿಂತಲೂ ಅಧೋಗತಿಗಿಳಿಯಿತು.

೧೯೫೦ ರಲ್ಲಿ ನಮ್ಮದೇ ರಾಷ್ಟ್ರಕ್ಕೆ, ನಮಗೆ ಬೇಕಾದಂತಹ ಸಂವಿಧಾನ ಬಂದರೂ ಕೈದಿಗಳ ದಿನನಿತ್ಯದ ಗೋಳು ಬದಲಾಗಲಿಲ್ಲ. ಬಂದಿಖಾನೆಯ ವ್ಯವಸ್ಥೆಯನ್ನು ಕೇಂದ್ರ ವಹಿಸಿಕೊಳ್ಳದೆ ಹಳೆಯ '೧೯೩೫ ರ ಭಾರತ ಸರಕಾರದ ಅಧಿನಿಯಮ' ದಂತೆ, ಬಂದಿಖಾನೆ ಆಡಳಿತ ವಿಷಯ ಆಯಾ ರಾಜ್ಯ ಸರಕಾರಗಳ ಹೊಣೆ ಎಂದು ಹೊಸ ಸಂವಿಧಾನದಲ್ಲೂ ಕಾಯಿದೆ ಕಲ್ಪಿಸಲಾಯಿತು. ಕೇಂದ್ರ ಸರಕಾರದ ಅಂಕುಶವಿಲ್ಲದೆ ನೇರ ರಾಜ್ಯ ಸರಕಾರದ ಆಡಳಿತ ವ್ಯಾಪ್ತಿಗೊಳಪಟ್ಟ ಬಂದಿಖಾನೆ ಆಡಳಿತದಲ್ಲಿ, ಕೈದಿಗಳ ಸುಧಾರಣೆ, ಶಿಕ್ಷಣ ಹಾಗೂ ಗ್ರಂಥಾಲಯ ವ್ಯವಸ್ಥೆಯನ್ನು ಮತ್ತೆ ಸಂಪೂರ್ಣ ಕಡೆಗಣಿಸಲಾಯಿತು. 'ನೆಪ ಮಾತ್ರಕ್ಕೆ' ಇರುವ ಒಂದು ವ್ಯವಸ್ಥೆಯಂತಿದ್ದ ಗ್ರಂಥಾಲಯ, ಕೈದಿಗಳ ಬಳಕೆಗೆ ಸಿಗದಾಗ ಕೇಂದ್ರ ಸರಕಾರ ಮತ್ತೆ ಎಚ್ಚೆತ್ತು ಸಮಿತಿಯೊಂದನ್ನು ರಚಿಸಿತು. ಈ ಸಮಿತಿಯು ೧೯೫೯ ರಲ್ಲಿ ತನ್ನ ವರದಿಯನ್ನು ಸರಕಾರಕ್ಕೆ ಸಲ್ಲಿಸಿತಲ್ಲದೆ, 'ಮಾದರಿ ಬಂದಿಖಾನೆ ಕೈಪಿಡಿ'ಯೊಂದನ್ನೂ ಸಿದ್ಧಪಡಿಸಿ ೧೯೬೦ ರಲ್ಲಿ ಸರಕಾರಕ್ಕೆ ಸಲ್ಲಿಸಿತು. ಈ ವರದಿ ಮತ್ತು ಕೈಪಿಡಿಗಳು, ಕೈದಿಗಳ ಮನಪರಿವರ್ತನೆಗೆ ಅನೇಕ ವೈಜ್ಞಾನಿಕ ಸಲಹೆ - ಶಿಫಾರಸುಗಳನ್ನು ಸೂಚಿಸಿದೆಯಲ್ಲದೆ, ಬಂದಿಖಾನೆ ಆಡಳಿತವನ್ನು ಪರಿಣಾಮಕಾರಿಯಾಗಿ ಸುಧಾರಿಸಲು ಸೂಕ್ತ ಮಾರ್ಗದರ್ಶನವನ್ನೂ ನೀಡಿದವು. ಎಲ್ಲ ರಾಜ್ಯಗಳು ಸಮಾಜವಾದಿ ನೆಲೆಯಲ್ಲಿ ರಚಿಸಲಾದ ಈ ಕೈಪಿಡಿ ಹಾಗೂ ವರದಿಗಳನ್ನು ಮುಂದಿಟ್ಟುಕೊಂಡು ತಮ್ಮ ಬಂದಿಖಾನೆ ಕೈಪಿಡಿಗಳನ್ನು ಮರುಪರಿಶೀಲಿಸಿ, ಪುನರ್ರಚಿಸಬೇಕೆಂದು ಕೇಂದ್ರ ಸರಕಾರ ಕಟ್ಟುನಿಟ್ಟಿನ ಆದೇಶ ಹೊರಡಿಸಿತು. ಮಾತ್ರವಲ್ಲ ಆ ಆದೇಶವನ್ನು ರಾಜ್ಯಗಳು ಪಾಲಿಸುತ್ತವೋ ಇಲ್ಲವೋ ಎಂದು ಪರಿಶೀಲಿಸುವ ಜವಾಬ್ದಾರಿಯೊಂದಿಗೆ, ಇನ್ನಷ್ಟು ಮುಖ್ಯ ಕಾರ್ಯಗಳನ್ನು ವಿಧಿಸಿ ೧೯೬೧ ರಲ್ಲಿ ಕೇಂದ್ರ ತಿದ್ದುಪಾಟು ಸೇವೆಗಳ ದಳ (Central Bureau of Correctional Services) ವನ್ನು ನೇಮಿಸಿತು.

ಈ 'ಮಾದರಿ ಕೈಪಿಡಿ'ಯಲ್ಲಿ ಹಾಗೂ 'ಅಖಿಲಭಾರತ ಬಂದಿಖಾನೆ ಕೈಪಿಡಿ ಸಮಿತಿ, ೧೯೫೭ - ೫೯' ರ ವರದಿಯಲ್ಲಿರುವ ಶಿಫಾರಸು - ಮಾರ್ಗದರ್ಶನಗಳನ್ನು, ಮೈಸೂರು ರಾಜ್ಯ ಬಂದಿಖಾನೆ ಇಲಾಖೆ ಪರಿಶೀಲಿಸಿ, ಕೈಪಿಡಿಯ ಶಿಫಾರಸುಗಳಲ್ಲಿ ಒಂದಾದ 'ಎಲ್ಲ ಕೈದಿಗಳಿಗೂ ಶೈಕ್ಷಣಿಕ ಕಾರ್ಯಕ್ರಮ ಕಡ್ಡಾಯವಾಗಿರಬೇಕಲ್ಲದೆ ಅದಕ್ಕೆ ಪೂರಕವಾಗಿ ಗ್ರಂಥಾಲಯ ವ್ಯವಸ್ಥೆಯನ್ನು ಒದಗಿಸುವುದು ತೀರಾ ಅಗತ್ಯ' ಎಂಬುದನ್ನು ಶೀಘ್ರದಲ್ಲೆ ಜಾರಿಗೆ ತರಲು ನಿರ್ಧರಿಸಿತು.

ಮೈಸೂರು ರಾಜ್ಯದ ಬಂದಿಖಾನೆಗಳು ಹಲವು ಪುಸ್ತಕಗಳನ್ನು ವ್ಯಕ್ತಿಗಳಿಂದ - ಸಂಸ್ಥೆಗಳಿಂದ ದಾನ ಪಡೆದವು. ವರ್ಷದ ಕೊನೆಯಲ್ಲಿ ಯಾವುದಾದರು ಶೀರ್ಷಿಕೆಯಡಿ ಹಣ ಮಿಗತೆಯಾದರೆ ಅದರಲ್ಲಿ ಪುಸ್ತಕಗಳನ್ನು ಖರೀದಿಸಿತು. ಆದರೆ ಇಲಾಖೆಯ ವತಿಯಿಂದ ಹಾಗೆ ಖರೀದಿಸಿದ ಪುಸ್ತಕಗಳು ತೀರಾ ಅತ್ಯಲ್ಪ ಸಂಖ್ಯೆಯದ್ದು. ಕಾರಣ, ವಾರ್ಷಿಕ ಅನುದಾನದಲ್ಲಿ ಗ್ರಂಥಾಲಯ ಶೀರ್ಷಿಕೆಯಡಿ ಹಣ ಮಂಜೂರಾತಿ ಇಲ್ಲ. ಸ್ವಾತಂತ್ರ್ಯಾನಂತರದಲ್ಲೂ ರಾಜ್ಯದ ಬಜೆಟ್ ನಲ್ಲಿ ಕನಿಷ್ಠ ಆದ್ಯತೆ ಪಡೆಯುವ ಇಲಾಖೆಯೆಂದರೆ - ಬಂದಿಖಾನೆ ಇಲಾಖೆ ಮಾತ್ರ. ರಾಜ್ಯ ಹಣಕಾಸು

ಕೊರತೆ ಅನುಭವಿಸುತ್ತಿದ್ದರೆ ಆ ವರ್ಷ ನೇರ ಹೊಡೆತ ಬೀಳುತ್ತಿದ್ದುದು - ಬಂದಿಖಾನೆ ಇಲಾಖೆಯ ಅನುದಾನಕ್ಕೆ. ಅದು ಅನುತ್ಪಾದನಾ ಇಲಾಖೆ (Non Productive Dept) ಎಂಬ ನಿರ್ಲಕ್ಷ್ಯ - ಯೋಜನಾ ವಿಭಾಗ ಮತ್ತು ಸರಕಾರದ್ದಾಗಿತ್ತು.

ಆಯಾ ಬಂದಿಖಾನೆಯ ಅಧೀಕ್ಷಕರು ಮತ್ತು ಇಲಾಖಾ ಮಹಾನಿರೀಕ್ಷಕರ ಜ್ಞಾನದಾಹ ಅಥವ ಪುಸ್ತಕದಾಹವನ್ನು ಅವಲಂಬಿಸುತ್ತ ಕೇಂದ್ರ ಬಂದಿಖಾನೆಗಳಲ್ಲಿ ಮಾತ್ರವೇ ಇದ್ದ ಗ್ರಂಥಾಲಯಗಳು ಕ್ಷೀಣವಾಗಿ ಉಸಿರೆಳೆಯ ತೊಡಗಿದವು. ಆ ಸಂದರ್ಭದಲ್ಲಿ ವಯಸ್ಕರ ಶಿಕ್ಷಣ ಸಮಿತಿಯಿಂದ ವಯಸ್ಕರ ಶಿಕ್ಷಣ ಕಾರ್ಯಕ್ರಮ ನಡೆಯುತ್ತಿದ್ದರೂ, ಆ ಶಿಕ್ಷಣಕ್ಕೆ ಗ್ರಂಥಾಲಯದ ಅನಿವಾರ್ಯತೆ ಇಲ್ಲದ ಕಾರಣ ಗ್ರಂಥಾಲಯ ವ್ಯವಸ್ಥೆ ಬೆಳೆಯಲೇ ಇಲ್ಲ. ೧೦ ವರ್ಷ ಉರುಳಿದರೂ ರಾಜ್ಯ ಸರ್ಕಾರದ ವಾರ್ಷಿಕ ಅನುದಾನದಲ್ಲಿ 'ಗ್ರಂಥಾಲಯ' ಶೀರ್ಷಿಕೆಯಡಿ ಇಂತಿಷ್ಟು ಮೊತ್ತವನ್ನು ಗ್ರಂಥಾಲಯಕ್ಕಾಗಿಯೇ ತೆಗೆದಿರಿಸಲು ಸಾಧ್ಯವಾಗಲಿಲ್ಲ. ಸರಕಾರದ ಆದೇಶದಂತೆ ರಾಜ್ಯ ಬಂದಿಖಾನೆ ಇಲಾಖೆಯಿಂದ ಸಾರ್ವಜನಿಕ ಗ್ರಂಥಾಲಯ ಇಲಾಖೆಯ ಸಹಕಾರ ಕೇಳಲಾಯಿತು. ಸರಕಾರದ ನಿರ್ದೇಶನದಂತೆ ಸಾರ್ವಜನಿಕ ಗ್ರಂಥಾಲಯ ಇಲಾಖೆಯು ೧೯೭೩ ರಲ್ಲಿ ಕೇಂದ್ರ ಬಂದಿಖಾನೆಗಳಲ್ಲಿ, (ತನ್ನ ಜಿಲ್ಲಾ ಕೇಂದ್ರ ಗ್ರಂಥಾಲಯ ಇರುವೆಡೆ) ತನ್ನ ಶಾಖಾ ಗ್ರಂಥಾಲಯವೊಂದನ್ನು ತೆರೆಯಲು ನಿರ್ಧರಿಸಿತು. ಜಿಲ್ಲಾ ಬಂದಿಖಾನೆ / ಉಪ ಬಂದಿಖಾನೆಗಳಿಗೂ - ಅಲ್ಲಿ ತನ್ನ ನಗರ / ಕೇಂದ್ರ ಗ್ರಂಥಾಲಯ ಶಾಖೆಗಳು ಇದ್ದಲ್ಲಿ, ಪುಸ್ತಕ ವಿತರಿಸುವ ಹಾಗೂ ಅಗತ್ಯವಿದ್ದರೆ ನಿಯತಕಾಲಿಕೆ - ದಿನಪತ್ರಿಕೆಗಳನ್ನೂ ಸರಬರಾಜು ಮಾಡುವ ಜವಾಬ್ದಾರಿಯನ್ನು ವಹಿಸಿಕೊಂಡಿತು. ಗ್ರಂಥಾಲಯ ವಿಜ್ಞಾನದಲ್ಲಿ ತರಬೇತಿ ಪಡೆದ ತನ್ನೊಬ್ಬ ಇಲಾಖಾ ಸಿಬ್ಬಂದಿಯನ್ನು ಖಾಯಂ ಆಗಿ ಶಾಖಾ ಗ್ರಂಥಾಲಯಕ್ಕೆ ಕಳುಹಿಸಿ ಕೊಡುವ ಬಗೆ ಒಪ್ಪಂದವಾಯಿತು.

ಕರ್ನಾಟಕ ರಾಜ್ಯ ಬಂದಿಖಾನೆ ಇಲಾಖೆಯ ಈ ಕ್ರಮದಿಂದಾಗಿ ಕೈದಿಗಳು ಇನ್ನಷ್ಟು ಪುಸ್ತಕಗಳನ್ನು ಕಾಣುವಂತಾಯಿತು. ಸಾರ್ವಜನಿಕ ಗ್ರಂಥಾಲಯ ಇಲಾಖೆ ತನ್ನ ಶಾಖೆಯನ್ನು - ಬೆಂಗಳೂರು ಕೇಂದ್ರ ಬಂದಿಖಾನೆಯಲ್ಲಿ ೧೯೭೩ ರಲ್ಲಿ ತೆರೆದರೆ, ಮೈಸೂರು ಕೇಂದ್ರ ಬಂದಿಖಾನೆಯಲ್ಲಿ ೧೯೭೪ ರಲ್ಲಿ, ಬೆಳಗಾವಿ ಕೇಂದ್ರ ಬಂದಿಖಾನೆಯಲ್ಲಿ ೧೯೭೭ ರಲ್ಲಿ, ಬಿಜಾಪುರ ಕೇಂದ್ರ ಬಂದಿಖಾನೆಯಲ್ಲಿ ೧೯೮೦ ರಲ್ಲಿ, ಗುಲ್ಬರ್ಗ ಕೇಂದ್ರ ಬಂದಿಖಾನೆಯಲ್ಲಿ ೧೯೮೬ ರಲ್ಲಿ ಆರಂಭಿಸಿತು.

ಸಾರ್ವಜನಿಕ ಗ್ರಂಥಾಲಯ ಶಾಖೆಯಿದ್ದರೂ ರಾಜ್ಯದ ಬಂದಿಖಾನೆಗಳು ತಮ್ಮದೇ ಆದ ಇಲಾಖಾ ಗ್ರಂಥಾಲಯವನ್ನು ಹೊಂದಿರಬೇಕೆನ್ನುವುದು. ಕೇಂದ್ರದ, ರಾಷ್ಟ್ರೀಯ ಸಾಮಾಜಿಕ ಸಂರಕ್ಷಣಾ ಸಂಸ್ಥೆ ಹಾಗೂ ೧೯೭೨ ರಲ್ಲಿ ಕೇಂದ್ರ ಗೃಹಖಾತೆಯಿಂದ ನೇಮಕಗೊಂಡ 'ಬಂದಿಖಾನೆಗಳ ಕುರಿತ ಕಾರ್ಯ ತಂಡ' ರೂಪಿಸಿದ್ದ ಶಿಫಾರಸುಗಳಲ್ಲಿ ಪ್ರಮುಖವಾದುದರಿಂದ ರಾಜ್ಯ ಬಂದಿಖಾನೆ ಇಲಾಖೆ, ತನ್ನ ಬಂದಿಖಾನೆಗಳಲ್ಲಿ ಇಲಾಖಾ ಗ್ರಂಥಾಲಯವನ್ನು ಜೀವಂತವಾಗಿಟ್ಟಿತು. ಆದರೆ ಗುಣಾತ್ಮವಾಗಿ ಮಾತ್ರ ಅಲ್ಲ.

ಕೇಂದ್ರ ಸರಕಾರದ ಹಲವು ಸಮಿತಿ, ಆಯೋಗ, ಕಾಯಿದೆ, ಕಾರ್ಯತಂಡಗಳ ಪ್ರಯತ್ನದಿಂದಲೂ ರಾಜ್ಯಗಳ ಬಂದಿಖಾನೆಗಳಲ್ಲಿ ನಿರೀಕ್ಷಿತ ಸುಧಾರಣೆ ಕಾಣಿಸದಾದಾಗ ಕೇಂದ್ರ ಸಚಿವಾಲಯ ರಾಜ್ಯದ ಬಂದಿಖಾನೆ ಆಡಳಿತವನ್ನು

ಪಂಚವಾರ್ಷಿಕ ಯೋಜನೆಯಡಿ ಅಳವಡಿಸಲು ನಿರ್ಧರಿಸಿತು. ನಿರ್ಧಾರವನ್ನು ಕಾರ್ಯರೂಪಕ್ಕೆ ತರುವುದಕ್ಕಾಗಿ ಸಾಮಾಜಿಕ ಸಂರಕ್ಷಣಾ ಕ್ಷೇತ್ರದಡಿ ಯೋಜನೆಗಳನ್ನು ಸಿದ್ಧಪಡಿಸಲು ಕಾರ್ಯತಂಡವೊಂದನ್ನು ನೇಮಿಸಿತು. ಆ ಕಾರ್ಯತಂಡ ರಾಜ್ಯಗಳ ಬಂದಿಖಾನೆ ಸುಧಾರಣೆಗೆ ಅಡ್ಡಿಯಾಗುತ್ತಿರುವ ಎಲ್ಲ ಸಮಸ್ಯೆಗಳನ್ನು ಗಮನದಲ್ಲಿರಿಸಿಕೊಂಡು, 'ಅಖಿಲ ಭಾರತ ಜೈಲು ಸುಧಾರಣಾ ಸಮಿತಿ'ಯ ಶಿಫಾರಸನ್ನು ಅನುಷ್ಠಾನಗೊಳಿಸುವಲ್ಲಿ, ಬಂದಿಖಾನೆ ಆಡಳಿತವನ್ನು ಪಂಚವಾರ್ಷಿಕ ಯೋಜನೆಯಡಿ ಸೇರಿಸಬಹುದೆಂದು ಶಿಫಾರಸು ಮಾಡಿತು. ಬಂದಿಖಾನೆಗಳ ಭದ್ರತೆ, ದುರಸ್ತೀಕರಣ, ಸಿಬ್ಬಂದಿಗಳಿಗೆ ತರಬೇತಿ, ತರಬೇತಿ ಶಾಲೆಯ ಆಧುನೀಕರಣ, ಬಂದಿಖಾನೆಗಳ ನೈರ್ಮಲ್ಯ, ವೈದ್ಯಕೀಯ ಸೌಲಭ್ಯಗಳ ಜತೆಗೆ ಮುಖ್ಯವಾಗಿ ಕೈದಿಗಳ ಶಿಕ್ಷಣ, ವೃತ್ತಿ ಶಿಕ್ಷಣ ಬಂದಿಖಾನೆ ಉದ್ಯಮಗಳ ಆಧುನೀಕರಣಕ್ಕೆ ಹೆಚ್ಚಿನ ಒತ್ತು ನೀಡಿ ಕಾರ್ಯತಂಡದ ಶಿಫಾರಸಿನಂತೆ ಕೇಂದ್ರ ಸರಕಾರ ಬಂದಿಖಾನೆ ಆಡಳಿತವನ್ನು ಏಳನೇ (೧೯೮೮ - ೧೯೯೨) ಎಂಟನೇ (೧೯೯೩ - ೧೯೯೭) ಹಾಗೂ ಒಂಬತ್ತನೇ (೧೯೯೮ - ೨೦೦೨) ಪಂಚವಾರ್ಷಿಕ ಯೋಜನೆಗಳಡಿ ಸೇರಿಸಿ ರಾಜ್ಯ ಸರಕಾರಗಳಿಗೆ ೧೯೮೮ - ೧೯೮೯ರಿಂದ ಧನಸಹಾಯ ನೀಡಲಾರಂಭಿಸಿತು.

ಆದರೆ ಕೇಂದ್ರ ಸರಕಾರದ ಈ ಯೋಜನೆಯಿಂದ ಬಂದಿಖಾನೆಗಳೊಳಗಿನ ಪ್ರಮುಖ ಜ್ಞಾನ ಸಂವಹನ ಮಾಧ್ಯಮಗಳಲ್ಲಿ ಮುಖ್ಯವಾದ ಗ್ರಂಥಾಲಯವೊಂದನ್ನು ಹೊರತುಪಡಿಸಿ ಇತರ ಎಲ್ಲ ಮಾಧ್ಯಮಗಳು (ಶಿಕ್ಷಣ, ದೂರದರ್ಶನ, ಆಕಾಶವಾಣಿ ಇತ್ಯಾದಿ) ಬಲಗೊಂಡು ಆಧುನೀಕರಣಗೊಂಡವು. ರಾಜ್ಯದ ವಾರ್ಷಿಕ ಅನುದಾನದಲ್ಲೂ ಗ್ರಂಥಾಲಯದ ಬೆಳವಣಿಗೆಗೆ ಅವಕಾಶವಿಲ್ಲದೆ, ಕೈದಿಗಳ ವೃತ್ತಿಪರ ಶಿಕ್ಷಣವನ್ನು ಪಂಚವಾರ್ಷಿಕ ಯೋಜನೆಯಡಿ ಅಳವಡಿಸಿದ್ದರೂ ಇದುವರೆಗೂ ಆ ಕಾರಣಕ್ಕಾಗಿಯಾದರೂ ಗ್ರಂಥಾಲಯದ ಬೆಳವಣಿಗೆಗೆ / ಆಧುನೀಕರಣಕ್ಕೆ ಒತ್ತು ಕಲ್ಪಿಸದಿರುವುದು ಹಾಗು ಅದು ಸಾರ್ವಜನಿಕ ಗ್ರಂಥಾಲಯದ ಕರ್ತವ್ಯ ಎಂಬಂತೆ ನಿರ್ಲಕ್ಷಿಸಲಾಗಿದೆ. ಕೈದಿಗಳ ಮನಪರಿವರ್ತನೆಗೆ ಪುಸ್ತಕದ ಓದು ಅವಶ್ಯ ಎಂದು ೧೮೩೬ ರಲ್ಲೇ ಬ್ರಿಟಿಷ್ ನ್ಯಾಯತಜ್ಞರು, ಕಂಪನಿ ಸರಕಾರದ ಪ್ರಮುಖರು ಸಲಹೆ ಮಾಡಿ ತಮ್ಮ ಸಮಿತಿ ವರದಿಗಳಲ್ಲಿ ಶಿಫಾರಸು ಮಾಡಿದ್ದರೂ ಇಂದಿಗೂ ಆ ಮಾಧ್ಯಮ ನಿರ್ಲಕ್ಷಿತವಾಗಿದ್ದು - ಸದ್ಯ ನಿಂತ ನೀರಂತಾಗಿದೆ.

ಅಖಿಲ ಭಾರತ ಬಂದಿಖಾನೆ ಸುಧಾರಣಾ ಸಮಿತಿಯ ಶಿಫಾರಸನ್ನು ಅನುಷ್ಠಾನಗೊಳಿಸುವ ನಿಟ್ಟಿನಲ್ಲಿ, ಕೇಂದ್ರ ಸರಕಾರದ ಗೃಹಸಚಿವಾಲಯ, ಏಳನೇ ಹಣಕಾಸು ಆಯೋಗದ ೧೯೭೮ ರ ಅಧ್ಯಯನ ವರದಿಯಂತೆ, ಬಂದಿಖಾನೆಯ ಆಡಳಿತವನ್ನು ಪಂಚವಾರ್ಷಿಕ ಯೋಜನೆಯಡಿ ಅಳವಡಿಸಿ, ೧೯೮೮ - ೧೯೮೯ ರಿಂದ ೨೦೦೧ - ೨೦೦೨ ರ ವರೆಗೆ 'ಬಂದಿಖಾನೆ ಆಡಳಿತ ಆಧುನೀಕರಣೆ' ಯೋಜನೆಗೆಂದು ೪೪೪.೬೪೫ ಲಕ್ಷಗಳನ್ನು ನೀಡಿತು (ಇದಕ್ಕೆ ಹೊಂದಾಣಿಕೆ ಮೊತ್ತವಾಗಿ ರಾಜ್ಯ ಸರಕಾರ ೧೯೭.೬೮೫ ಲಕ್ಷ ರೂ.ಗಳನ್ನು ನೀಡಿದೆ). ಈ ಯೋಜನೆಯಲ್ಲಿ ಬಂದಿಗಳ ಶಿಕ್ಷಣ, ಮನೋವಿಕಾಸ, ಮನಪರಿವರ್ತನೆ, (ತಿದ್ದುವಿಕೆ ಸೇವೆ - Correctional Services) ವೃತ್ತಿ ಶಿಕ್ಷಣ ತರಬೇತಿ ಮತ್ತು ಕೈಗಾರಿಕೆಗಳ ಆಧುನೀಕರಣ ಮುಖ್ಯ ಉಪಯೋಜನೆಗಳು. ಈ ಉಪಯೋಜನೆಗಳ ಅನುಷ್ಠಾನಕ್ಕಾಗಿ ಸರಕಾರ ಅಥವ ರಾಜ್ಯ ಬಂದಿಖಾನೆ ಇಲಾಖೆ ವಿಶೇಷ ಅನುದಾನವನ್ನು ವ್ಯಯಿಸುವಾಗ, ಯೋಜನೆ

ಪರಿಣಾಮಕಾರಿಯಾಗಲು ಅದಕ್ಕೆ ಪೂರಕವಾಗಿ ಬೇಕಾಗಿರುವ ಇಲಾಖಾ ಗ್ರಂಥಾಲಯವನ್ನು ಅಭಿವೃದ್ಧಿ ಪಡಿಸುವ ಯಾವುದೇ ಕ್ರಮವನ್ನು ಮಾತ್ರ ಕೈಗೊಳ್ಳಲಿಲ್ಲ. ಕೈದಿಗಳ ಮನೋವಿಕಾಸಕ್ಕಾಗಿ ಎಲ್ಲ ಬಂದಿಖಾನೆಗಳಲ್ಲೂ ಭಜನೆಗಾಗಿ ತಾಳ, ತಬಲ, ಹಾರ್ಮೋನಿಯಂಗಳನ್ನು ಖರೀದಿಸಲು ಈ ಅನುದಾನದ ಸ್ವಲ್ಪ ಭಾಗವನ್ನು ಬಳಸಿಕೊಳ್ಳಲಾಯಿತು. ಆದರೆ ಉತ್ತಮ ಗ್ರಂಥಗಳನ್ನು ಖರೀದಿಸಿ ಕೈದಿಗಳಲ್ಲಿ ಓದುವ ಹವ್ಯಾಸವನ್ನು ವೃದ್ಧಿಗೊಳಿಸಲು ಮಾತ್ರ ಇಲಾಖೆ ಪ್ರಯತ್ನಪಡಲಿಲ್ಲ - ಅನುದಾನ ವ್ಯಯಿಸಲಿಲ್ಲ.

ಕರ್ನಾಟಕ ಸರಕಾರ, ಬಂದಿಖಾನೆ ಇಲಾಖೆಗೆ ನೀಡುವ ವಾರ್ಷಿಕ ಅನುದಾನದಲ್ಲಿ ಕಳೆದ ಆರು ವರ್ಷಗಳಿಂದ ಶಿಕ್ಷಣಕ್ಕಾಗಿ ಅನುದಾನದ ಇಂತಿಷ್ಟನ್ನು ಮೀಸಲಿಡುತ್ತಿದ್ದು ೧೯೯೪ - ೧೯೯೫ ರಿಂದ ೨೦೦೦ - ೨೦೦೨ರ ವರೆಗೆ 'ಶಿಕ್ಷಣ'ವೆಂಬ ಲೆಕ್ಕ ಶೀರ್ಷಿಕೆ ಅಡಿಯಲ್ಲಿ ಶಿಕ್ಷಣಕ್ಕೆ ೮.೯ ಲಕ್ಷ ರೂ.ಗಳನ್ನು ನೀಡಿದ್ದು, ಅದರಲ್ಲಿ ಕೇವಲ ೪,೭೯,೯೧೩ ರೂ.ಗಳನ್ನು ಮಾತ್ರ ಶಿಕ್ಷಣಕ್ಕೆ ನೀಡಲಾಗಿದೆ. ಆದರೆ ಬಳಸದೆ ಉಳಿದ ಹಣವನ್ನು ಶಿಕ್ಷಣ ಕ್ಷೇತ್ರದ ಮಹತ್ತರ ಅಂಗವಾಗಿರುವ ಗ್ರಂಥಾಲಯದ ಅಭಿವೃದ್ಧಿಗೆ ಬಳಸದೆ ಹಲವು ಬಾರಿ ಹಣವನ್ನು ಸರಕಾರಕ್ಕೆ ಮರಳಿಸಿದ್ದಿದೆ. ಕೆಲವೇ ಕೆಲವು ಬಾರಿ ಗ್ರಂಥಾಲಯಕ್ಕೆ ಒಂದಷ್ಟು ಪುಸ್ತಕಗಳನ್ನು ಖರೀದಿಸಲಾಗಿದೆ.

ಆದರೆ ಈ ಪುಸ್ತಕ ಖರೀದಿಯ ಪ್ರಕ್ರಿಯೆಯಂತೂ ತೀರಾ ಅವ್ಯವಸ್ಥಿತ ಹಾಗೂ ಅವೈಜ್ಞಾನಿಕವಾದುದು. ವಾರ್ಷಿಕ ಲೆಕ್ಕ ಚುಕ್ತವಾಗಬೇಕೆನ್ನುವ ತರಾತುರಿಯಲ್ಲಿ ಎರಡು ಮೂರು ದಿನಕ್ಕೆ ಮುನ್ನ, 'ಶಿಕ್ಷಣ' ಲೆಕ್ಕ ಶೀರ್ಷಿಕೆಯಡಿ ಉಳಿದ ಹಣದ ಖರ್ಚಿಗೆ ಬೇರೆ ಯಾವುದೇ ದಾರಿ ಕಾಣದಾದಾಗ ಪುಸ್ತಕ ಖರೀದಿಸಲು ನಿರ್ಧರಿಸಿ, ಸಮೀಪದ ಪುಸ್ತಕ ವ್ಯಾಪಾರಿ ಸಂಸ್ಥೆಯಿಂದ ಪುಸ್ತಕಗಳ ದರಪಟ್ಟಿ ಮತ್ತು ಪ್ರಸ್ತಾವನೆಯನ್ನು ದಿಢೀರನೆ ತರಿಸಿಕೊಂಡು, ಬಂದಿಖಾನೆ ಅಧೀಕ್ಷರುಗಳ ಪುಸ್ತಕ ಕೋರಿಕೆಯ ಹೊಸ - ಹಳೆ ಮನವಿಗಳನ್ನು ಸಾಲಾಗಿ ಉಲ್ಲೇಖಿಸಿ, ಆ ಪುಸ್ತಕ ಮಳಿಗೆಯಲ್ಲಿ ಮಾತ್ರವೇ ಲಭ್ಯವಿರುವ ಹಲವು ಶೀರ್ಷಿಕೆಗಳನ್ನು ೪೦ - ೫೦ ಸೆಟ್ ಗಳಂತೆ ಖರೀದಿಸಿ ಕ್ಷಣ ಮಾತ್ರದಲ್ಲಿ ಗ್ರಂಥಾಲಯ ತುಂಬಿಸುವುದು ಸದ್ಯ ಚಾಲ್ತಿಯಲ್ಲಿರುವ ಪದ್ಧತಿ. (ಅನುಬಂಧ - ೧)

ಹೀಗೆ ಖರೀದಿಸಿದ ಪುಸ್ತಕಗಳ ಉದ್ದೇಶ 'ಅನುದಾನವನ್ನು ಸರಕಾರಕ್ಕೆ ಮರಳಿಸದೆ, ಹೇಗಾದರೂ ವ್ಯಯಿಸಬೇಕು' ಎಂದಿರುತ್ತದೆ ವಿನಾ, ಕೈದಿಗಳ ಮನೋವಿಕಾಸಕ್ಕೆ, ಅವರ ಮನಪರಿವರ್ತನೆಗೆ ಯೋಗ್ಯ ಜ್ಞಾನಸಂವಹನಾ ಮಾಧ್ಯಮವೆನಿಸಿರುವ ಗ್ರಂಥಾಲಯವನ್ನು ಉತ್ತಮ ವಿಚಾರಪೂರ್ಣ ಜ್ಞಾನಪ್ರೇರಿತ ಗ್ರಂಥಗಳಿಂದ ಪುಷ್ಟೀಕರಿಸಬೇಕೆನ್ನುವ ಉದ್ದೇಶವಿರುವುದಿಲ್ಲ. ಈ 'ಮಾಹಿತಿ ಸ್ಫೋಟ' ಯುಗದಲ್ಲಿ ಕ್ಷಣ ಕ್ಷಣವೂ ಹೊಸ ಮಾಹಿತಿ - ಜ್ಞಾನಗಳು ಸೃಷ್ಟಿಯಾಗಿ ಅವು ಲಿಖಿತ ರೂಪದಲ್ಲಿ ಹೊರಬರುತ್ತಿರುತ್ತಿವೆ; ಹಾಗೇ ಸೃಜನಶೀಲ 'ಒರತೆ' ಯಿಂದ ಹಲವು ಶ್ರೇಷ್ಠ ಸೃಜನಶೀಲ ಕೃತಿಗಳು ಹುಟ್ಟುತ್ತಲೇ ಇರುತ್ತವೆ. ಇಂತಹ ಕೃತಿಗಳನ್ನು ಆಯ್ಕೆಮಾಡಿ ಎಲ್ಲೆಲ್ಲಿ ಅವು ಲಭ್ಯವೋ ಅಲ್ಲಿಂದ ಖರೀದಿಸಿದಲ್ಲಿ, ಅಂತಹ 'ಖರೀದಿ'ಗೊಂದು ಅರ್ಥವಿದೆ. ಇಲ್ಲದಿದ್ದಲ್ಲಿ ಗ್ರಂಥಾಲಯದ ಗುಣಾತ್ಮಕ ಬೆಳವಣಿಗೆಯನ್ನು ನಿರೀಕ್ಷಿಸಲಾಗದು. ಜ್ಞಾನದ ತೂಕ ಹೆಚ್ಚುವ ಬದಲು ಪುಸ್ತಕದ ತೂಕವೇ ಹೆಚ್ಚುವುದರಲ್ಲಿ ಅನುಮಾನವಿಲ್ಲ. ಕರ್ನಾಟಕ ಬಂದಿಖಾನೆ ಕೈಪಿಡಿ - ೧೯೭೮, ರಲ್ಲಿ ಆಯಾ ಬಂದಿಖಾನೆಯ ಅಧೀಕ್ಷಕರು ಅನುಮೋದಿಸಿದ ಇಂಗ್ಲೀಷ್ ಮತ್ತು ಪ್ರಾದೇಶಿಕ ಭಾಷೆಯ ಪುಸ್ತಕಗಳನ್ನು ಬಂದಿಖಾನೆಗೆ ಒದಗಿಸತಕ್ಕದ್ದು ಎಂಬ ನಿಯಮ ಸ್ಪಷ್ಟವಾಗಿ ಉಲ್ಲೇಖಿಸಲ್ಪಟ್ಟಿದೆ. ಆದರೆ ಆ ನಿಯಮ ಪರಿಪಾಲನೆಯಾಗುತ್ತಿಲ್ಲ.

ಕೈದಿಗಳ ಮನಪರಿವರ್ತನೆ - ಮನೋವಿಕಾಸದ ಉದ್ದೇಶದಿಂದ ಹುಟ್ಟಿಕೊಂಡಿರುವ ಈ ಇಲಾಖಾ ಗ್ರಂಥಾಲಯಕ್ಕೆ ಪುಸ್ತಕಗಳನ್ನು ಖರೀದಿಸುವ ಸಂದರ್ಭದಲ್ಲಿ, ಅಧೀಕ್ಷಕರು ಕೈದಿಗಳಿಂದ ಕೋರಿಕೆ ಪಟ್ಟಿಯೊಂದನ್ನು ಪಡೆಯಬೇಕಾದ ಅವಶ್ಯಕತೆಯೂ ಇದೆ. ಅಥವ ಪುಸ್ತಕ ಖರೀದಿ ಆಯ್ಕೆಯ ಪ್ರಕ್ರಿಯೆಗಾಗಿ ಕೈದಿಗಳದ್ದೇ ಒಂದು ಸಮಿತಿಯನ್ನು ರಚಿಸಿ, ಎಲ್ಲ ಪುಸ್ತಕ ವ್ಯಾಪಾರಿಗಳಿಂದ ಪುಸ್ತಕಗಳ ಪಟ್ಟಿಯೊಂದನ್ನು ತರಿಸಿ ಆ ಸಮಿತಿಯ ಮುಂದಿಟ್ಟು 'ಕೈದಿ ಸಮಿತಿ'ಯು ಆರಿಸಿಕೊಟ್ಟ ಪುಸ್ತಕಗಳ ಪಟ್ಟಿಯನ್ನು ಮಹಾನಿರೀಕ್ಷಕರು ಪುನರ್ ಪರಿಶೀಲಿಸಿ ಪುಸ್ತಕಗಳನ್ನು ಖರೀದಿಸಿದ್ದಲ್ಲಿ ಅದೊಂದು ಅರ್ಥಪೂರ್ಣ ಖರೀದಿ. ಆದರೆ ಈ ಪದ್ಧತಿ ಬಂದಿಖಾನೆ ಇಲಾಖೆಯಲ್ಲಿ ಊರ್ಜಿತದಲ್ಲಿಲ್ಲ.

ದೇಶದಲ್ಲಿ ತುರ್ತುಪರಿಸ್ಥಿತಿಯ ಘೋಷಣೆಯ ಕಾಲದಲ್ಲಿ (೧೯೭೫ - ೭೬) ಬೆಂಗಳೂರು ಕೇಂದ್ರ ಬಂದಿಖಾನೆಯಲ್ಲಿ ಬಂಧನದಲ್ಲಿದ್ದ ರಾಜಕೀಯ ನಾಯಕರು ತಮ್ಮ 'ಸೆರೆವಾಸದ ಕಾಲವನ್ನು ಕೊಲ್ಲುವುದಕ್ಕಾಗಿ', ಅಥವ ಆ ಕಾಲವನ್ನು ಸಮರ್ಥವಾಗಿ ಬಳಸಿಕೊಳ್ಳುವುದಕ್ಕಾಗಿ ಬಂದಿಖಾನೆ ಆಡಳಿತ ವ್ಯವಸ್ಥೆಯ ಮೂಲಕ ತಮಗಿಷ್ಟವಾದ ಹಲವಾರು ಅತ್ಯುತ್ತಮ ಪುಸ್ತಕಗಳನ್ನು ತರಿಸಿಕೊಂಡರು. ಹೀಗೆ ತರಿಸಿಕೊಂಡ ಪುಸ್ತಕಗಳು ಆ ಬಂದಿಖಾನೆಯ ಇಲಾಖಾ ಗ್ರಂಥಾಲಯವನ್ನು ಸ್ವಲ್ಪ ಮೌಲಿಕವಾಗಿರಿಸಲು ಸಹಕರಿಸಿದವು. ೧೯೮೬ ರಲ್ಲಿ ಇದೇ ಕೇಂದ್ರ ಬಂದಿಖಾನೆಯಲ್ಲಿ ಕೆಲವು ತಿಂಗಳ ತುರಂಗವಾಸವನ್ನು ಅನುಭವಿಸಿದ ಪ್ರೊ. ನಗರಿಬಾಬಯ್ಯ ಅವರು, ತುರ್ತುಪರಿಸ್ಥಿತಿಯಲ್ಲಿ ಕೆಲವು ಜನನಾಯಕರು ಈ ಜೈಲಲ್ಲಿದ್ದಕಾರಣ ಆದ ಒಳ್ಳೆಯ ಕೆಲಸವೆಂದರೆ ಬಂದಿಖಾನೆಯಲ್ಲೊಂದು ಒಳ್ಳೆಯ ಲೈಬ್ರರಿ ಇರುವಂತೆ, ಒಳ್ಳೊಳ್ಳೆಯ ಪುಸ್ತಕಗಳನ್ನು ತಮ್ಮ ಓದಿಗಾಗಿ ಖರೀದಿಸುವಂತೆ ಮಾಡಿದ್ದು' ಎಂದು ತಮ್ಮ 'ಕಗ್ಗತ್ತಲ ಜಗತ್ತಲ್ಲಿ ೯೦ ದಿನ' ಎಂಬ ಪುಸ್ತಕದಲ್ಲಿ ಹೇಳಿಕೊಂಡಿದ್ದಾರೆ.[೯]

ಪ್ರೊ. ಮಧು ದಂಡವತೆ ಅವರು ೧೯೭೫ ರಲ್ಲಿ ಬೆಂಗಳೂರು ಕೇಂದ್ರ ಬಂದಿಖಾನೆಯಲ್ಲಿ ತುರ್ತುಪರಿಸ್ಥಿತಿಯ ಕಾರಣದಿಂದ ಸ್ಥಾನಬದ್ಧತೆಯಲ್ಲಿದ್ದಾಗ ಬರೆದ ಮಾರ್ಕ್ಸ್ ಮತ್ತು ಗಾಂಧಿ (೧೯೭೫) ಎಂಬ ಪುಸ್ತಕದ ಮುನ್ನುಡಿಯಲ್ಲಿ ಹೀಗೆಂದು ಬರೆದಿದ್ದಾರೆ: ಜೈಲಿನ ಬದುಕಿನಲ್ಲಿ ಅದರದ್ದೇ ಆದ ಅನುಕೂಲಗಳಿವೆ. ಪರಿಮಿತಿಗಳೂ ಇವೆ. ಅಲ್ಲಿ ಓದು ಬರವಣಿಗೆಗೆ ಬೇಕಾದ ನಿಶ್ಶಬ್ದತೆ ಇರುತ್ತದೆ. ಮಾನಸಿಕ ಶಾಂತಿಯಿರುತ್ತದೆ. ನನ್ನ ಈ ಬರವಣಿಗೆಗೆ ಆಧಾರಕ್ಕೆ ಬೇಕಿದ್ದ ಗಾಂಧಿಯ ಬರವಣಿಗೆಗೆ ಹೆಚ್ಚು ಆಕರ ಪುಸ್ತಕಗಳನ್ನು ಜೈಲಿನ ಗ್ರಂಥಭಂಡಾರದಿಂದ ಒದಗಿಸಿಕೊಟ್ಟರು. ಇದಕ್ಕಾಗಿ ಅಧಿಕಾರಿಗಳಿಗೆ ನಾನು ಋಣಿ'[೧೦] ಎಂದು ಬರೆದುಕೊಂಡಿದ್ದಾರೆ.

### ೧.೧೧ ಬಂದಿಖಾನೆ ಇಲಾಖಾ ಗ್ರಂಥಾಲಯಗಳ ಇಂದಿನ ಸ್ಥಿತಿ

ಸ್ವಾತಂತ್ರ್ಯಪೂರ್ವದಲ್ಲೆ ಕೆಲವು ಬಂದಿಖಾನೆ (ಮೈಸೂರು - ಬೆಂಗಳೂರು) ಗಳಲ್ಲಿ ಅಸ್ತಿತ್ವದಲ್ಲಿದ್ದ ಹಾಗೂ ಸ್ವಾತಾಂತ್ರ್ಯನಂತರದ ಕೆಲವೇ ವರ್ಷಗಳಲ್ಲಿ ಇನ್ನುಳಿದ ಕೇಂದ್ರ ಬಂದಿಖಾನೆಗಳಲ್ಲೂ ಅಸ್ತಿತ್ವಕ್ಕೆ ಬಂದ ಇಲಾಖಾ ಗ್ರಂಥಾಲಯಗಳ ಒಟ್ಟು ಪುಸ್ತಕ ಸಂಗ್ರಹವನ್ನು ಹಾಗೂ ಆ ಸಂಗ್ರಹದಲ್ಲಿರುವ ಪುಸ್ತಕಗಳೊಳಗಿನ ಜ್ಞಾನಸಾರವನ್ನು ಸೂಕ್ಷ್ಮವಾಗಿ ಪರಿಶೀಲಿಸಿದರೆ ನಮ್ಮ ಬಂದಿಖಾನೆ ಇಲಾಖೆ ಗ್ರಂಥಾಲಯವೆಂಬ ಜ್ಞಾನಸಂವಹನ ಮಾಧ್ಯಮವನ್ನು ಎಷ್ಟು ಅಲಕ್ಷಿಸಿದೆ ಎಂದು ಸ್ಪಷ್ಟವಾಗುತ್ತದೆ. ಸ್ವಾತಂತ್ರ್ಯಪೂರ್ವದ ಹಾಗೂ ಸ್ವಾತಂತ್ರ್ಯಾನಂತರದ ಎರಡು ಮೂರು

ದಶಕಗಳಲ್ಲಿ ಸಂಗ್ರಹಿಸಲ್ಪಟ್ಟ ಪುಸ್ತಕಗಳು ವಿಚಾರಪೂರ್ಣವಾಗಿದ್ದು, ಸಂಗ್ರಹ ಯೋಗ್ಯವೆನಿಸಿದ್ದರೂ, ನಂತರ ಖರೀದಿಸಿ ಸಂಗ್ರಹಿಸಲ್ಪಟ್ಟ ಅನೇಕ ಪುಸ್ತಕಗಳು 'ಅವಸರದಲ್ಲಿ ತುಂಬಿಸಲ್ಪಟ್ಟವು' ಎಂಬುದು ಸ್ಪಷ್ಟವಾಗುತ್ತದೆ. ಇದಕ್ಕೊಂದು ಸ್ಪಷ್ಟ ಪುಟ್ಟ ನಿದರ್ಶನ ಅನುಬಂಧ - ೧ ರ ಪುಸ್ತಕಗಳ ಪಟ್ಟಿ.

ಬಂದಿಖಾನೆ ಇಲಾಖಾ ಗ್ರಂಥಾಲಯ, ಜನಪ್ರಿಯ ದಾಟಿಯಲ್ಲಿ ಹೇಳುವುದಾದರೆ ಅವು 'ನಾಮ್ ಕಾ ವಸ್ತೆ' ಗೆ ಇರುವಂತಿದೆ ಅಥವ ಗ್ರಂಥಾಲಯ ಇರಬೇಕಾದುದು ಬರೀ ಮನರಂಜನೆಗಾಗಿ ಎಂದು ಅಧಿಕಾರಿಗಳು ತಿಳಿದಂತಿದೆ. ಯಾವ ಉದ್ದೇಶದಿಂದ ಈ ಇಲಾಖಾ ಗ್ರಂಥಾಲಯಗಳನ್ನು ಬಂದಿಖಾನೆಗಳೊಳಗೆ ಸ್ಥಾಪಿಸಲಾಗಿತ್ತೊ ಅದು ಇಂದಿನ ಆಡಳಿತವರ್ಗಕ್ಕೆ ಸಂಪೂರ್ಣ ಮರೆತು ಹೋದಂತಿದೆ. ಸಾರ್ವಜನಿಕ ಗ್ರಂಥಾಲಯದ ಶಾಖಾ ಗ್ರಂಥಾಲಯದ ಮೇಲೆ ಪೂರ್ಣ ಹೊಣೆ ಜಾರಿಸಿ ತಾನು ಬೇಜವಾಬ್ದಾರಿ ಪ್ರದರ್ಶಿಸುತ್ತಿದೆ. ತನ್ನ ಸಂಗ್ರಹದಲ್ಲಿರುವ ಪುಸ್ತಕಗಳನ್ನು ಸಂಗ್ರಹಿಸಿಟ್ಟ ರೀತಿ, ಕೈದಿಗಳಿಗೆ ಬಳಕೆಗೆ ನೀಡುವ ಪರಿ ಎಲ್ಲವೂ ಅವೈಜ್ಞಾನಿಕವಾದುದು, ಅಸಡ್ಡೆಯಿಂದ ಕೂಡಿದುದು ಹಾಗೂ ಅವ್ಯವಸ್ಥಿತವಾದುದು. ತನ್ನಲ್ಲಿ ಗ್ರಂಥಾಲಯ ವಿಜ್ಞಾನದಲ್ಲಿ ಶಿಕ್ಷಣ ಪಡೆದ ವೃತ್ತಿಪರ ಸಿಬ್ಬಂದಿಯಿಲ್ಲ ಎನ್ನುವ ನೆಪವೊಡ್ಡಿ ಪುಸ್ತಕಗಳನ್ನು ಶಾಸ್ತ್ರೀಯವಾಗಿ ವರ್ಗೀಕರಿಸಿ ಸೂಚೀಕರಿಸಿಲ್ಲವಾದರೂ, ಅವುಗಳನ್ನು ಕಪಾಟಿನೊಳಗೆ ಗಾಳಿ - ಬೆಳಕು ಕಾಣಿಸದಂತೆ ದಬ್ಬಿಟ್ಟ ರೀತಿಯಂತೂ ಬಂದಿಖಾನೆಯ ವ್ಯವಸ್ಥೆಗೆ ಸೂಕ್ತವಾದುದಲ್ಲ. ಆಡಳಿತ ವ್ಯವಸ್ಥೆಗೆ ಕನಿಷ್ಠ ಮಟ್ಟದ ಪುಸ್ತಕ ಪ್ರೀತಿ ಇದ್ದಲ್ಲಿ ಆ ಜ್ಞಾನ ಮೂಲವನ್ನು ವ್ಯವಸ್ಥಿತವಾಗಿ ಸಂಗ್ರಹಿಸಿ, ಒಪ್ಪ - ಓರಣದಿಂದ ಸಂರಕ್ಷಿಸಿ, ಗಾಳಿ - ಬೆಳಕುಗಳನ್ನು ಅವುಗಳ ಮೇಲೆ ಹರಿಸಿ ಯೋಗ್ಯ ರೀತಿಯಲ್ಲಿ ಹಾಯಿಸಿ ಜ್ಞಾನದಾಹಿ ಕೈದಿಗಳಿಗೆ ತಲುಪಿಸುವ ವ್ಯವಸ್ಥೆ ಮಾಡುತಿತ್ತು. ಈ ಕೆಲಸಕ್ಕೆ ಗ್ರಂಥಾಲಯ ವೃತ್ತಿಪರ ಸಿಬ್ಬಂದಿಯ ಅವಶ್ಯವಿಲ್ಲ. ತನ್ನ ಇಲಾಖಾ ಪುಸ್ತಕಗಳಿಗೆ ಪರಿಗ್ರಹಣ ಸಂಖ್ಯೆಯನ್ನು ಕೊಟ್ಟು, ಸಂಖ್ಯಾನುಸಾರ ಆ ಪುಸ್ತಕಗಳನ್ನು ಅದೇ ರೀತಿ ಒಪ್ಪವಾಗಿಟ್ಟು, ಕೈದಿಗಳಿಗೆ ವಿತರಿಸುವ ಜವಾಬ್ದಾರಿಯನ್ನು ಒಬ್ಬ ಕೈದಿ ಕಾವಲುಗಾರನಿಗೆ ವಹಿಸಿಕೊಟ್ಟರೂ ಇಲಾಖಾ ಗ್ರಂಥಾಲಯದ ಸ್ಥಾಪನಾ ಉದ್ದೇಶ ಈಡೇರಬಲ್ಲದು.

ರಾಜ್ಯದ ಆರು ಕೇಂದ್ರ ಬಂದಿಖಾನೆಗಳ ಇಲಾಖಾ ಗ್ರಂಥಾಲಯಗಳಲ್ಲಿ, ಬೆಂಗಳೂರು ಕೇಂದ್ರ ಬಂದಿಖಾನೆಯ ಇಲಾಖಾ ಗ್ರಂಥಾಲಯವೊಂದು ಸ್ವಲ್ಪಮಟ್ಟಿಗೆ ವ್ಯವಸ್ಥಿತವಾಗಿರುವುದು ಬಿಟ್ಟರೆ, ಉಳಿದ ಯಾವ ಬಂದಿಖಾನೆಗಳಲ್ಲೂ ಈ ಗ್ರಂಥಾಲಯಗಳು 'ಗ್ರಂಥಾಲಯ' ಎಂದು ಕರೆಸಿಕೊಳ್ಳುವಷ್ಟು ಯೋಗ್ಯತೆಯನ್ನು ಪಡೆದಿಲ್ಲ. ಯಾವುದೋ ಮುಗ್ಗುಲು ವಾಸನೆಯ, ಸುಣ್ಣ ಬಣ್ಣಗಳಿಲ್ಲದ ಹಳೆ ಕೋಣೆಯಲ್ಲಿ ಒಂದೆರಡು 'ಪ್ರಾಚೀನ' ಕಪಾಟುಗಳಲ್ಲಿ ದಬ್ಬಲ್ಪಟ್ಟಿರುವ ಈ ಪುಸ್ತಕಗಳು ಗಾಳಿಯ ಸಂಪರ್ಕವಿಲ್ಲದೆ, ಬಣ್ಣದ ಜತೆ ಶಕ್ತಿಯನ್ನು ಕಳೆದುಕೊಂಡು ಕಳಾಹೀನವಾಗಿವೆ. ಕೆಟ್ಟವಾಸನೆ, ದೂಳುಗಳಿಂದ ಈ ಪುಸ್ತಕಗಳು ಮುಕ್ತವಾಗಿ, ಗಾಳಿ ಬೆಳಕು ಇರುವ ಕೊಠಡಿಯ ಸಂಪರ್ಕದಲ್ಲಿದ್ದರೆ ಕೈದಿಗಳು ಮೂಗು ತೆರೆದಿಟ್ಟು ಓದುವಂತಾದೀತು. ಕಪಾಟುಗಳಲ್ಲಿರುವ ಪುಸ್ತಕಗಳನ್ನು ತೆರೆದು ತೋರಿಸಲು ಸ್ವತಹ ಕೈದಿಗಳೇ ಹಿಂದೇಟು ಹಾಕುತ್ತಿರುವುದು ಪುಸ್ತಕಗಳು ಯಾವ ಸ್ಥಿತಿಯಲ್ಲಿವೆ ಎಂಬುದನ್ನು ಕ್ಷೇತ್ರ ಕಾರ್ಯದ ವೇಳೆ ಗಮನಿಸಲಾಗಿದೆ. ಈ ದುರವಸ್ಥೆಯಲ್ಲಿರುವ ಪುಸ್ತಕಗಳನ್ನು ಯಾವ ಕೈದಿಯೂ ಆತನೆಷ್ಟೇ ಜ್ಞಾನದಾಹಿಯಾದರೂ ಓದಲಾರ ಎಂಬುದು ಸ್ಪಷ್ಟ. ಈ ಇಲಾಖಾ ಗ್ರಂಥಾಲಯದ ಸ್ಥಿತಿ ಕಂಡು

ಓದುವ ಹವ್ಯಾಸವುಳ್ಳ ಕೈದಿ, ಬಂದಿಖಾನೆಯೊಳಗಿನ ಸಾರ್ವಜನಿಕ ಗ್ರಂಥಾಲಯ ಶಾಖಾ ಗ್ರಂಥಾಲಯಕ್ಕೆ ಹೊಕ್ಕನೆಂದರೆ ಅದರ ಸ್ಥಿತಿ ಮತ್ತೂ ಅಧ್ವಾನ.

### ೧.೧೨ ಸಾರ್ವಜನಿಕ ಗ್ರಂಥಾಲಯದ ಬಂದಿಖಾನೆಯ ಶಾಖಾ ಗ್ರಂಥಾಲಯ

ಇವು ಬಂದಿಖಾನೆಗಳೊಳಗೆ ಯಾವ ಸದುದ್ದೇಶ - ಸಾಧನೆಗಾಗಿ ಕಾರ್ಯನಿರ್ವಹಿಸುತ್ತದೆ ಎಂಬ ಅರಿವಿಲ್ಲದಂತೆ ಕಾರ್ಯನಿರ್ವಹಿಸುತ್ತಿವೆ. ಬೆಂಗಳೂರು ಕೇಂದ್ರ ಬಂದಿಖಾನೆಯ ಶಾಖಾ ಗ್ರಂಥಾಲಯವೊಂದನ್ನು ಬಿಟ್ಟರೆ ರಾಜ್ಯದ ಉಳಿದ ಯಾವುದೇ ಕೇಂದ್ರ ಬಂದಿಖಾನೆಗಳಲ್ಲೂ ಈ ಗ್ರಂಥಾಲಯಗಳನ್ನು 'ಗ್ರಂಥಾಲಯ' ಎನ್ನಲಾಗದು. ಸಾರ್ವಜನಿಕ ಗ್ರಂಥಾಲಯ ಒಂದು ವೃತ್ತಿಪರ ಸಂಸ್ಥೆಯಾಗಿದ್ದು, ತನ್ನಲ್ಲಿ ವೃತ್ತಿಪರ ಸಿಬ್ಬಂದಿಗಳಿದ್ದರೂ ಇಲ್ಲಿನ ಶಾಖಾ ಗ್ರಂಥಾಲಯಗಳಲ್ಲಿ ಪುಸ್ತಕಗಳನ್ನು ವ್ಯವಸ್ಥಿತವಾಗಿ ಶಾಸ್ತ್ರೀಯವಾಗಿ ವರ್ಗೀಕರಿಸಿ, ಸೂಚೀಕರಿಸಿಟ್ಟಿಲ್ಲ. ಬೆಂಗಳೂರು ಕೇಂದ್ರ ಬಂದಿಖಾನೆಯೊಂದರಲ್ಲಿ ಮಾತ್ರವೇ ತೆರೆದ ಕಪಾಟು ವ್ಯವಸ್ಥೆ (Open access system) ಬಿಟ್ಟರೆ ಬೇರೆ ಎಲ್ಲಾ ಕೇಂದ್ರ ಬಂದಿಖಾನೆಗಳಲ್ಲಿ ಮುಚ್ಚಿದ ಕಪಾಟು ವ್ಯವಸ್ಥೆಯಿದ್ದು, ಅದರ ಸ್ಥಿತಿ ಇಲಾಖಾ ಗ್ರಂಥಾಲಯ ವ್ಯವಸ್ಥೆಗಿಂತ ಭಿನ್ನವಾಗಿಲ್ಲ. ಹಳೆಯ ಸುಣ್ಣ ಬಣ್ಣವಿಲ್ಲದ, ಗಾಳಿ - ಬೆಳಕು ಹಾಯದ ಕೋಣೆಯೊಂದರಲ್ಲಿ ಇಲಾಖಾ ಗ್ರಂಥಾಲಯದ ಬೀಗ ಜಡಿದ ಪುಸ್ತಕ ಕಪಾಟುಗಳ ಜತೆಗೆ, ಈ ಶಾಖಾ ಗ್ರಂಥಾಲಯದ ಪುಸ್ತಕಗಳೂ ಎರಡು-ಮೂರು ಕಪಾಟುಗಳಲ್ಲಿ ಬೀಗ ಜಡಿದು ಬಿಮ್ಮನೆ ನಿಲ್ಲಿಸಲ್ಪಟ್ಟಿವೆ.

ಈ ಶಾಖಾ ಗ್ರಂಥಾಲಯಗಳ ಮುಖ್ಯ ಉದ್ದೇಶ, ಕೈದಿಗಳಲ್ಲಿ ಓದುವ ಹವ್ಯಾಸ - ಪ್ರವೃತ್ತಿಯನ್ನು ಬೆಳೆಸುವುದರ ಮೂಲಕ ಅವರ ಪ್ರಜ್ಞಾವಲಯವನ್ನು ಹಿಗ್ಗಿಸಿ ಬುದ್ಧಿ, ಬಾವ, ಮನಸ್ಸನ್ನು ಸಂಸ್ಕರಿಸಬಲ್ಲ ಇನ್ನಷ್ಟು ಜ್ಞಾನವನ್ನು ಅವರತ್ತ ಹರಿಸುವುದು. ಆದರೆ ಈಗಿನ ಶಾಖಾ ಗ್ರಂಥಾಲಯ ವ್ಯವಸ್ಥೆ ಕೈದಿಗಳನ್ನು ಜ್ಞಾನಮುಖಿಗಳನ್ನಾಗಿಸುವ ಬದಲು ಜ್ಞಾನವಿಮುಖ ಗೊಳಿಸುವಂತಿದೆ. ಆದರೂ ಅನೇಕ ಜ್ಞಾನದಾಹಿ ಕೈದಿಗಳು ಅದನ್ನೇ ಕಷ್ಟಪಟ್ಟು ಬಳಸುತ್ತಿರುವುದು ಕ್ಷೇತ್ರಕಾರ್ಯದಲ್ಲಿ ಕಂಡ ಸತ್ಯ.

ಕೈದಿಗಳಲ್ಲಿ ಓದುವ ಹವ್ಯಾಸವನ್ನು ಬೆಳೆಸುವ ರೀತಿಯಲ್ಲಿ ಗ್ರಂಥಾಲಯದ ವ್ಯವಸ್ಥೆಯನ್ನು ಸುವ್ಯವಸ್ಥಿತವಾಗಿರಿಸಲು ಪ್ರತೀ ಬಂದಿಖಾನೆಯ ಗ್ರಂಥಾಲಯಕ್ಕೆ, ಸಾರ್ವಜನಿಕ ಗ್ರಂಥಾಲಯ ಇಲಾಖೆಯಿಂದ ಗ್ರಂಥಾಲಯ ಸಹಾಯಕರೊಬ್ಬರನ್ನು ಕಳುಹಿಸಬೇಕೆನ್ನುವ ಪೂರ್ವವ್ಯವಸ್ಥೆಯಾಗಿದ್ದರೂ, ಹಲವು ಬಂದಿಖಾನೆಗಳಲ್ಲಿ ಗ್ರಂಥಾಲಯ ಸಹಾಯಕರೆ ಇಲ್ಲ. ಕೆಲವಡೆ ಇದ್ದರೂ ಅವರು ನಿಯಮಿತವಾಗಿ ಹಾಜರಾಗುತ್ತಿಲ್ಲ.

ಮೈಸೂರು ಕೇಂದ್ರ ಬಂದಿಖಾನೆಯ ಆಡಳಿತ ವರ್ಗದಲ್ಲಿ 'ಗ್ರಂಥಾಲಯ ಸಹಾಯಕರು ಏಕಿಲ್ಲ' ಎಂದು ಪ್ರಶ್ನಿಸಿದಾಗ, 'ಇಪ್ಪತ್ತು ಸಾವಿರಕ್ಕೂ ಮೇಲ್ಪಟ್ಟು ಸಂಗ್ರಹವಿದ್ದರೆ ಮಾತ್ರವೇ ನಗರಕೇಂದ್ರ ಗ್ರಂಥಾಲಯದವರು ಗ್ರಂಥಾಲಯ ಸಹಾಯಕರನ್ನು ಕಳುಹಿಸುತ್ತಾರಂತೆ' ಎನ್ನುವ ಅಂತೆಕಂತೆಗಳ ಉತ್ತರ.

ಬೆಂಗಳೂರು ಕೇಂದ್ರ ಬಂದಿಖಾನೆ ಗ್ರಂಥಾಲಯಕ್ಕೆ ಅನಿಯಮಿತವಾದರೂ ಗ್ರಂಥಾಲಯ ಸಹಾಯಕರೊಬ್ಬರು ಹಾಜರಾಗುತ್ತಿದ್ದು, ಇನ್ನುಳಿದ ಗುಲ್ಬರ್ಗ, ಬಳ್ಳಾರಿ, ಮೈಸೂರು ಕೇಂದ್ರ ಬಂದಿಖಾನೆಗಳಲ್ಲಿ ಯಾವುದೇ ಗ್ರಂಥಾಲಯ

ಸಹಾಯಕರಿಲ್ಲ. ವಿಜಾಪುರ ಮತ್ತು ಬೆಳಗಾಂ ಕೇಂದ್ರ ಬಂದಿಖಾನೆ ಗ್ರಂಥಾಲಯಗಳನ್ನು ವಾರಕ್ಕೊಮ್ಮೆ ಅಥವ ಎರಡು ವಾರಕ್ಕೊಮ್ಮೆ ಗ್ರಂಥಾಲಯ ಸಹಾಯಕರು ಸಂದರ್ಶಿಸುತ್ತಿದ್ದಾರೆ (ಕೋಷ್ಟಕ ೩ ಗಮನಿಸಿ). ಹೆಚ್ಚಿನ ಬಂದಿಖಾನೆಗಳಲ್ಲಿ, ಶಾಖಾ ಗ್ರಂಥಾಲಯವೆಂಬ 'ಗ್ರಂಥಾಲಯ'ದಲ್ಲಿರುವ ಪುಸ್ತಕಗಳನ್ನು ಹಲವು ವರ್ಷಗಳಿಂದ ಬದಲಾಯಿಸಿಲ್ಲ ಎಂದು ಕೈದಿಗಳು ಹೇಳಿರುವ ಹಿನ್ನೆಲೆಯಲ್ಲಿ, ಬಂದಿಖಾನೆ ಮಹಾನಿರೀಕ್ಷಕರ ಕಚೇರಿಯ ಅಧಿಕೃತ 'ಪುಸ್ತಕ ಖರೀದಿ ಸುತ್ತೋಲೆ'ಯ ಉಲ್ಲೇಖವನ್ನು ಪರಿಶೀಲಿಸಿದರೆ ಕೈದಿಗಳ ಮಾತು ಸತ್ಯವೆಂದು ಸ್ಪಷ್ಟಗೊಳ್ಳುತ್ತದೆ. ಮಹಾನಿರೀಕ್ಷಕರ ಕಚೇರಿ ಪತ್ರ (ಅನುಬಂಧ - ೧) ದಲ್ಲಿ, ಇಲಾಖೆಗೆ ತಕ್ಷಣ ಪುಸ್ತಕ ಖರೀದಿಯ ಅಗತ್ಯವನ್ನು ಮನಗಾಣಿಸುತ್ತಾ, "ಬಂದಿಖಾನೆ ಅಧೀಕ್ಷಕರು ಮೇಲಿಂದ ಮೇಲೆ ಪತ್ರ ಬರೆದು 'ಬಂಧಿಗಳಿಗೆ ಅವರ ಸಂಸ್ಥೆಗಳಲ್ಲಿ ವಯಸ್ಕರ ಶಿಕ್ಷಣ ನೀಡಲಾಗುತ್ತಿದ್ದು, ಕೇಂದ್ರೀಯ ಲೈಬ್ರರಿ ವತಿಯಿಂದ ಈಗಾಗಲೇ ಒಂದು ಲೈಬ್ರರಿ ಇದ್ದರೂ, ಅಲ್ಲಿ ಹಳೆಯ ಪುಸ್ತಕಗಳೆ ತುಂಬಿವೆ' ಎಂದು ಹೊಸ ಪುಸ್ತಕಗಳಿಗೆ ಮನವಿ ಮಾಡಿರುವುದರಿಂದ ಹೊಸದಾಗಿ ೪೦ ಪುಸ್ತಕಗಳ ೪೦ ಸೆಟ್ಟುಗಳನ್ನು ಖರೀದಿಸಲು ಅನುಮತಿ ನೀಡಿದೆ" ಎಂಬ ಉಲ್ಲೇಖವಿದೆ. ಹಾಗೆ ಖರೀದಿಸಿದ ಪುಸ್ತಕಗಳು ಕೂಡಾ ಸಕಾಲದಲ್ಲಿ ಜಿಲ್ಲಾ ಬಂದಿಖಾನೆಗಳಿಗೆ ಸರಬರಾಜಾಗದೆ ರಾಜ್ಯಬಂದಿಖಾನೆ ಇಲಾಖಾ ಕಚೇರಿಯಲ್ಲಿ ಅಥವ ಬೆಂಗಳೂರು ಕೇಂದ್ರ ಬಂದಿಖಾನೆಯ ತಿಂಗಳಾನುಗಟ್ಟಲೆ ಉಗ್ರಾಣದಲ್ಲಿ ಕೊಳೆಯುತ್ತಿರುತ್ತವೆ ಎಂಬುದಕ್ಕೆ ಅನುಬಂಧ - ೨ ರ ಒಕ್ಕಣೆಯೇ ಸಾಕ್ಷಿ.

ಬೆಂಗಳೂರಿನ ಕೇಂದ್ರ ಬಂದಿಖಾನೆಯೊಂದನ್ನು ಹೊರತು ಪಡಿಸಿ ರಾಜ್ಯದ ಇತರ ಬಂದಿಖಾನೆಗಳ ಶಾಖಾ ಗ್ರಂಥಾಲಯದಲ್ಲಿ ಹಳೆಯ ಪುಸ್ತಕಗಳೇ ತುಂಬಿದ್ದು, ಅದನ್ನು ವರ್ಷಕ್ಕೊಮ್ಮೆಯಾದರು ಸಂಪೂರ್ಣ ಬದಲಾಯಿಸುವ ವೃತ್ತಿಪರ ಪ್ರಜ್ಞೆಯ ಕೊರತೆ ಸಾರ್ವಜನಿಕ ಗ್ರಂಥಾಲಯದ ಆಡಳಿತದಲ್ಲಿದೆ ಎಂಬುದು ಸ್ಪಷ್ಟ. ಅದೇ ಪುಸ್ತಕ - ಅದೇ ಜ್ಞಾನ - ಅದೇ ಓದು. ಕೈದಿಗಳು ಪುಸ್ತಕಗಳಿಂದ ವಿಮುಖರಾಗುತ್ತಿದ್ದಾರೆ. 'ಸ್ವಾತಂತ್ರ್ಯವಿಲ್ಲದ ಜಗತ್ತ'ಲ್ಲಿರುವ ಕೈದಿಗಳು, ಅವರ ಎದುರಿಗಿಟ್ಟಿರುವ ಜ್ಞಾನವನ್ನು ಮತ್ತೆ ಮತ್ತೆ ಉಣಬೇಕೆಂದು ಒತ್ತಡ ಹೇರ ಹೊರಟಿರುವ ಬಂದಿಖಾನೆ ಆಡಳಿತ ವ್ಯವಸ್ಥೆ ಹಾಗೂ ಸಾರ್ವಜನಿಕ ಗ್ರಂಥಾಲಯ ಇಲಾಖೆ ಕೈದಿಗಳ ಓದುವ ಹವ್ಯಾಸವನ್ನೇ ಮುರುಟಿಸುತ್ತಿದೆ. ಅವರತ್ತ ಜ್ಞಾನ ಹರಿದು ಬರುವ ಬಾಗಿಲುಗಳನ್ನೇ ಅವು ಮುಚ್ಚುತ್ತಿವೆ. ಬಂದಿಖಾನೆಯೊಳಗಿರುವ ಕೈದಿಗಳಿಗೆ, ಅವರ ಹೊಟ್ಟೆಯ ಹಸಿವನ್ನು ತಣಿಸುವಾಗ ಅವರಿಗೆ ಆಹಾರದಲ್ಲಿ ಆಯ್ಕೆ ಎಂಬುದಿಲ್ಲ - ಆಡಳಿತ ವ್ಯವಸ್ಥೆ ಕೊಡುವ ಸಮತೂಕದ ಆಹಾರವನ್ನೇ ತಿನ್ನಬೇಕು ಎಂಬ ನಿಯಮವಿದೆ. ಆದರೆ ಬೌದ್ಧಿಕ ಹಸಿವನ್ನು ಇಂಗಿಸಿಕೊಳ್ಳುವಾಗಲೂ ಅವರು ವರ್ಷಾನುಗಟ್ಟಲೆ ತಮ್ಮೆದುರಿಗಿಟ್ಟ ಪುಸ್ತಕಗಳನ್ನೇ ಓದಬೇಕೆಂಬುದು ದಂಡ ಪ್ರಕ್ರಿಯಾ ಸಂಹಿತೆಯಲ್ಲಿಲ್ಲ. ಕನಿಷ್ಠ ಅವರ ಸ್ವಾತಂತ್ರ್ಯಹರಣಗೊಂಡ ಮನಸ್ಸು ಚೈತನ್ಯದಾಯಕವಾಗಲು, ಹಳೆಯದ್ದನ್ನು ಮರೆಯಲು ಅವರು ಬಯಸುವ ಪುಸ್ತಕಗಳನ್ನು ಒದಗಿಸುವುದಕ್ಕೂ ಇಲಾಖಾ ಗ್ರಂಥಾಲಯವಾಗಲೀ, ಸಾರ್ವಜನಿಕ ಗ್ರಂಥಾಲಯವಾಗಲೀ ಸಹಕರಿಸದಿರುವುದು ಇಡೀಯ ವ್ಯವಸ್ಥೆಯ ಕ್ರೌರ್ಯತೆಗೆ ಸಾಕ್ಷಿ.

ಕೈದಿಗಳು ಬಯಸುವ ಜ್ಞಾನಶಿಸ್ತುಗಳ ಬಗ್ಗೆ ಪ್ರಶ್ನಾವಳಿಗಳ ಮೂಲಕ ಮಾಹಿತಿ ಸಂಗ್ರಹಿಸಿ, ಅಂಥ ಪುಸ್ತಕಗಳನ್ನು ಬಂದಿಖಾನೆಯ ಗ್ರಂಥಾಲಯ ಶಾಖೆಗೆ ಒದಗಿಸಿದರೆ ಅದಕ್ಕಿಂತ ಮಹತ್ತರವಾದ ಶ್ರೇಷ್ಠ ಜ್ಞಾನಸಂವಹನಾ ಕ್ರಿಯೆ ಬೇರೊಂದಿಲ್ಲ.

ಕರ್ನಾಟಕ ಕೈದಿಗಳು ಇಷ್ಟಪಡುವ, ವಿವಿಧ ಜ್ಞಾನ ಶಿಸ್ತುಗಳು ಯಾವುವು - ಎಂಬ ಅಧ್ಯಯನಕ್ಕಾಗಿ ರಾಜ್ಯದ ೬ ಕೇಂದ್ರ ಬಂದಿಖಾನೆಗಳಲ್ಲಿ ತಲಾ ೨೦ ಮಂದಿ ಕೊಲೆ ಅಪರಾಧ ಎಸಗಿದ ಜೀವಾವಧಿ ಕೈದಿಗಳನ್ನು ಹಾಗೂ ಕೋರಮಂಗಲದ ಬಯಲು ಬಂದಿಖಾನೆಯಲ್ಲಿ ಅದೇ ಅಪರಾಧವುಳ್ಳ ೧೦ ಮಂದಿ ಜೀವಾವಧಿ ಕೈದಿಗಳನ್ನು ಸಂದರ್ಶಿಸಿ ಈ ಕೆಳಗಿನ ಮಾಹಿತಿಯನ್ನು ಪಡೆಯಲಾಯಿತು. ಒಟ್ಟು ೧೩೦ ಮಂದಿ ಕೈದಿಗಳಲ್ಲಿ ೧೨೦ ಮಂದಿ ಪುರುಷರು ೧೦ ಮಂದಿ ಮಹಿಳೆಯರು. ೧೩೦ ಮಂದಿಯಲ್ಲಿ ೭ ಮಂದಿ ಪುರುಷ ಕೈದಿಗಳಿಗೆ ಹಾಗೂ ೩ ಮಂದಿ ಮಹಿಳಾ ಕೈದಿಗಳಿಗೆ ಓದು ಬರಹವಿಲ್ಲ (ಇವರು ಸಾಕ್ಷರತಾ ತರಗತಿಗೆ ಹಾಜರಾಗುತ್ತಿದ್ದರೂ ತಮ್ಮ ಸಹಿ ಹಾಕುವಷ್ಟು ಬರಹ ಹಾಗೂ ಕೆಲವೇ ಕೆಲವು ಅಕ್ಷರಗಳನ್ನು ಗುರುತು ಹಚ್ಚಬಲ್ಲದೇ ವಿನಾ ಓದು - ಬರಹ ಕಲಿಯುವ ಹಂಬಲ - ಆಸಕ್ತಿ ಇದ್ದಂತಿಲ್ಲ. ಇಲ್ಲಿ ಇವರಿಗೆ ಓದಿನ ಅಗತ್ಯ, ಅಕ್ಷರ - ಬರವಣಿಗೆಯ ಮಹತ್ವವನ್ನು ತಿಳಿಸಿಹೇಳುವ ತಿದ್ದುವ ಅಧಿಕಾರಿಗಳಿಗೆ / ಶಿಕ್ಷಕರಿಗೆ ಕೊರತೆಯಿದೆ). ಆದರೆ ಇವರೆಲ್ಲರೂ ಜಾನಪದ ಕೃಷಿ ಸಮಸ್ಯೆ, ವಚನ ಸಾಹಿತ್ಯ (ವಚನಗಳು), ಪುರಾಣ ಕಥೆಗಳನ್ನು ಸಹಚರದಿಂದ ಓದಿಸಿಕೊಂಡು ಅರ್ಥೈಸಿಕೊಳ್ಳುವಷ್ಟು ಜ್ಞಾನಿಗಳು - ಜಾಣರು. ವಯಸ್ಕರ ಶಿಕ್ಷಣ ಯೋಜನೆಯಡಿ ಬಂದಿಖಾನೆಯಲ್ಲೇ ಕಲಿತ ಅಕ್ಷರಾಭ್ಯಾಸದಿಂದ ಒತ್ತಕ್ಷರವಿಲ್ಲದ ದೊಡ್ಡ ಅಕ್ಷರವುಳ್ಳ ಶಬ್ದಗಳನ್ನು ತೀರಾ ಕಷ್ಟಪಟ್ಟು ಓದಬಲ್ಲರು. ಚಿತ್ರದ ಪುಸ್ತಕಗಳನ್ನು ನೋಡಿ ಸಂದರ್ಭಕ್ಕನುಗುಣವಾಗಿ ಸನ್ನಿವೇಶವನ್ನು ಅರ್ಥೈಸಿಕೊಳ್ಳಬಲ್ಲರು. ಉಳಿದ ೧೨೦ ಮಂದಿಯಲ್ಲಿ ೨ ಮಂದಿ ಇಂಗ್ಲೀಷ್ ಪುಸ್ತಕಾಭಿಮಾನಿಗಳು. ಉಳಿದ ೧೧೮ ಮಂದಿ ಕನ್ನಡ ಪುಸ್ತಕಾಭಿಮಾನಿಗಳಲ್ಲಿ -



ಕೈದಿಗಳಿಗೆ ಸಂಗೀತ ಶಿಕ್ಷಣ

ಕೋಷ್ಟಕ ೨

## ಕನ್ನಡಾಸಕ್ತ ಕೈದಿಗಳು ಓದಲಿಚ್ಛಿಸುವ 'ಜ್ಞಾನ ಪ್ರಕಾರ'ಗಳ ವಿವರ

| ಕೈದಿಗಳ ಸಂಖ್ಯೆ | ಪ್ರಕಾರ | ಶೇಕಡವಾರು |
|---|---|---|
| ೫೦ ಮಂದಿ | ಕಾದಂಬರಿ ಪ್ರಿಯರು (ಇದರಲ್ಲಿ ೩೮ ಮಂದಿ ಸಾಮಾಜಿಕ ಕಾದಂಬರಿ ಪ್ರಿಯರು, ೧೨ ಮಂದಿ ಪತ್ತೇದಾರಿ ಕಾದಂಬರಿ ಪ್ರಿಯರು, ೨ ಮಂದಿ ಚರಿತ್ರ ಕಾದಂಬರಿ ಓದಲಿಚ್ಛಿಸುವವರು) | ೪೨.೩೮ |
| ೧೪ ಮಂದಿ | ಕನ್ನಡ ವಚನ ಸಾಹಿತ್ಯ (ವಚನ), ಸಣ್ಣಕಥೆ, ಹಾಸ್ಯ ಮತ್ತು ನಾಟಕ ಪ್ರಿಯರು | ೧೧.೮೬ |
| ೧೪ ಮಂದಿ | ಆಧ್ಯಾತ್ಮಿಕ - ತತ್ತ್ವಶಾಸ್ತ್ರ, ಧರ್ಮದ ಬಗ್ಗೆ ಒಲವುಳ್ಳವರು | ೧೧.೮೬ |
| ೧೩ ಮಂದಿ | ಜಾನಪದ ಕಥೆ - ಕಾವ್ಯ - ಐತಿಹ್ಯ ಓದಲಿಚ್ಛಿಸುವರು | ೧೧.೦೧ |
| ೧೦ ಮಂದಿ | ಚರಿತ್ರೆ (ಕರ್ನಾಟಕ , ಭಾರತ) ಓದುವ ಆಸಕ್ತಿ ಉಳ್ಳವರು | ೮.೪೮ |
| ೦೬ ಮಂದಿ | ವಿಜ್ಞಾನ, ನಿಗೂಢ ವಿಜ್ಞಾನ (ಹಾರುವ ತಟ್ಟೆ), ಪರಿಸರ, ಅತೀಂದ್ರಿಯ ಜ್ಞಾನದ ಬಗ್ಗೆ ಒಲವುಳ್ಳವರು | ೫.೦೯ |
| ೦೫ ಮಂದಿ | ಕಾನೂನು - ನ್ಯಾಯದ ಬಗ್ಗೆ ಒಲವುಳ್ಳವರು | ೪.೨೪ |
| ೦೩ ಮಂದಿ | ಸಿಕ್ಕಿದ್ದನ್ನೆಲ್ಲ ಓದುವವರು, ಅದರಲ್ಲೂ ಆತ್ಮಚರಿತ್ರೆ - ಪ್ರವಾಸ ಸಾಹಿತ್ಯವೆಂದರೆ ಇಷ್ಟ | ೨.೫೪ |
| ೦೩ ಮಂದಿ | ತೆಲುಗು ಕಾದಂಬರಿಗಳ ಕನ್ನಡ ಅನುವಾದ ಇಷ್ಟಪಡುವವರು | ೨.೫೪ |

ಬಂದಿಖಾನೆಯ ಆವರಣದೊಳಗಷ್ಟೇ ಸೀಮಿತವಾದ ಜಗದ ಬೆಳಕನ್ನು ಕಾಣಬೇಕಾದ ಕೈದಿ ಜ್ಞಾನದ ಬೆಳಕನ್ನು ಪಡೆಯಲು ಎಷ್ಟು ಹಂಬಲಿಸುತ್ತಾನೆ ಎಂಬುದು ಮೇಲಿನ ಅಧ್ಯಯನದಿಂದ ಸ್ಪಷ್ಟ.

ಕೈದಿಗಳಲ್ಲಿ ಪುಸ್ತಕ ಸಂಸ್ಕೃತಿ - ಪುಸ್ತಕ ಪ್ರೀತಿ ಹೆಚ್ಚಿಸುವುದಕ್ಕಾಗಿ ಕನ್ನಡ ಪುಸ್ತಕ ಪ್ರಾಧಿಕಾರ ಮತ್ತು ಗಮಕ ಪರಿಷತ್ತು ಸಂಯುಕ್ತವಾಗಿ 'ಪುಸ್ತಕ ಪರಿಮಳ' ಎಂಬ ಪುಸ್ತಕ ಪ್ರದರ್ಶನಾ ಕಾರ್ಯಕ್ರಮವೊಂದನ್ನು ೪-೧೨-೨೦೦೦ ದಂದು ಬೆಂಗಳೂರು ಕೇಂದ್ರ ಬಂದಿಖಾನೆಯಲ್ಲಿ ಏರ್ಪಡಿಸಿತ್ತು. ಆ ಸಂದರ್ಭದಲ್ಲಿ ಕೈದಿಗಳು ಹೊರಹಾಕಿದ ಅನಿಸಿಕೆಗಳು ಇವು : 'ವರ್ಷಗಟ್ಟಲೆ ಕೊಳೆತು ನಾರುವ ಪುಸ್ತಕಗಳನ್ನೆ ಮುಟ್ಟಿ ಓದಿ ರೋಸಿಹೋಗಿದ್ದ ನಮ್ಮನ್ನು ಆ ಪುಸ್ತಕ ಪ್ರದರ್ಶನದಲ್ಲಿದ್ದ ಹೊಸ ಪುಸ್ತಕಗಳು ಪುಳಕಿತಗೊಳಿಸಿದವು'[೧೧] 'ಸಾಹಿತ್ಯ ಪುಸ್ತಕಗಳು ನಮ್ಮ ಬಾಳಿನ ಗೆಳೆಯರು. ಸಾಹಿತ್ಯದ ಓದು ಈ ಬಂಧನದ ಬದುಕಿನಲ್ಲಿ ಗಮನಾರ್ಹ ಪ್ರಗತಿ ತಂದಿದೆ.' 'ಬಂದಿಖಾನೆ ತಮಗೊಂದು ತರಬೇತಿ ಕೇಂದ್ರವಾಗಿದ್ದು, ಕತ್ತಲು ಕವಿದ ನಮ್ಮ ಬಾಳಿಗೆ ಜ್ಞಾನದ ಬೆಳಕು ಮೂಡಿಸಲು ಈ ಪುಸ್ತಕಗಳು ನೆರವಾಗುತ್ತಿವೆ.'[೧೨]

ಕೈದಿಗಳೂ ಎಲ್ಲ ಮನುಷ್ಯರಂತೆ ಸಹಜ ಭಾವನೆಗಳನ್ನು ಹೊಂದಿದವರು. ಅವರಲ್ಲೂ ಓದುವ ತುಡಿತವಿದೆ. ಪುಸ್ತಕಗಳ ಬಗ್ಗೆ ಪ್ರೀತಿ ಇರುವವರಿಗೆ ಮತ್ತಷ್ಟು ಪುಸ್ತಕಗಳನ್ನು ಒದಗಿಸುವುದು, ಪುಸ್ತಕ ಪ್ರೀತಿ ಇಲ್ಲದವರಿಗೆ ಆ ಅನೂಹ್ಯ 'ಲೋಕ'ದ ಪರಿಚಯ ಮಾಡಿಸುವುದು, ಕೈದಿಗಳನ್ನು ಸತ್ಪ್ರಜೆಗಳನ್ನಾಗಿ ಮಾಡಿ ಸಮಾಜಕ್ಕೆ ಕಳುಹಿಸುವುದಕ್ಕಾಗಿಯೆ ಸರಕಾರದಿಂದ ನೇಮಕಗೊಂಡ ಬಂದಿಖಾನೆ ಅಧಿಕಾರಿಗಳ ಆದ್ಯ ಕರ್ತವ್ಯ. ಆದರೆ ಅಧಿಕಾರಿಗಳಿಂದ ಈ ಸಂದರ್ಭದಲ್ಲಿ ಕರ್ತವ್ಯ ಚ್ಯುತಿಯಾಗುತ್ತಿದೆ ಎಂದು ಅಭಿಪ್ರಾಯಪಡಬಹುದು.

'ದುಡ್ಡೊಂದು ಬಿಟ್ಟರೆ ಇನ್ನ್ಯಾವುದಕ್ಕೂ ತಲೆ ಕೆಡಿಸಿಕೊಳ್ಳದ ಈ ಜೈಲು ಸಿಬ್ಬಂದಿ ಒಂಚೂರೂ ಇತ್ತ (ಗ್ರಂಥಾಲಯದತ್ತ) ಗಮನ ಹರಿಸಿದಿದ್ದರೂ ಕೂಡಾ ಎಷ್ಟೋ ಕೈದಿಗಳನ್ನು ಓದುವಂತೆ, ಬರೆಯುವಂತೆ ಬದಲಾಗುವಂತೆ ಮಾಡಬಹುದಿತ್ತು. ಆದರೆ ಅಲ್ಲಿದ್ದ ಕೈದಿಗಳೆಲ್ಲ ಗಾಂಜಾ ಕುಡಿತಕ್ಕೆ ಅಂಟಿಕೊಂಡಿದ್ದರು.'[೨] ಇದು ಬೆಂಗಳೂರು ಕೇಂದ್ರ ಬಂದಿಖಾನೆಯೊಳಗಿದ್ದ ಪ್ರಜ್ಞಾವಂತ ಮಾಜಿ ಕೈದಿ ಪ್ರೊ. ನಗರಿಬಾಬಯ್ಯ ಅವರ ಅನುಭವದ ಅನಿಸಿಕೆ.

ರಾಜ್ಯದ ಬಯಲು ಬಂದಿಖಾನೆಯಲ್ಲಿ ದುಡಿಯುತ್ತಿರುವ ಕೈದಿಗಳಿಗೆ ಯಾವುದೇ ಪುಸ್ತಕಗಳು ಸೋಕದಂತೆ ಮಾಡುವಲ್ಲಿ ಅಧಿಕಾರಿಗಳು ಯಶಸ್ವಿಯಾಗಿದ್ದಾರೆ. ಮೂರು ಹೊತ್ತು ಹಸಿರಲ್ಲಿ ಇರುವವರಿಗೆ ಪುಸ್ತಕದ ಆಸಕ್ತಿ ಹುಟ್ಟಲಾರದು ಎಂದು ಬಂದಿಖಾನೆ ಅಧಿಕಾರಿಗಳು ಭಾವಿಸಿದಂತಿದೆ. ಕ್ಷೇತ್ರಕಾರ್ಯದ ವೇಳೆ ಕೈದಿಗಳು ಈ ಅನಿಸಿಕೆ ವ್ಯಕ್ತಪಡಿಸಿದ್ದರು.

ಈ ಶತಮಾನ ಕಾಗದ ರಹಿತ ಶತಮಾನ (Paperless Century). ಕಂಪ್ಯೂಟರ್ ಹಾಗು ದೂರಸಂಪರ್ಕ ಮಾಧ್ಯಮವನ್ನು ಬಳಸಿ ಗ್ರಂಥಾಲಯವನ್ನು ಆಧುನೀಕೃತಗೊಳಿಸಿ, ಜಗತ್ತಿನೆಲ್ಲೆಡೆ ಲಭ್ಯವಿರುವ ಜ್ಞಾನವನ್ನು ನೇರಸಂಪರ್ಕ ವ್ಯವಸ್ಥೆಯಡಿ (Online System) ಮೂಲಕ ಕ್ಷಣಮಾತ್ರದಲ್ಲಿ ಪಡೆಯಲು ಸಾಧ್ಯವಿರುವ ಕಾಲವಿದು. ಈ ಆಧುನಿಕ ವೈಜ್ಞಾನಿಕ ಪ್ರಗತಿ ನಮ್ಮ ಮುಂದೆ ಇರಬೇಕಾದರೆ, ರಾಜ್ಯದ ಬಂದಿಖಾನೆ ಗ್ರಂಥಾಲಯಗಳು ತಮ್ಮ ಹಳೆಯ ಜಡ್ಡು ಹಿಡಿದ ಗ್ರಂಥಾಲಯದ ಕಲ್ಪನೆ ಮತ್ತು ವ್ಯವಸ್ಥೆಯನ್ನೇ ನೆಚ್ಚಿಕೊಂಡು, ಅಪಾರ ನಿರ್ಲಕ್ಷ್ಯದಿಂದ ಹಳೆಯ ವ್ಯವಸ್ಥೆಯನ್ನು ಇನ್ನಷ್ಟು ಅಧ್ವಾನಗೊಳಿಸಿ ಕೈದಿಗಳ ಎದುರಿಗಿಟ್ಟರೆ, ಅದು ಕೈದಿಗಳ ಮನಪರಿವರ್ತಿಸಬಲ್ಲಂತ ಪರಿಣಾಮಕಾರಿ ಜ್ಞಾನಸಂವಹನ ಮಾಧ್ಯಮವಾಗಲು ಸಾಧ್ಯವಿಲ್ಲ. ಗ್ರಂಥಾಲಯ ಕ್ಷೇತ್ರದಲ್ಲಿ ಪ್ರಚಲಿತವಾಗಿರುವ ಎಲ್ಲ ಮಾಹಿತಿ ಸಾಧನಗಳು, ದೃಕ್ ಶ್ರವಣ ಮತ್ತು ಶೈಕ್ಷಣಿಕ ಮಾಹಿತಿ ಜಾಲ (Net Work) ವನ್ನು ಇಲ್ಲಿನ ಬಂದಿಖಾನೆ ಗ್ರಂಥಾಲಯಗಳಲ್ಲಿ ಬಳಸಿಕೊಂಡಲ್ಲಿ ಕೈದಿ ಕತ್ತಲೆ ಬಂದಿಖಾನೆಯೊಳಗೆ ಕೂತೇ ಹೊರ ಪ್ರಪಂಚವನ್ನು ತಿಳಿಯಬಲ್ಲವನಾಗುತ್ತಾನೆ. ಈ ಪ್ರಕ್ರಿಯೆಯಿಂದ ಕೈದಿಗಳಲ್ಲಿ ನಿಧಾನವಾದರೂ ಪರಿವರ್ತನೆ ಸಾಧ್ಯ. ಈಗಿರುವ ಗ್ರಂಥಾಲಯ ವ್ಯವಸ್ಥೆಯನ್ನು ಉತ್ತಮಪಡಿಸುವುದರ ಜೊತೆಗೆ ಆ 'ವ್ಯವಸ್ಥೆ'ಯನ್ನು ಬಳಸಿಕೊಳ್ಳುವ ಬಗೆ - ವಿಧಾನವನ್ನು ಬೋಧಿಸಬಲ್ಲಂತಾ ವೃತ್ತಿಪರ ಸಿಬ್ಬಂದಿಗಳ ಅವಶ್ಯಕತೆ ರಾಜ್ಯದ ಇಂದಿನ ಬಂದಿಖಾನೆಗಳ ಗ್ರಂಥಾಲಯಗಳಿಗಿವೆ.

'ಕರ್ನಾಟಕ ಬಂದಿಖಾನೆ ಕೈಪಿಡಿ ೧೯೭೮' ರ ನಿಯಮದಡಿ ಒಬ್ಬ ಅಕ್ಷರಸ್ಥ ಕೈದಿ ಒಂದು ಸಲಕ್ಕೆ ಎರಡಕ್ಕಿಂತ ಹೆಚ್ಚು ಪುಸ್ತಕಗಳನ್ನು ಪಡೆಯಲು ಅನುಮತಿಸಬಹುದು ಎಂದಿದೆ. ಅಲ್ಲದೆ ಭಾನುವಾರ ಮತ್ತು ಬಂದಿಖಾನೆಯ ರಜಾ ದಿನಗಳಂದು ಅವರಿಗೆ ನಿಗದಿ ಪಡಿಸಿದ ಬಿಡುವಿನ ವೇಳೆಯಲ್ಲಿ ಪುಸ್ತಕಗಳನ್ನು ಓದಬಹುದು - ಆದರೆ ಕೆಲಸದ ವೇಳೆಯಲ್ಲಿ ಓದತಕ್ಕದಲ್ಲ ಎಂಬ ನಿಯಮವಿದೆ. ಓದುವ ಸಮಯದ ಬಗ್ಗೆ ಇರುವ ನಿಯಮಗಳಲ್ಲಿ, ಕೈದಿ ಸಾಮಾನ್ಯವಾಗಿ ಪುಸ್ತಕ ಓದಲು ಆಯ್ಕೆ ಮಾಡುವ ಸಮಯವೆಂದರೆ ಸಂಜೆ ೬-೧೫ ರ ನಂತರ; ಬ್ಯಾರಕ್ಕಿನೊಳಗೆ ಹೊಕ್ಕು ಬೀಗ ಜಡಿಸಿಕೊಂಡ ನಂತರದ ಕಾಲ. ಆದರೆ ಈ ಓದುವ ಸಮಯದ ನಿಯಮಕ್ಕೂ ಮತ್ತೊಂದು ನಿಯಮದ ಅಡ್ಡಿಯಿದೆ. ಕೆಲವು ಬಂದಿಖಾನೆಗಳಲ್ಲಿ ರಾತ್ರಿ ೯-೩೦ ರ ನಂತರ ಬ್ಯಾರಕ್ಕಿನಲ್ಲಿ ದೀಪ ಉರಿಸುವಂತಿಲ್ಲ. ಬೆಂಗಳೂರು - ಮೈಸೂರು ಬಂದಿಖಾನೆಗಳಲ್ಲಿ ಮಾತ್ರ ಬ್ಯಾರಕ್‌ಗಳಲ್ಲಿ ರಾತ್ರಿದೀಪ ನಿರಂತರ ಉರಿಯುತ್ತಿರುತ್ತವೆ. ಆದರೆ ಪುಸ್ತಕದ ಓದುವ ಹವ್ಯಾಸವಿರದ ಕೈದಿಗಳಿಂದ ಇದಕ್ಕೆ ಆಕ್ಷೇಪಣೆ ಇದೆಯೆಂದು ಕೆಲವು ಕೈದಿಗಳ ಅನಿಸಿಕೆ.

ಪ್ರತೀ ಬಂದಿಖಾನೆಯಲ್ಲಿ ಓದುವ ಕೈದಿಗಳಿಗೊಂದು ಪ್ರತ್ಯೇಕವಾದ ಓದುವ ಬ್ಯಾರಕ್ಕನ್ನು ವ್ಯವಸ್ಥೆ ಮಾಡಬೇಕಾಗಿದೆ. ಎಲ್ಲ ಓದುವ ಸೌಲಭ್ಯವನ್ನು ನೀಡಿದ್ದಲ್ಲಿ ಈ ಮಾಧ್ಯಮ ಮತ್ತಷ್ಟು ಪರಿಣಾಮಕಾರಿಯಾಗಿ ತನ್ನ ಸಂವಹನ ಕಾರ್ಯವನ್ನು ಯಶಸ್ವಿಗೊಳಿಸಬಹುದು. ಬಯಲು ಬಂದಿಖಾನೆಯಲ್ಲೂ ಒಂದಷ್ಟು ಶ್ರೇಷ್ಠ ಪುಸ್ತಕಗಳನ್ನು ಒದಗಿಸಿ ಜ್ಞಾನಮುಖಿಗಳನ್ನಾಗಿ ಮಾಡುವ ಅವಶ್ಯಕತೆ ಇದೆ.

### ಮಹಿಳಾ ಕೈದಿಗಳತ್ತ ಗ್ರಂಥಾಲಯದಿಂದ ಜ್ಞಾನಸಂವಹನೆಯ ತೊಡಕು

ಕ್ಷೇತ್ರಕಾರ್ಯದ ವೇಳೆ ಗಮನಿಸಿರುವ ಮತ್ತೊಂದು ಪ್ರಮುಖ ಅಂಶವೆಂದರೆ - ಗ್ರಂಥಾಲಯ ವ್ಯವಸ್ಥೆಯೆಂಬ ಜ್ಞಾನಸಂವಹನ ಮಾಧ್ಯಮ ಕೈದಿಗಳತ್ತ ಸರಾಗವಾಗಿ ಜ್ಞಾನಸಂವಹನೆ ಮಾಡದಿರುವುದು ಅಥವಾ ಮಹಿಳಾ ಕೈದಿಗಳಿಗೆ ಗ್ರಂಥಾಲಯ ವ್ಯವಸ್ಥೆಯೆಂಬ ಜ್ಞಾನಸಂವಹನ ಮಾಧ್ಯಮವನ್ನು ಸಮರ್ಪಕವಾಗಿ ಬಳಸಲು ಸಾಧ್ಯವಾಗದಿರುವುದು.

ಬಂದಿಖಾನೆಯೊಳಗೆ ಲಭ್ಯವಿರುವ ಎಲ್ಲ ಸೌಲಭ್ಯಗಳ ನೇರ ಉಪಯೋಗವನ್ನು ಸುಲಭವಾಗಿ ಹಾಗೂ ಪರಿಣಾಮಕಾರಿಯಾಗಿ ಪಡೆಯುವವರು ಪುರುಷ ಕೈದಿಗಳು. ಊಟದಿಂದ ಹಿಡಿದು ಉದ್ಯಮ-ಉದ್ಯೋಗದವರೆಗೂ ಆ ಪ್ರಯೋಜನದ ಸಿಂಹಪಾಲು ಪಡೆಯುವವರು ಪುರುಷ ಕೈದಿಗಳಾಗಲು ಮುಖ್ಯಕಾರಣ ಬಂದಿಖಾನೆ ವ್ಯವಸ್ಥೆ ಕೂಡಾ ಹೊರಗಿನ ಪುರುಷ ಪ್ರಧಾನ ಸಮಾಜದಂತೆ ಪುರುಷ ಪ್ರಧಾನವಾಗಿರುವುದು. ಬಂದಿಖಾನೆಯ ನಿಯಮಾನುಸಾರ ಪುರುಷ ಕೈದಿಗಳಿಂದ ಮಹಿಳಾ ಕೈದಿಗಳನ್ನು ಸಂಪೂರ್ಣ ಪ್ರತ್ಯೇಕಿಸಬೇಕೆಂದಿರುವುದರಿಂದ ಮಹಿಳಾ ಕೈದಿಗಳನ್ನು 'ಪುರುಷ ಲೋಕ'ದಿಂದಲೇ ಪ್ರತ್ಯೇಕಿಸಿ ಪ್ರತ್ಯೇಕವಾದ ಯಾರ್ಡ್‌ನಲ್ಲಿ ಇರಿಸಲಾಗಿದೆ. ಇಡಿಯ ಬಂದಿಖಾನೆಯ ವಿಸ್ತೀರ್ಣಕ್ಕೆ ಹೋಲಿಸಿದರೆ ಮಹಿಳಾ ಕೈದಿಗಳನ್ನು ಪ್ರತ್ಯೇಕಿಸಿರುವ ಯಾರ್ಡ್ 'ಅಡುಗೆಮನೆ'ಯಷ್ಟೇ ವಿಸ್ತಾರವುಳ್ಳದ್ದು ಹಾಗೂ ಇದು ಪಂಜರದೊಳಗಿಟ್ಟ ಹಕ್ಕಿಯ ಕಲ್ಪನೆಯನ್ನೇ ತರುವಂತಹದ್ದು (ಬಳ್ಳಾರಿ, ಬೆಂಗಳೂರು ಕೇಂದ್ರ ಬಂದಿಖಾನೆಗಳಲ್ಲಿ ಕೊಂಚ ವಿಸ್ತಾರವುಳ್ಳ ಮಹಿಳಾ ಯಾರ್ಡ್‌ಗಳಿವೆ). ಅಲ್ಲಿ ಅವರಿಗೆ ಅಷ್ಟೇ ಸ್ವಾತಂತ್ರ್ಯ. ಪುರುಷ ಕೈದಿಗಳಿಗೆ ಬಂದಿಖಾನೆಯೊಳಗೆ ಅಡ್ಡಾಡಲು (ಊಟ, ಶೌಚ, ಪ್ರಾರ್ಥನೆ, ವಿರಾಮ, ಉದ್ಯೋಗ...



ಎಂದು ಕೂಡಿಟ್ಟ ಬ್ಯಾರಕ್‌ನಿಂದ ಹೊರಬಂದನಂತರ) ಎಕ್ರೆಗಟ್ಟಲೆ ವಿಸ್ತೀರ್ಣವುಳ್ಳ ಪ್ರದೇಶವಿದೆ. ಅವರು ಅಡ್ಡಾಡುವ ಬಂದಿಖಾನೆಯ ಒಳ ಆವರಣದಲ್ಲಿಅವರಿಗಾಗಿ ಗ್ರಂಥಾಲಯವಿದೆ, ಆಟದ ಮೈದಾನವಿದೆ, ವ್ಯಾಯಾಮಶಾಲೆ ಇದೆ, ದೇವಸ್ಥಾನ, ಮಸೀದಿ, ಚರ್ಚ್‌ನಂತಹ ಪ್ರಾರ್ಥನಾ ಮಂದಿರಗಳಿವೆ. ಆರೋಗ್ಯ ಕೆಟ್ಟರೆ ಅಲ್ಲೇ ಆಸ್ಪತ್ರೆಯಿದೆ. ಆದರೆ ಮಹಿಳಾ ಕೈದಿಗಳಿಗೆ ಇವು ಯಾವುವೂ ಇಲ್ಲ. ಯಾವುದನ್ನೂ ನೇರ ಪುರುಷ ಕೈದಿಗಳಂತೆ ಮುಕ್ತವಾಗಿ ಅಡ್ಡಾಡಿ ಪಡೆಯುವಂತಿಲ್ಲ. ಅಷ್ಟೊಂದು ವಿಸ್ತಾರವಾದ ಬಂದಿಖಾನೆಯಲ್ಲಿ ಮಹಿಳಾ ಕೈದಿಗಳಿಗೆ ಅಡ್ಡಾಡಲು ಇರುವುದು ಹೆಚ್ಚೆಂದರೆ ಒಂದು ಕುಟುಂಬ ವಾಸಿಸುವಷ್ಟು ಸೀಮಿತವಾದ ಪ್ರದೇಶ. ಆಳೆತ್ತರದ ಬೀಗ ಜಡಿದ ಸಣ್ಣ ಕೋಟೆಯಲ್ಲೇ ಆಕೆ ಅಡ್ಡಾಡತಕ್ಕದ್ದು.

ಅಡುಗೆಮನೆಗಷ್ಟೇ ಸೀಮಿತಳಾಗಿರುವ ಮಹಿಳೆಗೆ ಇನ್ನೆಷ್ಟು ಸ್ಥಳಾವಕಾಶ ಬೇಕು ಎಂಬ ಪಾರಂಪರಿಕ ಕಲ್ಪನೆಯಲ್ಲೇ ಆಕೆಗಿಲ್ಲಿ ಸೀಮಿತವಾದ ಜಾಗ ನಿಗದಿಯಾಗಿದೆ ಎಂದು ಅಭಿಪ್ರಾಯ ಪಡಬಹುದು. ಬಂದಿಖಾನೆಯ ನಾಲ್ಕು ಗೋಡೆಗಳ ಮಧ್ಯೆ ಮತ್ತು ನಾಲ್ಕು ಗೋಡೆಗಳೆದ್ದು 'ಪುಟ್ಟ ಮಹಿಳಾ ಜಗತ್ತೊಂದು' ನಿರ್ಮಿತವಾಗಿದೆಯೇ ವಿನಾ ಅಲ್ಲಿಗೆ ಪುರುಷ ಕೈದಿಗಳು ಅನುಭವಿಸುವ ಸೌಲಭ್ಯಗಳು ಅಷ್ಟೇ ಪ್ರಮಾಣದಲ್ಲಿ, ಅದೇ ಸ್ವರೂಪದಲ್ಲಿ ತಲುಪುತ್ತಿಲ್ಲ. ಗ್ರಂಥಾಲಯ ಸೌಲಭ್ಯವೂ ಅಷ್ಟೇ. ತಮಗೆ ಬೇಕೆನಿಸುವ ಪುಸ್ತಕಗಳನ್ನು, ಪತ್ರಿಕೆಗಳನ್ನು ಪುರುಷ ಕೈದಿಗಳಂತೆ ತಾವು ಪುಸ್ತಕಲೋಕದಿಂದ ಆರಿಸಿ ತರುವ ಆಯ್ಕೆ ಸ್ವಾತಂತ್ರ್ಯ ಅಥವಾ ಆಯ್ಕೆ ಸೌಲಭ್ಯ ಮಹಿಳಾ ಕೈದಿಗಳಿಗಿಲ್ಲ. ಓದುವ ಹವ್ಯಾಸವುಳ್ಳವರು ತಮ್ಮ ವಾರ್ಡರ್‌ಗಳಲ್ಲಿ ಪುಸ್ತಕ-ಪತ್ರಿಕೆಗಳಿಗಾಗಿ ಮನವಿ ಮಾಡಿಕೊಂಡರೆ ವಾರ್ಡರ್‌ಗಳ 'ಮೂಡ್-ಮರ್ಜಿ'ಗಳಿಗನುಗುಣವಾಗಿ ಪುಸ್ತಕಗಳು ಕೈದಿಗಳತ್ತ ಬರುತ್ತವೆ. ಹಾಗೆ ಬರುವ ಪುಸ್ತಕಗಳು ಕೈದಿಗಳ ಅಪೇಕ್ಷೆಗೆ ತಕ್ಕಂತಿರುವುದಿಲ್ಲ. ವಾರ್ಡರ್ ತಂದುಕೊಡುವುದನ್ನು ಮಹಿಳಾ ಕೈದಿಯು ಓದಬೇಕೇ ವಿನಾ ಇಂತಹ ಪುಸ್ತಕವೇ ಬೇಕೆಂದು ಅಪೇಕ್ಷಿಸುವಂತಿಲ್ಲ. ಕರ್ನಾಟಕ ಬಂದಿಖಾನೆಯಲ್ಲಿರುವ ಹಲವು ಮಹಿಳಾ ವಾರ್ಡರ್ಸ್ ಹೆಡ್‌ವಾರ್ಡರ್ಸ್‌ಗಳಿಗೇ ಪುಸ್ತಕ ಅಥವಾ ದಿನಪತ್ರಿಕೆ ಓದುವ ಹವ್ಯಾಸವಿಲ್ಲದ ಕಾರಣ ಮಹಿಳಾ ಕೈದಿಗಳ ಓದಿಗೂ

ಇದು ಅಡ್ಡಿಯಾಗುತ್ತಿದೆ -ಎಂದು ಕೆಲವು ಮಹಿಳಾ ಕೈದಿಗಳು ಕ್ಷೇತ್ರಕಾರ್ಯದ ವೇಳೆ ತಮ್ಮ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ಬೆಂಗಳೂರು ಕೇಂದ್ರ ಬಂದಿಖಾನೆಯಲ್ಲಿ ೪.೧೨.೨೦೦೦ ದಂದು ಕನ್ನಡ ಪುಸ್ತಕ ಪ್ರಾಧಿಕಾರದ ವತಿಯಿಂದ ನಡೆದ ಪುಸ್ತಕ ಪ್ರದರ್ಶನವೊಂದರ ಉದ್ಘಾಟನಾ ಭಾಷಣ ಮಾಡಿದ ಕರ್ನಾಟಕ ಸರಕಾರದ ಕಾನೂನು ಸಚಿವ ಡಿ.ಬಿ.ಚಂದ್ರೇಗೌಡ 'ಓದುವ ಹವ್ಯಾಸವುಳ್ಳ ಕೈದಿಗಳಿಗೆ ಶಿಕ್ಷೆಯಲ್ಲಿ ರಿಯಾಯಿತಿ ಮಾಡುವಂತಹ ಕಾಯ್ದೆ ತರಲು ಪ್ರಯತ್ನಿಸಲಾಗುವುದು' ಎಂದು ಹೇಳಿರುವ ಹಿನ್ನೆಲೆಯ ಕುರಿತು ಕೈದಿಗಳನ್ನು ಪ್ರಶ್ನಿಸಿದಾಗ ಅವರಿಂದ ಬಂದ ಕುತೂಹಲಕರ ಉತ್ತರ ಹೀಗಿದೆ :

೧. ಮಂತ್ರಿಗಳು ಆ ದಿನದ ಭಾಷಣಕ್ಕಾಗಿ ಮಾತನಾಡಿದ್ದಾರೆ ಅಷ್ಟೇ. ಅವರ ಮುತ್ತಿನಂತಹ ಮಾತುಗಳನ್ನು ಸಾಂದರ್ಭಿಕವಾಗಿ ಉದುರಿಸಿದ್ದಾರೆ, ಅದನ್ನು ನಾವು ಸೀರಿಯಸ್ ಆಗಿ ಪರಿಗಣಿಸಕೂಡದು ಎಂದು ಕೆಲವು ಪ್ರಜ್ಞಾವಂತ ಕೈದಿಗಳು ಹೇಳಿದರೆ, ಮತ್ತೆ ಕೆಲವರು

೨. ಮಂತ್ರಿಗಳು ನಿಜವಾಗಿ ಆ ಕಾಯ್ದೆ ಜಾರಿಗೆ ತಂದರೆ, ಪ್ರತಿಯೊಬ್ಬ ಅನಕ್ಷರಸ್ಥ ಕೈದಿಯು ಮೂರೇ ಮೂರು ತಿಂಗಳಲ್ಲಿ ಕಾದಂಬರಿ ಓದಿಕೊಳ್ಳುವಷ್ಟು ಓದು-ಬರಹವನ್ನು ಕಲಿತುಕೊಂಡು ಓದುವ ಹವ್ಯಾಸವನ್ನು ಬೆಳೆಸಿಕೊಂಡು ತನ್ನ ಶಿಕ್ಷೆಯ ಅವಧಿಯನ್ನು ಕಡಿಮೆ ಮಾಡಿಸಿಕೊಳ್ಳಲು ಹಿಂದೆ ಬೀಳಲಾರ ಎಂದು ಪ್ರತಿಕ್ರಿಯಿಸುತ್ತಾರೆ. ಮತ್ತೆ ಕೆಲವರು

೩. ಆ ಮಂತ್ರಿಗಳು, ಓದುವ ಹವ್ಯಾಸವನ್ನು ನಮ್ಮಲ್ಲಿ ಬೆಳೆಸುವಂತಹ ಬಂದಿಖಾನೆ ಸಿಬ್ಬಂದಿಗಳಿಗೆ ಡಬಲ್ ಪ್ರಮೋಶನ್ ಕೊಡುತ್ತೇವೆಂದು ಘೋಷಿಸಬೇಕಿತ್ತು. ಹಾಗಿದ್ದಲ್ಲಿ ಇನ್ನಷ್ಟು ಪುಸ್ತಕಗಳನ್ನು ಓದಲು ನಮಗೆ ಅವಕಾಶ ದೊರೆಯುತ್ತಿತ್ತು, ಅಕ್ಷರಸ್ಥನೂ ಓದು-ಬರಹ ಕಲಿತು ಓದುವ ಬುದ್ಧಿ ಬೆಳೆಸಿಕೊಳ್ಳುತ್ತಿದ್ದ.

ಕೈದಿಗಳ ಈ ಸಹಜ ಅನಿಸಿಕೆ-ಲೇವಡಿ ಮಾತುಗಳು ಗ್ರಂಥಾಲಯ ವ್ಯವಸ್ಥೆಯಲ್ಲಿರುವ ಅಥವಾ ಆಡಳಿತ ವ್ಯವಸ್ಥೆಯಲ್ಲಿರುವ ಸಣ್ಣ ಕೊರತೆ - ಲೋಪದೋಷಗಳಿಗೆ ಕನ್ನಡಿ ಹಿಡಿಯುಂತಹದ್ದು.

### ೧.೧೩ ಬಂದಿಖಾನೆ ಗ್ರಂಥಾಲಯಗಳಲ್ಲಿ ದಿನಪತ್ರಿಕೆ - ನಿಯತಕಾಲಿಕೆಗಳು

ಪತ್ರಿಕೆ ಮತ್ತು ನಿಯತಕಾಲಿಕೆಗಳು ಒಂದು ಸಮಾಜದ ದೈನಂದಿನ ಕಾರ್ಯಕ್ರಮದಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುವ ಆರೋಗ್ಯಕರವಾದ ಅಂಗ. ಅದರ ಮುಖ್ಯ ಉದ್ದೇಶ ಮಾಹಿತಿ ಅಥವ ಸುದ್ದಿ ಪ್ರಸಾರ ಮಾಡುವುದು, ಹೊಸಸಂಗತಿಗಳ ಬಗ್ಗೆ ಅರಿವು ಮೂಡಿಸಿ ಓದುಗನ ಬೌದ್ಧಿಕ ಹಸಿವನ್ನು ತಣಿಸುವುದು.

ಓದುವ ಹವ್ಯಾಸವುಳ್ಳ ಕೈದಿ, ಏಕತಾನತೆಯ ತಾಣವಾಗಿರುವ ಬಂದಿಖಾನೆಯ ನೀರವ ಮೌನವನ್ನು ಹೊಡೆದಟ್ಟಲು ಅಲ್ಲಿ ಓದಿಗಾಗಿ ಎಷ್ಟು ಹಂಬಲಿಸುತ್ತಾನೆ ಎಂಬುದನ್ನು ಲೋಹಿಯಾ ಅವರು ತಮ್ಮ ಲಾಹೋರ್ ಸೆರೆಮನೆಯ ಯಾತನೆಯ ಬದುಕಿನಲ್ಲಿ ಸ್ವತಃ ಅನುಭವಿಸಿದ್ದಾರೆ.

'..... ಲೋಹಿಯಾ ಲಾಹೋರ್ ಕೋಟೆಯ ಬಂದಿಖಾನೆಗೆ ಆಗಮಿಸಿದ ನಂತರ ಸುಮಾರು ೪ ತಿಂಗಳವರೆಗೆ ಖಾಲಿ ಅಥವ ಬರೆದ ಕಾಗದದ ಒಂದು ತುಣುಕು ಕೂಡಾ ಕಾಣಸಿಗಲಿಲ್ಲ. ಒಂದು ದಿನ ಅದೇನು ತಿಳಿಯಿತೋ ಅಧಿಕಾರಿ, ಲೋಹಿಯಾ ಅವರಿಗಾಗಿ ಒಂದಿಷ್ಟು ಸಕ್ಕರೆ ತಾ ಎಂದು ಪೇದೆಗೆ ಆಜ್ಞಾಪಿಸಿದ. ಆಗ ಸಕ್ಕರೆ ಕಟ್ಟಲು ಬಳಸಿದ ಕಾಗದದ ತುಣುಕು ಲೋಹಿಯಾ ಬಳಿ ಬಂದಿತ್ತು. ಪತ್ರಿಕೆಯ ಹರಿದ ತುಣುಕದು. ಅದು ಉರ್ದು ಪತ್ರಿಕೆಯದು. ತನ್ನ ಸಕ್ಕರೆಯ ಆಸೆ ಬದಿಗೊತ್ತಿ ಲೋಹಿಯಾ ತುಂಬ ಆಸಕ್ತಿಯಿಂದ ಮರೆತುಹೋದ ಲಿಪಿಯ ಒಂದೊಂದು ಅಕ್ಷರವನ್ನೂ ಓದಿದರು. ಮತ್ತೆ ಮತ್ತೆ ಓದಿದರು.... ಓದಿದ್ದನ್ನೇ ಓದಿದರು. ಆಗ 'ಓದುವ'ಜೀವಸೆಲೆ ತನ್ನಲ್ಲಿ ಇನ್ನೂ ಬತ್ತಿಲ್ಲವೆಂದು ಅವರಿಗನಿಸಿತ್ತು.'[೧೪]

ಓದುವ ಹವ್ಯಾಸವುಳ್ಳ ಕೈದಿ ಓದಿಗಾಗಿ ಎಷ್ಟು ಹಂಬಲಿಸುತ್ತಾನೆ. ಬಂದಿಖಾನೆಯ ಬದುಕಿನಲ್ಲಿ ಅದು ಆತನಿಗೆ ಎಷ್ಟು ಮುಖ್ಯವೆಂಬುದನ್ನು ಲೋಹಿಯಾ ಅವರ ಈ ಅನುಭವವೇ ಅದನ್ನು ಧ್ವನಿಸುತ್ತದೆ. ಯಾವುದೇ ಕೈದಿಯ ಓದಿಗಾಗಿ ಗ್ರಂಥಾಲಯದಲ್ಲಿ ಪುಸ್ತಕಗಳು ಎಷ್ಟು ಮುಖ್ಯವೋ ಹಾಗೆಯೇ ನಿಯತಕಾಲಿಕೆ, ದಿನಪತ್ರಿಕೆಗಳೂ ಅಷ್ಟೇ ಮುಖ್ಯ. ಬಂದಿಖಾನೆಯೊಳಗಿನ ಇಲಾಖಾ ಗ್ರಂಥಾಲಯ ಹಾಗೂ ಸಾರ್ವಜನಿಕ ಗ್ರಂಥಾಲಯದ ಶಾಖೆಗಳು ಕೈದಿಗಳಿಗೆ ಪ್ರತ್ಯೇಕ ಪ್ರತ್ಯೇಕವಾಗಿ ದಿನಪತ್ರಿಕೆ - ನಿಯತಕಾಲಿಕೆಗಳನ್ನು ಒದಗಿಸುವ ಪರಿಪಾಠವನ್ನಿರಿಸಿಕೊಂಡಿದ್ದವು.

ಇಲಾಖಾ ಗ್ರಂಥಾಲಯಕ್ಕಂತೂ ಪ್ರತಿ ೨೦ ಕೈದಿಗಳಿಗೆ ೧ ಪತ್ರಿಕೆಯಂತೆ ಖರೀದಿಸಿ ಒದಗಿಸಬೇಕೆಂಬ ನಿಯಮವೇ ಸ್ಪಷ್ಟವಿದೆ. ಕರ್ನಾಟಕ ಬಂದಿಖಾನೆ ಕೈಪಿಡಿ - ೧೯೭೮ ರ ಅನ್ವಯ ನಿಯಮ ೨೮೨ ರಂತೆ ಇಲಾಖಾ ವೆಚ್ಚದಲ್ಲಿ, ಈ ಕೆಳಕಂಡ ಪ್ರಮಾಣದಲ್ಲಿ ವೃತ್ತಪತ್ರಿಕೆ, ನಿಯತಕಾಲಿಕೆಗಳನ್ನು ಖರೀದಿ ಮಾಡತಕ್ಕದ್ದು. ಪ್ರತೀ ೨೦ ಜನ ಅಕ್ಷರಸ್ಥ ಬಂದಿಗಳಿಗೆ ಸ್ಥಳೀಯ ಭಾಷೆಯ ಒಂದು ದಿನ ಪತ್ರಿಕೆ, ಪ್ರತೀ ೩೦ ಜನ ಅಕ್ಷರಸ್ಥ ಬಂಧಿಗಳಿಗೆ ಸಾಪ್ತಾಹಿಕದ ಒಂದು ಪ್ರತಿ, ಪ್ರತೀ ೪೦ ಜನ ಅಕ್ಷರಸ್ಥ ಬಂಧಿಗಳಿಗೆ ಒಂದು ಮಾಸಪತ್ರಿಕೆಯನ್ನು ಖರೀದಿ ಮಾಡತಕ್ಕದ್ದು. ಇವು ಬಂದಿಖಾನೆ ಮಹಾನಿರೀಕ್ಷಕರು ಅನುಮೋದಿಸಿರುವ ಪತ್ರಿಕಾಪಟ್ಟಿಯಲ್ಲಿ ಇರತಕ್ಕದ್ದು.'[೧೫]

ಪ್ರಕಟವಾಗುತ್ತಿರುವ ಹೆಚ್ಚಿನ ಪತ್ರಿಕೆ, ನಿಯತಕಾಲಿಕೆಗಳು ಕೈದಿಗಳಿಗೆ ಸಿಗುವಂತಾಗಲಿ ಎಂಬ ಉದ್ದೇಶದಿಂದ, ಹಿಂದೆಲ್ಲ ಇಲಾಖಾ ಗ್ರಂಥಾಲಯ ಹಾಗೂ ಶಾಖಾ ಗ್ರಂಥಾಲಯದ ಮುಖ್ಯಸ್ಥರು ಪರಸ್ಪರ ಹೊಂದಾಣಿಕೆಯ ಮೇಲೆ ಎರಡೂ ಕಡೆ ಪತ್ರಿಕೆ - ನಿಯತಕಾಲಿಕೆಗಳು ಡುಪ್ಲಿಕೇಷನ್ ಆಗದಂತೆ ಕಾಳಜಿ ವಹಿಸಿ ಅವುಗಳನ್ನು ಗ್ರಂಥಾಲಯಕ್ಕೆ ತರಿಸುತ್ತಿದ್ದರು.

ಆದರೆ ಇತ್ತೀಚೆಗೆ ಈ ಕಾಳಜಿ ಸಂಪೂರ್ಣ ನಾಶವಾಗಿರುವುದು ಹಾಗೂ ಕೆಲವು ಬಂದಿಖಾನೆಗಳ ಇಲಾಖಾ ಗ್ರಂಥಾಲಯ ದಿನಪತ್ರಿಕೆ - ನಿಯತಕಾಲಿಕೆ ತರಿಸುತ್ತಿದ್ದರೆ, ಇನ್ನೂ ಕೆಲವು ಬಂದಿಖಾನೆಗಳಲ್ಲಿ ಇಲಾಖಾ ಗ್ರಂಥಾಲಯ ದಿನಪತ್ರಿಕೆ - ನಿಯತಕಾಲಿಕೆಗಳನ್ನು ತರಿಸುತ್ತಿಲ್ಲ. ಗುಲ್ಬರ್ಗ ಬಂದಿಖಾನೆಯಲ್ಲಿ ಇಲಾಖಾ ಗ್ರಂಥಾಲಯ ದಿನಪತ್ರಿಕೆ ನಿಯತಕಾಲಿಕೆಗಳನ್ನು ತರಿಸುತ್ತಿಲ್ಲ. ಹಲವು ಬಂದಿಖಾನೆಗಳಲ್ಲಿ ಸಾರ್ವಜನಿಕ ಗ್ರಂಥಾಲಯ ಶಾಖೆ ಪತ್ರಿಕೆ, ನಿಯತಕಾಲಿಕೆಗಳನ್ನು ತರಿಸುತ್ತಿದ್ದರೆ, ಬಳ್ಳಾರಿ ಕೇಂದ್ರ ಬಂದಿಖಾನೆಯಲ್ಲಿ ಸಾರ್ವಜನಿಕ ಗ್ರಂಥಾಲಯ ಶಾಖಾ ಗ್ರಂಥಾಲಯ ಪತ್ರಿಕೆ - ನಿಯತಕಾಲಿಕೆಗಳನ್ನು ತರಿಸುತ್ತಿಲ್ಲ. ೨೦೦೦ - ೨೦೦೨ ರ ವರೆಗೆ ಮೂರು ಬಾರಿ ಕ್ಷೇತ್ರ

ಕಾರ್ಯದ ಮೂಲಕ ನಡೆಸಿದ ಅಧ್ಯಯನದ ವೇಳೆ ತಿಳಿದುಕೊಂಡ ಅಂಶವೆಂದರೆ ಬೆಂಗಳೂರು ಕೇಂದ್ರ ಬಂದಿಖಾನೆಗಳನ್ನು ಹೊರತುಪಡಿಸಿ ಉಳಿದ ಎಲ್ಲ ಕೇಂದ್ರ ಬಂದಿಖಾನೆ ಹಾಗೂ ಬಯಲು ಬಂದಿಖಾನೆಗಳಲ್ಲಿ ಪತ್ರಿಕೆ - ನಿಯತಕಾಲಿಕೆ ಖರೀದಿಯಲ್ಲಿ ಇಲಾಖಾ ಕೈಪಿಡಿಯ ನಿಯಮವನ್ನು ಸ್ಪಷ್ಟವಾಗಿ ಉಲ್ಲಂಘಿಸಲಾಗಿದೆ. (ಕೋಷ್ಟಕ ೩ ಗಮನಿಸಿ)

ದಿನಪತ್ರಿಕೆ - ನಿಯತಕಾಲಿಕೆಗಳು ಸಕಾಲದಲ್ಲಿ ಕೈದಿಗಳ ಕೈ ಸೇರುತ್ತಿಲ್ಲ ಎಂಬ ಬಗ್ಗೆ ಕ್ಷೇತ್ರಕಾರ್ಯದ ವೇಳೆ ಹಲವು ಕೈದಿಗಳಿಂದ ಅಭಿಪ್ರಾಯ ವ್ಯಕ್ತವಾಗಿವೆ.

'...ಅವರೆಲ್ಲ ಓದಿದ ನಂತರ ಪತ್ರಿಕೆಗಳು ನಮ್ಮ ಕೈ ಸೇರುವ ಹೊತ್ತಿಗೆ ಮಧ್ಯಾಹ್ನ - ಸಂಜೆಯಾಗಿರುತ್ತೆ... ಅಥವ ಮರುದಿನ' ಎಂದು ಕೆಲವು ಬಂದಿಖಾನೆಗಳ ಹಲವು ಕೈದಿಗಳು ಹೇಳಿದಾಗ 'ಅವರೆಲ್ಲ...ಎಂದರೆ ಯಾರು?' ಎಂಬ ಪ್ರಶ್ನೆಗೆ ಉತ್ತರ ಮೌನ.

ನಿಯತಕಾಲಿಕೆಗಳಂತೂ ಬಂದಿಖಾನೆಯೊಳಗೆ ಕೈದಿಗಳ ಕೈಗೆ ದಾಟಿ ಬರುವಷ್ಟರಲ್ಲಿ 'ಅನಿಯತಕಾಲಿಕೆ'ಗಳಾಗಿರುತ್ತವೆ ಎಂಬುದನ್ನು ಹಲವು ಕೈದಿಗಳು ಸ್ಪಷ್ಟಪಡಿಸಿದ್ದಾರೆ. ರಾಜಧಾನಿಗೆ ಹತ್ತಿರವಿರುವ ಬಂದಿಖಾನೆಗಳ ಕೈದಿಗಳಿಗೆ ಈ ಸಮಸ್ಯೆ ಸಣ್ಣದಾಗಿದ್ದರೆ, ರಾಜಧಾನಿಗೆ ದೂರವಿರುವ ಕೇಂದ್ರ ಬಂದಿಖಾನೆಗಳಲ್ಲಂತೂ ಈ ಸಮಸ್ಯೆ ಬಹಳ ದೊಡ್ಡದು. ಬೆಳಗಾವಿ ಕೇಂದ್ರ ಬಂದಿಖಾನೆಯಲ್ಲಿ ಈ ಸಮಸ್ಯೆಯನ್ನು ನೀಗಿಸುವುದಕ್ಕಾಗಿಯೇ 'ಸಂಯುಕ್ತ ಕರ್ನಾಟಕ'ದ ಹತ್ತು ಪ್ರತಿಯನ್ನು ದಿನನಿತ್ಯ ತರಿಸಲು ಕ್ರಮ ಕೈಗೊಳ್ಳಲಾಗಿದೆ. ಗುಲ್ಬರ್ಗ ಕೇಂದ್ರ ಬಂದಿಖಾನೆಯಲ್ಲಂತೂ ಸಾರ್ವಜನಿಕ ಗ್ರಂಥಾಲಯದ ಶಾಖಾ ಗ್ರಂಥಾಲಯ ಹಾಗೂ ಇಲಾಖಾ ಗ್ರಂಥಾಲಯ ಎರಡೂ ಸಂಪೂರ್ಣ ನಿಸ್ತೇಜಗೊಂಡಿವೆ. ಕೈದಿಗಳ ಹೊಟ್ಟೆಯ ಹಸಿವೆಗೆ ಒಂದಷ್ಟು ಊಟ ಒದಗಿಸಿ, ಉಸಿರಾಡುವಷ್ಟು ಜೀವಂತವಾಗಿರಿಸಿದರೆ ಸಾಕು. ಅವರ ಬೌದ್ಧಿಕ ಹಸಿವಿಗೂ, ಬಂದಿಖಾನೆ ಆಡಳಿತಕ್ಕೂ ಏನೇನೂ ಸಂಬಂಧವಿಲ್ಲ ಎಂಬ ನಿರ್ಲಕ್ಷ್ಯತೆಯೇ ಅಲ್ಲಿ ಎಲ್ಲೆಲ್ಲೂ ಕಂಡು ಬರುತ್ತದೆ. ಬಂದಿಖಾನೆ ಇಲಾಖಾ ಕೈಪಿಡಿಯಲ್ಲಿ ನಿಯಮ ಸ್ಪಷ್ಟವಾಗಿರುವಾಗ, ಬಂದಿಖಾನೆಯಲ್ಲಿ ೬೦೦ ಕ್ಕೂ ಮಿಕ್ಕಿ ಕೈದಿಗಳಿದ್ದಾಗಲೂ ಕೈದಿಗಳಿಗಾಗಿ ದಿನಪತ್ರಿಕೆ ಮತ್ತು ನಿಯತಕಾಲಿಕೆ ತರಿಸಲು ಯಾವುದೇ ಕ್ರಮ ಕೈಗೊಂಡಿಲ್ಲದಿರುವುದು, ಆಡಳಿತದ ನಿರ್ಲಕ್ಷ್ಯತೆಗೆ ಒಂದು ಉದಾಹರಣೆ (ಗಮನಿಸಿ ಕೋಷ್ಟಕ ೩). ಗುಲ್ಬರ್ಗ ಕೇಂದ್ರ ಬಂದಿಖಾನೆಯಲ್ಲಿನ ಸಾರ್ವಜನಿಕ ಗ್ರಂಥಾಲಯ ಇಲಾಖೆ ಶಾಖೆ ಮಾತ್ರವೇ ತರಿಸುತ್ತಿರುವ ಕೆಲವೇ ದಿನಪತ್ರಿಕೆಗಳು ಕೈದಿಗಳಿಗೆ ಕೈಗೆ ಎಷ್ಟು ಹೊತ್ತಿಗೆ ಸೇರುತ್ತದೆ ಎಂಬುದಕ್ಕೆ ಈ ವಾಕ್ಯವನ್ನು ಉಲ್ಲೇಖಿಸಬಹುದು.

'...ಮಧ್ಯಾಹ್ನ ಇರಬೇಕು. ಹಿಂದಿನ ದಿನದ ಸಂಜೆ ಪತ್ರಿಕೆ ಮತ್ತು ಮುಂಜಾನೆಯ ದಿನಪತ್ರಿಕೆ ಒಟ್ಟಿಗೆ ಇಂದು ಮಧ್ಯಾಹ್ನ ಸಿಕ್ಕಿರುವುದರಿಂದ ಓದ್ತಾ ಇದ್ದೆ...'[೧೬] ಇದು ಸಮಾಜ ಕಾರ್ಯಕರ್ತೆಯೊಬ್ಬರನ್ನು ಗುಲ್ಬರ್ಗ ಕೇಂದ್ರ ಬಂದಿಖಾನೆಯಲ್ಲಿ ವಿಶೇಷ ಕೈದಿಯಾಗಿ ಪರಿಗಣಿಸಿದಾಗ ಆಕೆಗೆ ತಡವಾಗಿಯಾದರೂ ಸಿಕ್ಕ ಸೌಲಭ್ಯ. ಆದರೆ ಬಡಕೈದಿಗಳ ಪಾಡನ್ನು ಊಹಿಸುವುದೂ ಕಷ್ಟ. ಕ್ಷೇತ್ರಕಾರ್ಯದ ವೇಳೆ ತಮ್ಮ 'ಓದುವ ಆಸೆ'ಯನ್ನು ಇಲ್ಲಿನ ಕೈದಿಗಳು ವ್ಯಕ್ತಪಡಿಸುತ್ತಾ, ತಮ್ಮ ವೇದನೆಯನ್ನು ಮಹಾನಿರೀಕ್ಷಕರಿಗೆ ತಿಳಿಸುವಂತೆ ಗುಟ್ಟಾಗಿ ಬಿನ್ನವಿಸಿಕೊಂಡಿದ್ದರು.

ಮೈಸೂರು ಕೇಂದ್ರ ಬಂದಿಖಾನೆಯಲ್ಲಿ ೧೯೮೭ ರಲ್ಲಿ ಬಂದಿಯಾಗಿದ್ದ ಕೆ. ಗೋವಿಂದರಾಜು ಅವರು ತಮ್ಮ ಆತ್ಮಚರಿತ್ರೆಯಲ್ಲಿ, '.... ಇಲ್ಲೊಂದು ವಾಚನಾಲಯವಿದೆ. ಅದೇನೂ ವಾಚನಾಲಯದಂತೆ ಇಲ್ಲ. ಅದರದ್ದು ಇತರ ಬ್ಯಾರಕ್‌ನ ಸ್ವರೂಪವೆ. ಇಲ್ಲಿ ಹಿಂದಿನ ದಿನದ ವಾರ್ತಾ ಪತ್ರಿಕೆಗಳು ಪ್ರಜಾವಾಣಿ, ಕನ್ನಡ ಪ್ರಭ, ಸ್ಥಳೀಯ ದಿನಪತ್ರಿಕೆಗಳು, ಅಲ್ಲಿನ ಸಿಬ್ಬಂದಿ ಸಮುದಾಯವೆಲ್ಲ ಓದಿಯಾದ ಮೇಲೆ ನಿಧಾನಕ್ಕೆ ಮರುದಿನ ಜೈಲಿನೊಳಕ್ಕೆ ಬರುತ್ತವೆ ....'.[೧೭] ಎಂದು ಉಲ್ಲೇಖಿಸಿದ್ದಾರೆ.

೧೯೮೬ ರಲ್ಲಿ ಬೆಂಗಳೂರಿನ ಕೇಂದ್ರ ಬಂದಿಖಾನೆಯಲ್ಲಿದ್ದ ಬಂದಿ ಪ್ರೊ. ನಗರಿ ಬಾಬಯ್ಯನವರು ತಮ್ಮ ಕೃತಿಯಲ್ಲಿ '...ಜೈಲಾಸ್ಪತ್ರೆಗೆ ಸೇರಿದೆ. ಒಂದು ಗಂಟೆಯ ನಂತರ ಪೇಪರು ಸಿಗುತ್ತಿತ್ತು. ಮೊದಮೊದಲು ದಿನಪತ್ರಿಕೆಗಳು ಕೈಗೆ ಸಿಗುತ್ತಲೇ ಇರಲಿಲ್ಲ. ನಂತರ ಒಂದೊಂದು ಸಿಗುತ್ತಾ ಇದ್ದವು'[೧೮] ಎಂದು ಉಲ್ಲೇಖಿಸಿದ್ದಾರೆ.

ಪತ್ರಿಕೆಗಳನ್ನು ಓದಲು ಕಾತರಿಸುವ ಕೈದಿಗಳನ್ನು, ನೀವು ಯಾತಕ್ಕಾಗಿ ಪತ್ರಿಕೆ - ನಿಯತಕಾಲಿಕೆಗಳನ್ನು ಓದುತ್ತೀರಿ ಎಂದು ಪ್ರಶ್ನಿಸಿದಾಗ ಬಂದ ಉತ್ತರ ಶೇಕಡಾ ೪೦ರಷ್ಟು ಕೈದಿಗಳು ಕೇವಲ ಸುದ್ದಿಗಾಗಿ, ಮಾಹಿತಿಗಾಗಿ ಅಥವ ಕತೆ - ಧಾರಾವಾಹಿಗಾಗಿ ಎಂದು ಉತ್ತರಿಸಿದರೆ, ಶೇಕಡಾ ೬೦ ರಷ್ಟು ಕೈದಿಗಳು ಕೊಟ್ಟ ಉತ್ತರ ಇವು :

೧. ನಮ್ಮ ದಿನಭವಿಷ್ಯ - ವಾರಭವಿಷ್ಯ ನೋಡುವುದಕ್ಕಾಗಿ.

ಇಲ್ಲಿ ಕೈದಿಗಳಾಗಿ ಬದುಕುತ್ತಿರುವವರು ಮತ್ತ್ಯಾವ ಉತ್ತಮ ಭವಿಷ್ಯವನ್ನು ನಿರೀಕ್ಷಿಸುತ್ತಿದ್ದೀರಿ ಎಂಬ ಪ್ರಶ್ನೆಗೆ ಉತ್ತರ : ಅವಧಿ ಪೂರ್ವ ಬಿಡುಗಡೆ ಕೆಲವೊಮ್ಮೆ ಘೋಷಣೆಯಾಗಿ ನಮ್ಮ ಭವಿಷ್ಯವೇ ಬದಲಾಗುತ್ತದೆ. ಕೆಲವು ಬಾರಿ ಭವಿಷ್ಯದಲ್ಲಿದ್ದಂತೆ ದಿಢೀರನೆ ಮನೆಮಂದಿ - ಸ್ನೇಹಿತರು ಸಂದರ್ಶನಕ್ಕೆ ಬಂದು ನಮ್ಮನ್ನು ಸಂತೋಷಪಡಿಸುವುದುಂಟು. ಭವಿಷ್ಯ ಕಾಲಂನಲ್ಲಿ ಇದ್ದ ಹಾಗೆ ಮನೆಮಂದಿಗೆ ಸುಖ ಸಂತೋಷ ಪ್ರಾಪ್ತಿಯಾಗುವುದೂ ಇದೆ. ಅಧಿಕಾರಿಗಳಿಂದ ಪ್ರಶಂಸೆ ಎಂದು 'ಭವಿಷ್ಯ'ದಲ್ಲಿದ್ದರೆ ಹಾಗೇ ಆಗುತ್ತದೆ. ಭವಿಷ್ಯದ ಕಾಲಂನಲ್ಲಿ ನಮಗೆ ನಂಬಿಕೆ ಇದೆ - ಹಾಗೆನೇ ಎಲ್ಲವೂ ನಡೆಯುತ್ತದೆ.

೨. ದಿನಪತ್ರಿಕೆ - ವಾರಪತ್ರಿಕೆಗಳಲ್ಲಿ ಬರುವ ಅಪರಾಧ ಮತ್ತು ನ್ಯಾಯದಾನಗಳ ಸುದ್ದಿಗಳನ್ನು ಓದುವುದಕ್ಕಾಗಿ (ಅದನ್ನು ಓದಿ ನಿಮಗೇನು ಲಾಭ ಎನ್ನುವ ಪ್ರಶ್ನೆಗೆ ಉತ್ತರ : ನಮ್ಮ ಹಾಗೆ ಇತರ ನಿರಪರಾಧಿಗಳಿಗೆ ಶಿಕ್ಷೆ ವಿಧಿಸಿದ್ದಾರೋ ಎನ್ನುವ ಕುತೂಹಲಕ್ಕೆ. ಶ್ರೀಮಂತರು ಹಣ ಕೊಟ್ಟು ನ್ಯಾಯವನ್ನು ಹೇಗೆ ಪಡೆಯುತ್ತಾರೆ ಎಂದು ತಿಳಿದುಕೊಳ್ಳಲು. ಅಪರಾಧ ಜಗತ್ತಿನಲ್ಲಿ ಯಾವ ಹೊಸ ರೀತಿಯ ಅಪರಾಧಗಳು ಹುಟ್ಟುತ್ತಿವೆ - ಅಪರಾಧಕ್ಕಾಗಿ ಯಾವ ಹೊಸ ವಿಧಾನವನ್ನು ಅನುಸರಿಸುತ್ತಿದ್ದಾರೆ ಎನ್ನುವುದನ್ನು ತಿಳಿದುಕೊಳ್ಳುವ ಕುತೂಹಲ. ನಮ್ಮ ಅಪರಾಧಕ್ಕೆ ಕೊಟ್ಟ ಶಿಕ್ಷೆಯಂತೆ, ಇತರರಿಗೂ ಅದೇ ಅಪರಾಧಕ್ಕೆ ಅದೇ ಶಿಕ್ಷೆಯನ್ನು ನ್ಯಾಯಾಧೀಶರೆಂಬ 'ನಿರಪರಾಧಿಗಳನ್ನು ಶಿಕ್ಷಿಸುವವರು' ನೀಡುತ್ತಿದ್ದಾರೋ ಇಲ್ಲವೋ ಎಂದು ತಿಳಿಯುವ ಹಂಬಲ)

೩. ಆಕ್ಸಿಡೆಂಟ್ ಸುದ್ದಿ ಓದುವುದಕ್ಕೆ ಮತ್ತು ಅದರ ಫೋಟೋ ನೋಡುವುದಕ್ಕೆ.

೪. ಸಿನಿಮಾ ಮಂದಿಯ ಫೋಟೋ ಮತ್ತು ಸಿನಿಮಾದ ದೃಶ್ಯ-ಚಿತ್ರ ನೋಡುವುದಕ್ಕೆ.

೫. ದಿನನಿತ್ಯದ ಪೇಟೆ ಧಾರಣೆ (ಮಾರುಕಟ್ಟೆ ಬೆಲೆ) ಪಟ್ಟಿ ನೋಡುವುದೇ ನಮಗೆ ಇಷ್ಟ. ನಮ್ಮ ಮನೆ ಕಡೆ ಹೊಲದಲ್ಲಿ ಬೆಳೆದಿರುವ ಧಾನ್ಯ - ಅಕ್ಕಿ ಕಾಳುಗಳ ಬೆಲೆಯನ್ನು ಅಂದಾಜು ಮಾಡಿಕೊಳ್ಳಲು ಇದು ನಮಗೆ ಸಹಾಕಾರಿಯಾಗುತ್ತೆ ಎನ್ನುತ್ತಾರೆ ಬೆಳಗಾಂ ಮತ್ತು ಗುಲಬರ್ಗಾ ಕೇಂದ್ರ ಕಾರಾಗೃಹದ ಕೆಲವು ಕೃಷಿ ಹಿನ್ನೆಲೆಯಿಂದ ಬಂದಿರುವ ಜೀವಾವಧಿ ಕೈದಿಗಳು.

ಕೈದಿಗಳು ದಿನಪತ್ರಿಕೆ - ನಿಯತಕಾಲಿಕೆಗಳನ್ನು ಇಂತಾ ಹತ್ತು ಹಲವು ಕಾರಣಗಳಿಗಾಗಿ ತಮ್ಮ 'ಗೆಳೆಯ'ರನ್ನಾಗಿ ಮಾಡಿಕೊಂಡಿದ್ದಾರೆ. ಇದನ್ನು ಸಕಾಲದಲ್ಲಿ ಅವರ ಕೈಗೆ ತಲುಪಿಸಬೇಕಾದುದು ಜ್ಞಾನಸಂವಹನಾ ಪ್ರಕ್ರಿಯೆಯಲ್ಲಿ ತೊಡಗಿಕೊಂಡಿರುವ ಗ್ರಂಥಾಲಯಗಳ ಅಥವ ಬಂದಿಖಾನೆ ಅಧಿಕಾರಿಗಳ ಕರ್ತವ್ಯ.



ಕೈದಿಗಳ ಕುಶಲತೆ

## ಕೋಷ್ಟಕ ೨

# ಕೇಂದ್ರ ಮತ್ತು ಬಯಲು ಬಂದಿಖಾನೆಗಳ ಗ್ರಂಥಾಲಯಗಳ ಸಿಬ್ಬಂದಿ, ಪುಸ್ತಕ ಮತ್ತು ಪತ್ರಿಕೆಗಳ ವಿವರ

| | | ಬಂದಿಖಾನೆಯೊಳಗಿನ ಸಾರ್ವಜನಿಕ ಗ್ರಂಥಾಲಯದ ಶಾಖೆ | | | ಬಂದಿಖಾನೆ ಇಲಾಖಾ ಗ್ರಂಥಾಲಯ | | | |
|---|---|---|---|---|---|---|---|---|
| ಕೇಂದ್ರ ಬಂದಿಖಾನೆಗಳು | ಸಿಬ್ಬಂದಿ (ಗ್ರಂಥಾಲಯ ಸಹಾಯಕರು) | ದಿನಪತ್ರಿಕೆಗಳು | ನಿಯತಕಾಲಿಕೆಗಳು | ಪುಸ್ತಕಗಳು | ಸಿಬ್ಬಂದಿ | ದಿನಪತ್ರಿಕೆಗಳು | ನಿಯತಕಾಲಿಕೆಗಳು | ಪುಸ್ತಕಗಳು |
| ಬಳ್ಳಾರಿ | ಇಲ್ಲ | - | - | ಕನ್ನಡ ೩೬೮೯<br>ಇಂಗ್ಲಿಷ್ ೬೦<br>ಒಟ್ಟು ೩೭೫೯ | ಇಲ್ಲ | ಪ್ರಜಾವಾಣಿ ೧<br>ಸಂಯುಕ್ತ ಕರ್ನಾಟಕ ೧<br>ಈನಾಡು (ತೆಲುಗು) ೧<br>ಟೈಮ್ಸ್ ಆಫ್ ಇಂಡಿಯಾ ೧<br>ಇಂಡಿಯನ್ ಎಕ್ಸ್‌ಪ್ರೆಸ್ ೧ | ಮಯೂರ ೧<br>ಸುಧಾ ೧<br>ಕಸ್ತೂರಿ ೧<br>ಗೃಹಶೋಭ ೧<br>ಬಾಲಮಿತ್ರ ೧<br>ತರಂಗ ೧<br>ಕರ್ಮಯೋಗಿ ೧<br>ಆಂಧ್ರಪ್ರಭ (ತೆಲುಗು) ೧ | ಕನ್ನಡ ೯೩೭<br>ತೆಲುಗು ೯೧೨<br>ತಮಿಳು ೪೬೫<br>ಇಂಗ್ಲಿಷ್ ೪೮೦<br>ಹಿಂದಿ ೯೯<br>ಉರ್ದು ೨೨<br>ಒರಿಯಾ ೮<br>ಮಲೆಯಾಳಂ ೧೦೭<br>ಒಟ್ಟು ೩೦೨೨ |
| ಗುಲಬರ್ಗಾ | ಇಲ್ಲ<br>(ಜವಾನ ಬರುತ್ತಿದ್ದಾರೆ) | ಪ್ರಜಾವಾಣಿ ೧<br>ಸಂಯುಕ್ತ ಕರ್ನಾಟಕ ೧<br>ಡೆಕ್ಕನ್ ಹೆರಾಲ್ಡ್ ೧<br>ಆಂಧ್ರಪ್ರಭ ೧<br>ಸಂಚಾರ ೧ | ಸುಧಾ ೧<br>ತರಂಗ ೧<br>ಕರ್ಮವೀರ ೧<br>ಕಸ್ತೂರಿ ೧ | ಕನ್ನಡ ೯೧೬<br>ಇಂಗ್ಲಿಷ್ ೪೦೭<br>ಹಿಂದಿ ೨೧೫<br>ಒಟ್ಟು ೧೫೩೮ | ಇಲ್ಲ | | | ಕನ್ನಡ ೧೯೪೪<br>ಹಿಂದಿ ೭೬೭<br>ಇಂಗ್ಲಿಷ್ ೧೬೬<br>ಒಟ್ಟು ೨೮೭೭ |
| ವಿಜಾಪುರ | ಒಬ್ಬರು<br>(ಎರಡು ವಾರಕ್ಕೊಮ್ಮೆ ಬರುತ್ತಿದ್ದಾರೆ) | ಪ್ರಜಾವಾಣಿ ೧<br>ಸಂಯುಕ್ತ ಕರ್ನಾಟಕ ೧ | ಸುಧಾ ೧ | ಕನ್ನಡ ೪೧೩೩<br>ಇಂಗ್ಲಿಷ್ ೧೫೬<br>ಹಿಂದಿ ೪೦<br>ಮರಾಠಿ ೨೭<br>ಒಟ್ಟು ೪೩೫೬ | ಇಲ್ಲ | ಸಂಯುಕ್ತ ಕರ್ನಾಟಕ ೨<br>ಕನ್ನಡ ಪ್ರಭ ೨<br>ಪ್ರಜಾವಾಣಿ ೧<br>ಇಂಡಿಯನ್ ಎಕ್ಸ್‌ಪ್ರೆಸ್ ೧<br>ಡೆಕ್ಕನ್ ಹೆರಾಲ್ಡ್ ೧ | ತರಂಗ ೧ | ಕನ್ನಡ ೮೦೧<br>ಇಂಗ್ಲಿಷ್ ೬೦<br>ಹಿಂದಿ ೧೪೩<br>ಮರಾಠಿ ೨೮೧<br>ಒಟ್ಟು ೧೨೮೫ |

| | | | | | | | | |
|---|---|---|---|---|---|---|---|---|
| ಬೆಳಗಾಂ | ಒಬ್ಬರು<br>(ವಾರಕ್ಕೊಮ್ಮೆ ಬರುತ್ತಿದ್ದಾರೆ) | ಪ್ರಜಾವಾಣಿ ೧<br>ಕನ್ನಡ ಪ್ರಭ ೧<br>ಕನ್ನಡಮ್ಮ ೧<br>ಇಂಡಿಯನ್ ಎಕ್ಸ್‌ಪ್ರೆಸ್ ೧<br>ಡೆಕ್ಕನ್ ಹೆರಾಲ್ಡ್ ೧<br>ತರುಣ ಭಾರತಿ ೧ | ತರಂಗ ೧<br>ಕರ್ಮವೀರ ೧<br>ಲಂಕೇಶ್ ಪತ್ರಿಕೆ ೧<br>ಪ್ರಪಂಚ ೧<br>ಇಂಡಿಯಾ ಟುಡೇ ೧<br>ದಿ ವೀಕ್ ೧<br>ಸಾಲಾರ್ ಉರ್ದು ೧<br>ನಶೇಮಾನ್ ೧ | ಕನ್ನಡ ೫೧೦೬<br>ಇಂಗ್ಲಿಶ್ ೪೧೬<br>ಉರ್ದು ೬೧<br>ಒಟ್ಟು ೫೫೮೩ | ಇಲ್ಲ | | | ಕನ್ನಡ ೧೬೮೪<br>ಇಂಗ್ಲಿಶ್ ೨೦೮<br>ಮರಾಠಿ ೩೮೧<br>ಹಿಂದಿ ೨೨೦<br>ಗುಜರಾತಿ ೬೧<br>ಪರ್ಶಿಯನ್ ೩<br>ಸಿನಾಧಿ ೧೧<br>ಸಂಸ್ಕೃತ ೩<br>ಗುರುಮುಖಿ ೧<br>ಪುಸ್ತು ೫<br>ಉರ್ದು ೫೧<br>ಅರೆಬಿಕ್ ೩೯<br>ಸಿಂದಿ ೧೦<br>ಪೋರ್ಚ್‌ಗೀಸ್ ೪<br>ಒಟ್ಟು ೨೬೨೮ |

| | | | | | | | | |
|---|---|---|---|---|---|---|---|---|
| ಮೈಸೂರು | ಇಲ್ಲ | ಪ್ರಜಾವಾಣಿ ೨<br>ಕನ್ನಡ ಪ್ರಭ ೨<br>ಸಂಯುಕ್ತ ಕರ್ನಾಟಕ ೨<br>ಇಂಡಿಯನ್ ಎಕ್ಸ್‌ಪ್ರೆಸ್ ೧<br>ಡೆಕ್ಕನ್ ಹೆರಾಲ್ಡ್ ೧<br>ಉದಯವಾಣಿ ೧<br>ಏಶ್ಯಿಯನ್ ಏಜ್ ೧<br>ದಿ ಹಿಂದೂ ೧<br>ದಿನಮಣಿ (ತಮಿಳು) ೧<br>ದಿನತಂತಿ (ತಮಿಳು) ೧<br>ಆಂದೋಲನ ೧<br>ಮೈಸೂರು ಮಿತ್ರ ೧<br>ಸ್ಟಾರ್ ಆಫ್ ಮೈಸೂರು ೧<br>ಟೈಮ್ಸ್ ಆಫ್ ಇಂಡಿಯಾ<br>ಜನವಾಹಿನಿ ೧<br>ವಿಜಯ ಕರ್ನಾಟಕ ೧<br>ವಿಜಯಾ ೧<br>ಈಸಂಜೆ ೧<br>ನವಭಾರದ (ಹಿಂದಿ) ೧<br>ಪ್ರಜಾನುಡಿ ೧ | ಮಂಗಳ ೧<br>ಕರ್ಮವೀರ ೧<br>ಸುಧಾ ೧<br>ತರಂಗ ೧<br>ಗೃಹಶೋಭ ೧<br>ದಿಕ್ಸೂಚಿ ೧<br>ಲಂಕೇಶ್ ಪತ್ರಿಕೆ ೧<br>ಹಾಯ್ ಬೆಂಗಳೂರು ೧<br>ಅರಗಿಣಿ ೧<br>ಅಗ್ನಿ ೧<br>ಸ್ಪೋರ್ಟ್ಸ್ ಸ್ಟಾರ್ ೧<br>ಇಂಡಿಯಾ ಟುಡೇ ೧<br>ಫ್ರಂಟ್‌ಲೈನ್ ೧<br>ಎಂಪ್ಲಾಯ್‌ಮೆಂಟ್ ನ್ಯೂಸ್ ೧<br>ಕಾಂಪಿಟಿಷನ್ ಸಕ್ಸಸ್ ೧<br>ತುಷಾರ ೧<br>ಬಾಲಮಿತ್ರ ೧<br>ಆನಂದ ವಿಕಟನ್ (ವೀಕ್ಲಿ) ೧<br>ರೂಪತಾರ ೧<br>ಚಂದಮಾಮ ೧<br>ಫಿಲ್ಮ್ ಫೇರ್ ೧<br>ದಿ ವೀಕ್ ೧<br>ಮಲೆಯಾಳಂ ಮಂಗಳ ೧<br>ಕುಮುದಮ್ ೧<br>ಚುಟುಕು ೧<br>ಸನ್ಮಾರ್ಗ ೧<br>ಕ್ರಾಂತಿ ೧<br>ಕಸ್ತೂರಿ ೧<br>ಮಲ್ಲಿಗೆ ೧ | ಕನ್ನಡ ೬೯೨೯<br>ಇಂಗ್ಲಿಶ್ ೨೨೦<br>ತಮಿಳು ೧೫೦<br>ಒಟ್ಟು ೬೯೨೯ | ಇಲ್ಲ | ಪ್ರಜಾವಾಣಿ ೨<br>ಕನ್ನಡಪ್ರಭ ೨<br>ಸಂಯುಕ್ತ ಕರ್ನಾಟಕ ೨<br>ಡೆಕ್ಕನ್ ಹೆರಾಲ್ಡ್ ೧<br>ಸಾಲಾರ್ (ಉರ್ದು) ೧ | ಮಂಗಳ ೧<br>ಕರ್ಮವೀರ ೧ | ಕನ್ನಡ ೬೦೦ |

| | | | | | | | | |
|---|---|---|---|---|---|---|---|---|
| ಬೆಂಗಳೂರು | ಒಬ್ಬರು<br>ಪ್ರತಿದಿನ ಬರುತ್ತಿದ್ದಾರೆ | ಪ್ರಜಾವಾಣಿ ೫<br>ಕನ್ನಡ ಪ್ರಭ ೫<br>ಸಂಯುಕ್ತ ಕರ್ನಾಟಕ ೫<br>ಉದಯವಾಣಿ ೪<br>ವಿಜಯ ಕರ್ನಾಟಕ ೨<br>ಡೆಕ್ಕನ್ ಹೆರಾಲ್ಡ್ ೧<br>ಟೈಮ್ಸ್ ಆಫ್ ಇಂಡಿಯಾ ೨<br>ದಿ ಹಿಂದೂ ೧ | ಮಂಗಳ ೧<br>ಕರ್ಮವೀರ ೧<br>ಸುಧಾ ೧<br>ತರಂಗ ೧<br>ಗೃಹಶೋಭ ೧<br>ಮಯೂರ ೧<br>ಲಂಕೇಶ್ ಪತ್ರಿಕೆ ೧<br>ರೂಪತಾರಾ ೧<br>ಚಂದಮಾಮಾ ೧<br>ಇಂಡಿಯಾ ಟುಡೇ ೧<br>ದಿ ವೀಕ್ ೧<br>ಸ್ಪೋರ್ಟ್ಸ್ ಸ್ಟಾರ್ ೧<br>ಸ್ಕ್ರೀನ್ ೧ | ಕನ್ನಡ ೯೨೫೭<br>ಇಂಗ್ಲಿಶ್ ೪೫೦<br>ಉರ್ದು ೪೦೦<br>ತೆಲುಗು ೮೦೦<br>ಒಟ್ಟು ೧೦೯೦೭ | ಇಲ್ಲ | ಪ್ರಜಾವಾಣಿ ೬<br>ಕನ್ನಡಪ್ರಭ ೪<br>ಸಂಯುಕ್ತ ಕರ್ನಾಟಕ ೩<br>ಡೆಕ್ಕನ್ ಹೆರಾಲ್ಡ್ ೪<br>ಇಂಡಿಯನ್ ಎಕ್ಸ್‌ಪ್ರೆಸ್ ೩<br>ಟೈಮ್ಸ್ ಆಫ್ ಇಂಡಿಯಾ ೧<br>ಈ ನಾಡು ೨<br>ದಿನತಂತಿ ೨<br>ಸಾಯಾ ಸಾತ್ ಡೈಲಿಂಗ್ ೨<br>ಮಲ್ಯಾಳಿ ೧<br>ರಾಜಸ್ಥಾನಿ ಪತ್ರಿಕಾ ೧ | | ಕನ್ನಡ ೧೭೮೧<br>ಇಂಗ್ಲಿಶ್ ೬೫<br>ಹಿಂದಿ ೧೦<br>ತಮಿಳು ೫<br>ಒಟ್ಟು ೧೮೬೧ |
| ಬಯಲು ಬಂದಿಖಾನೆ | ಇಲ್ಲ | - | - | - | | ಪ್ರಜಾವಾಣಿ ೨<br>ಸಂಯುಕ್ತ ಕರ್ನಾಟಕ ೨<br>ಕನ್ನಡ ಪ್ರಭ ೨ | ಸುಧಾ ೧<br>ಕರ್ಮವೀರ ೧ | - |

ತಮ್ಮ ಕನಸುಗಳೇ ಅರಳದ ಕತ್ತಲ ಜಗತ್ತಲ್ಲಿ ಬದುಕಿನ ಅಮೂಲ್ಯ ಕ್ಷಣಗಳು ಸೋರಿ ಹೋಗುತ್ತಿರುವುದನ್ನು ಕಂಡು ಅಸಹಾಯಕರಾಗಿ ಸಂಕಟ ಪಡುತ್ತಿರುವ ಜೀವಾವಧಿ ಕೈದಿಗಳತ್ತ, ಜ್ಞಾನದ ಬೆಳಕನ್ನು ಸಂವಹಿಸಲು ಸರಕಾರ ಗ್ರಂಥಾಲಯವನ್ನು ಪರಿಣಾಮಕಾರಿಯಾಗಿ ಸಂವಹನ ಮಾಧ್ಯಮ ಎಂದು ಬಳಸಿಕೊಂಡರೂ ಈ ಮಾಧ್ಯಮದ ಸಂವಹನಾ ದಾರಿಯಲ್ಲಿರುವ ಅನೇಕ ಅಡೆತಡೆಗಳನ್ನು ನಿವಾರಿಸಲು ಇಲಾಖೆಯು ಅನೇಕ ಪ್ರಗತಿಪರ ಸಂಸ್ಥೆ, ಸ್ವಯಂಸೇವಕ ಸಂಘಟನೆಗಳ ಸಹಾಯಹಸ್ತವನ್ನು ಯಾಚಿಸುವ ಅಗತ್ಯವಿದೆ. ಈ ಗ್ರಂಥಾಲಯದಷ್ಟೇ ಪ್ರಭಾವಶಾಲಿಯಾದ ಮತ್ತೊಂದು ಜ್ಞಾನಸಂವಹನಾ ಮಾಧ್ಯಮವೆಂದರೆ 'ಶಿಕ್ಷಣ'.

## ೧.೨ ಶಿಕ್ಷಣ

ರಾಜ್ಯ ಬಂದಿಖಾನೆ ಆಡಳಿತ, ಶಿಕ್ಷಣವನ್ನೂ ಒಂದು ಪಾರಂಪರಿಕ ಜ್ಞಾನಸಂವಹನಾ ಮಾಧ್ಯಮವನ್ನಾಗಿ ಆರಿಸಿಕೊಂಡು ಅದಕ್ಕೆ ಗ್ರಂಥಾಲಯಕ್ಕಿಂತಲೂ ಹೆಚ್ಚಿನ ಆದ್ಯತೆಯನ್ನು ನೀಡಿದೆ. ಸದ್ಯ ಬಂದಿಖಾನೆಯಲ್ಲಿ ಕೈದಿಗಳಿಗೆ ನೀಡುತ್ತಿರುವ ಶಿಕ್ಷಣ ಎರಡು ರೀತಿಯದ್ದು.

೧. ಸಾಂಪ್ರದಾಯಿಕ ಶಿಕ್ಷಣ.

೨. ವೃತ್ತಿಪರ ಶಿಕ್ಷಣದ ಜತೆ ವೃತ್ತಿ ತರಬೇತಿ ಶಿಕ್ಷಣ.

### ೧. ಸಾಂಪ್ರದಾಯಿಕ ಶಿಕ್ಷಣ :

ಸ್ವಾತಂತ್ರ್ಯ ಹರಣಗೊಂಡ ತಮ್ಮ ಬದುಕಿನ ಬಗ್ಗೆ ಹಲುಬುತ್ತ, ಜೀವಾವಧಿ ಶಿಕ್ಷೆಯ ಭಾರಕ್ಕೆ ನಲುಗುತ್ತ ಭವಿಷ್ಯದ ಕನಸನ್ನು ಹೊಸಕಿ ಹಾಕಿ, ತಮಗೆ ಭವಿಷ್ಯವೆಂಬುದೇ ಇಲ್ಲ ಎಂಬ ಮನಸ್ಥಿತಿಯಲ್ಲಿರುವ ಕೈದಿಗಳ ಮನಪರಿವರ್ತಿಸಿ ಅವರನ್ನು ಮತ್ತೆ ಸಮಾಜದ ಮುಖ್ಯವಾಹಿನಿಗೆ ಸೇರಿಸುವ ಹಲವು ಪ್ರಯತ್ನಗಳು ಬ್ರಿಟಿಷರ ಕಾಲದಿಂದಲೂ ನಡೆಯುತ್ತಲೇ ಬಂದಿದೆ. ಶಿಕ್ಷಣವನ್ನು ಕೈದಿಗಳತ್ತ ಕೊಂಡೊಯ್ಯಬೇಕೆಂದು ಮೊಟ್ಟ ಮೊದಲಿಗೆ ಸಲಹೆಯನ್ನಿಟ್ಟವನು ಲಾರ್ಡ್ ಮೆಕಾಲೆ.

ಬಂದಿಖಾನೆಗಳಲ್ಲಿ ಮೂಕ ಪ್ರಾಣಿಗಳಂತೆ ನರಳುತ್ತಿರುವ ಕೈದಿಗಳ ದಾರುಣ, ಭೀಕರ ಸ್ಥಿತಿಯನ್ನು ನೋಡಲಾಗದೆ ಬ್ರಿಟಿಷ್ ನ್ಯಾಯತಜ್ಞ ಮೆಕಾಲೆ ೧೮೩೬ ರಲ್ಲೇ ಕಂಪನಿ ಸರಕಾರದ ಗವರ್ನರ್ ಜನರಲ್ ಲಾರ್ಡ್ ವಿಲಿಯಂ ಬೆಂಟಿಂಕನನ್ನು ಬಂದಿಖಾನೆಗಳ ದುರಾಡಳಿತ - ದುರವಸ್ಥೆ ಬಗ್ಗೆ ತರಾಟೆಗೆ ತೆಗೆದುಕೊಂಡಿದ್ದ.

'The best criminal code can be of very little use to a community, unless there be a good machinery for the infliction of Punishment'[೯] ಎಂದು ಹೇಳುತ್ತಾ, ಕಂಪನಿ ಸರಕಾರದ ಆಡಳಿತಕ್ಕೆ ಅಪರಾಧ ಸಂಹಿತೆ ಮತ್ತು ಶಿಕ್ಷೆಯ ಉದ್ದೇಶದ ನಡುವಿರುವ ಸೂಕ್ಷ್ಮ ಸಂಬಂಧಗಳ ಬಗ್ಗೆ ಅರಿವು ಮೂಡಿಸಿ ಬಂದಿಖಾನೆಗಳ ಚಿತ್ರಣ ಹಾಗೂ ಅಮಾನವೀಯ ಆಡಳಿತ ವೈಖರಿಯನ್ನೇ ಸಂಪೂರ್ಣ ಬದಲಿಸಬೇಕೆಂದು ಸಲಹೆ ನೀಡಿದ್ದ.

ಲಾರ್ಡ್ ಮೆಕಾಲೆಯಂತ ಪ್ರಸಿದ್ಧ ಶಿಕ್ಷಣತಜ್ಞ - ನ್ಯಾಯತಜ್ಞರ ಸಲಹೆ ಕಂಪನಿ ಸರಕಾರಕ್ಕೆ ಎಚ್ಚರಿಕೆಯ ಗಂಟೆಯೆಂದು ಪರಿಗಣಿಸಿದ ಲಾರ್ಡ್ ಬೆಂಟಿಂಕನು ೧೮೩೬ ರಲ್ಲಿ ಮೆಕಾಲೆಯ ಸದಸ್ಯತ್ವದಲ್ಲಿ ಒಂದು ಸಮಿತಿಯನ್ನು ರಚಿಸಿ ವರದಿ ತರಿಸಿಕೊಂಡ. ಆ ವರದಿ, ಬಂದಿಖಾನೆ ಆಡಳಿತ ಸುಧಾರಣೆಗೆ ಹಲವು ಶಿಫಾರಸುಗಳನ್ನು ಮಾಡಿತ್ತಲ್ಲದೆ, ಕೈದಿಗಳ ಮನಪರಿವರ್ತನೆಗೆ ಬಂದಿಖಾನೆಯೊಳಗೆ ಶಿಕ್ಷಣವನ್ನು ಕೊಂಡೊಯ್ಯುವ ಅಗತ್ಯವನ್ನು ಪ್ರತಿಪಾದಿಸಿತ್ತು.

'ಶಿಕ್ಷಣ'ವನ್ನು ಕೈದಿಗಳ ಮನಪರಿವರ್ತನೆಯ 'ಸಾಧನ'ವನ್ನಾಗಿ ಬಳಸಬೇಕೆಂಬ ಕಲ್ಪನೆ ಹುಟ್ಟಿದ್ದೇ ಆ ಸಮಿತಿಯಿಂದ. ಈ ಸಮಿತಿಯ ಶಿಫಾರಸನ್ನು ಗಮನಿಸಿದ ಹಳೆ ಮೈಸೂರು ಸಂಸ್ಥಾನದ ಬಂದಿಖಾನೆ ಆಡಳಿತ ೧೮೮೩ ರಲ್ಲಿ ಮೈಸೂರು ಮತ್ತು ಬೆಂಗಳೂರು ಕೇಂದ್ರ ಬಂದಿಖಾನೆಗಳಲ್ಲಿ ತನ್ನ ಕೈದಿಗಳಿಗೆ ಶಿಕ್ಷಣ ವ್ಯವಸ್ಥೆಯನ್ನು ಆರಂಭಿಸಿತ್ತು. ನೈತಿಕ ಮತ್ತು ಧಾರ್ಮಿಕ ಶಿಕ್ಷಣವನ್ನು ನೀಡಲು ಉಪನ್ಯಾಸಗಳನ್ನೂ ಏರ್ಪಡಿಸುತ್ತಿತ್ತು.[೨೦]

೧೯೩೫ ರ 'ಭಾರತ ಸರಕಾರ ಅಧಿನಿಯಮ' ಘೋಷಣೆ ನಂತರ, ಭಾರತದ ಸ್ವಾತಂತ್ರ್ಯ ಹೋರಾಟಗಾರರು ಸ್ವತಾ ತಾವು ಭಾರತೀಯ ಬಂದಿಖಾನೆಗಳ ಸ್ಥಿತಿ - ಗತಿಗಳನ್ನು ಕಂಡುಂಡವರಾಗಿದ್ದರಿಂದ, ಬಂದಿಖಾನೆ ಸುಧಾರಣಾ ಸಮಿತಿಯೊಂದನ್ನು ರಚಿಸುವಂತೆ ಸರಕಾರಕ್ಕೆ ಒತ್ತಡ ತಂದಾಗ, ಬ್ರಿಟಿಷ್ ಸರಕಾರವು ಎಲ್ಲ ರಾಜ್ಯಗಳಿಗೆ ನೀಡಿದ ಸಲಹೆಯಂತೆ ಮೈಸೂರು ರಾಜ್ಯವೂ 'ಮೈಸೂರಲ್ಲಿಯ ಬಂದಿಖಾನೆಗಳ ಸುಧಾರಣಾ ಸಮಿತಿ ೧೯೪೦ - ೪೧' ನ್ನು ನೇಮಿಸಿತು. ಈ ಸುಧಾರಣಾ ಸಮಿತಿಯು 'ಶಿಕ್ಷೆಯೆಂದರೆ ಕೈದಿಗಳನ್ನು ಹಿಂಸಿಸುವುದಲ್ಲ, ಅವರನ್ನು ಉತ್ತಮ ನಾಗರಿಕರನ್ನಾಗಿ ಮಾಡಿ ಸಮಾಜಕ್ಕೆ ಮರಳಿಸುವುದು. ಈ ಪ್ರಕ್ರಿಯೆಯಲ್ಲಿ ಶಿಕ್ಷಣವನ್ನು ಕೈದಿಗಳಿಗೆ ಕಡ್ಡಾಯವಾಗಿ ನೀಡಬೇಕು' ಎಂದು ಸಲಹೆ ಮಾಡಿತು. ಆದರೆ ಈ ಸಮಿತಿಯ ಈ ಶಿಫಾರಸು ಆಗ ದೇಶವಿಡೀ ಹೊತ್ತಿ ಉರಿಯುತ್ತಿದ್ದ ಸ್ವಾತಂತ್ರ್ಯ ಹೋರಾಟದ ಜ್ವಾಲೆಗಳಿಂದಾಗಿ ಮರೆಯಾಗಿ ಕೂತಿತು ವಿನಾ ಜಾರಿಯಾಗಲೇ ಇಲ್ಲ.

ಸ್ವಾತಂತ್ರ್ಯಾನಂತರ, ನಮ್ಮ ಕೈಗೇ ಬಂದಿಖಾನೆ ಆಡಳಿತ ಬಂದರೂ ಬಂದಿಖಾನೆಗಳು ಸುಧಾರಣೆಯಾಗಲಿಲ್ಲ. ಶಿಕ್ಷಣ ಕಡ್ಡಾಯವಾಗಲಿಲ್ಲ. ೧೯೫೧ ರಲ್ಲಿ ಭಾರತ ಸರಕಾರ ಅಮೇರಿಕದ ಪ್ರಖ್ಯಾತ ಸಮಾಜ ವಿಜ್ಞಾನಿಯೂ, ಕೈದಿಗಳನ್ನು ತಿದ್ದುವ ವಿಷಯದಲ್ಲಿ ಜಾಗತಿಕ ರಂಗದಲ್ಲಿಯೇ ಸಮರ್ಥ ಅಧಿಕಾರಿ ಎನಿಸಿದ್ದ ಡಬ್ಲ್ಯೂ.ಸಿ. ರೆಕ್ಲೆಸ್ ಅವರನ್ನು 'ಭಾರತದ ಬಂದಿಖಾನೆ ಸುಧಾರಣಾ ಮಾರ್ಗದರ್ಶನಕ್ಕಾಗಿ' ಆಹ್ವಾನಿಸಿತು. ಅವರ ಮಾರ್ಗದರ್ಶನದಲ್ಲಿ 'ಅಖಿಲ ಭಾರತ ಬಂದಿಖಾನೆ ಕೈಪಿಡಿ ಸಮಿತಿ ೧೯೫೭ - ೫೯' ಯೊಂದನ್ನು ರಚಿಸಿ, ಅದರ ಮೂಲಕ 'ಮಾದರಿ ಬಂದಿಖಾನೆ ಕೈಪಿಡಿ'ಯೊಂದನ್ನು ರಚಿಸಲಾಯಿತು.

'ಅಖಿಲ ಭಾರತ ಬಂದಿಖಾನೆ ಕೈಪಿಡಿ' ಸಮಿತಿಯು ಮಾಡಿರುವ ಮುಖ್ಯ ಶಿಫಾರಸುಗಳಲ್ಲಿ ಕಡ್ಡಾಯ ಶಿಕ್ಷಣವೂ ಒಂದು. ಈ ಶಿಫಾರಸಿನ ವಿಸ್ತೃತರೂಪ ಹೀಗಿದೆ :

ಎಲ್ಲ ಕೈದಿಗಳಿಗೂ ಶೈಕ್ಷಣಿಕ ಕಾರ್ಯಕ್ರಮ ಕಡ್ಡಾಯವಾಗಿರಬೇಕಲ್ಲದೆ, ಶಾರೀರಿಕ ಶಿಕ್ಷಣ, ಆರೋಗ್ಯ ಶಿಕ್ಷಣ, ಜಿಜ್ಞಾಸಾ ಶಿಕ್ಷಣ, ಸಾಮಾಜಿಕ ಶಿಕ್ಷಣ, ವೃತ್ತಿಶಿಕ್ಷಣ ಮತ್ತು ಸಾಂಸ್ಕೃತಿಕ ಶಿಕ್ಷಣ ಅದರ ಅಂಗಗಳಾಗಿರಬೇಕು. ಅದರ ಗುರಿಯು ಸಾಕ್ಷರತೆ ಮಾತ್ರವಲ್ಲ, ಕೈದಿಯ ತಿದ್ದುಪಾಟು ಅಥವ ತಿದ್ದುವುದು (ಮನಪರಿವರ್ತನೆ - Reform)

ಕೂಡಾ ಆಗಿರಬೇಕು. ತಿದ್ದುಪಾಟು ಚಟುವಟಿಕೆಗಳು ವಿವಿಧ ಶೈಕ್ಷಣಿಕ ಕಾರ್ಯಕ್ರಮಗಳ ಸುತ್ತ ಹೆಣೆದಿರಬೇಕು. ಇವು ಕೈದಿಯು ಮುಂದೆ ಸಮಾಜದ ಪರಿಣಾಮಕಾರಿ ಸದಸ್ಯನಾಗಿ ಬೆಳೆಯಲು ಸಹಕಾರಿಯಾಗುವಂತೆ ಹಾಗೂ ಸಮಾಜ ಮತ್ತು ಸಾಮಾಜಿಕ ವರ್ತನೆಯ ಬಗ್ಗೆ ಆತನ ದೃಷ್ಟಿಕೋನವನ್ನು ನವೀಕರಿಸಿಕೊಳ್ಳಲು ಸಾಧ್ಯವಾಗುವಂತೆ ಇರಬೇಕು. ಶಿಕ್ಷಣಕ್ಕೆ ಅನುಕೂಲವಾಗುವಂತಹ ವರ್ಗ - ಕೋಣೆಗಳನ್ನು ನೀಡಿ ಗ್ರಂಥಾಲಯ ವ್ಯವಸ್ಥೆ ಜೊತೆಗೆ ಉಚಿತ ಸಿಬ್ಬಂದಿಗಳನ್ನು ಒದಗಿಸಬೇಕು. ಶಿಕ್ಷಣ ಶ್ರೇಣಿಯು ಪ್ರಾರಂಭಿಕ, ಮಾಧ್ಯಮಿಕ, ಉಚ್ಛ - ಈ ಮೂರು ಹಂತಗಳಲ್ಲಿರಬೇಕು. ಈ ಶಿಕ್ಷಣ ಕ್ರಮವು ಹೊರಗಡೆ ಸಮಾಜದಲ್ಲಿ ಪ್ರಚಲಿತವಿರುವ ಅನುಪಾಲನ ಹಾಗೂ ಶೈಕ್ಷಣಿಕ ವ್ಯವಸ್ಥೆಗೆ ಸಂಬಂಧಿಕವಾಗಿಯೇ ಇರಬೇಕು. ಕೈದಿಗಳು ಬಿಡುಗಡೆ ಹೊಂದಿದ ನಂತರ ಶಾಲಾಮಂಡಳಿ, ವಿಶ್ವವಿದ್ಯಾಲಯದ ಪರೀಕ್ಷೆಗಳಿಗೆ ಅರ್ಹತೆಗೆ ಅನುಗುಣವಾಗಿ ಕೂಡಲು ಅನುಮತಿ ಇರಬೇಕು.[೨೧]

ಈ ಸಮಿತಿಯ ಇನ್ನೊಂದು ಮುಖ್ಯ ಶಿಫಾರಸಿನಂತೆ ಭಾರತ ಸರಕಾರವು ೧೯೬೧ ರಲ್ಲಿ ಕೈದಿಗಳ 'ತಿದ್ದುಪಾಟು ಸೇವೆಗಳ ಕೇಂದ್ರ ದಳ' (Central Bureau of Correctional Services)ವನ್ನು ಸ್ಥಾಪಿಸಿತು. ಈ ಸಂಸ್ಥೆ, ಪ್ರತೀ ರಾಜ್ಯವೂ ತನ್ನ 'ರಾಜ್ಯ ಬಂದಿಖಾನೆ ಕೈಪಿಡಿ'ಯಲ್ಲಿ, ಅಖಿಲ ಭಾರತ ಬಂದಿಖಾನೆ ಕೈಪಿಡಿ ಸಮಿತಿಯು ಮಾಡಿದ್ದ ಶಿಫಾರಸುಗಳನ್ನೆಲ್ಲ ಅಳವಡಿಸಿ ಪರಿಷ್ಕರಿಸುವಂತೆ ನಿಗಾ ವಹಿಸಿತು. ಈ ಪ್ರಯತ್ನದ ಫಲವಾಗಿ 'ಕರ್ನಾಟಕ ಬಂದಿಖಾನೆ ಕೈಪಿಡಿ - ೧೯೭೮' ರಲ್ಲಿ ಅಖಿಲ ಭಾರತ ಬಂದಿಖಾನೆ ಕೈಪಿಡಿ ಸಮಿತಿಯು 'ಕೈದಿ ಶಿಕ್ಷಣ'ದ ಬಗ್ಗೆ ಮಾಡಿರುವ ಶಿಫಾರಸುಗಳು ಒಂದಿಷ್ಟು ಮಾರ್ಪಾಡಿನ ಜತೆ ಸೇರ್ಪಡೆಯಾದವು.

'ಕರ್ನಾಟಕ ಬಂದಿಖಾನೆ ಕೈಪಿಡಿ - ೧೯೭೮' ರಂತೆ ಬಂದಿಖಾನೆಯೊಳಗಿನ ಸಾಂಪ್ರದಾಯಿಕ ಶಿಕ್ಷಣದ ಬಗ್ಗೆ ಈ ಕೆಳಗಿನ ನಿಯಮಗಳು ಚಾಲ್ತಿಯಲ್ಲಿವೆ.

೧. ಶಿಕ್ಷಣ ಪಡೆಯುತ್ತಿರುವ ಅಕ್ಷರಸ್ಥ ಕೈದಿಗಳಿಗೆ ಪುಸ್ತಕಗಳನ್ನು ಓದಲು ಅಥವ ಇತರ ಅಕ್ಷರಸ್ಥ ಕೈದಿಗಳಿಂದ ಶಿಕ್ಷಣ ಪಡೆಯಲು ಅನುಕೂಲವಾಗುವಂತೆ ರಾತ್ರಿ ೯.೩೦ ಗಂಟೆಯ ವರೆಗೆ ದೀಪದ ಸೌಲಭ್ಯ ಒದಗಿಸತಕ್ಕದ್ದು.

೨. ೫೦ ವರ್ಷದೊಳಗಿನ ಪ್ರತಿಯೊಬ್ಬ ಕೈದಿಯು ಅವನು ಮಾನಸಿಕವಾಗಿ ಅಥವ ದೈಹಿಕವಾಗಿ ಅಸಮರ್ಥನೆಂದು ವೈದ್ಯಾಧಿಕಾರಿಗಳಿಂದ ಘೋಷಿಸಲ್ಪಡದ ಹೊರತು ಬರೆಯುವುದು, ಓದುವುದು ಮತ್ತು ಪ್ರಾಥಮಿಕ ಶಿಕ್ಷಣಮಟ್ಟದವರೆಗೆ ಲೆಕ್ಕದಲ್ಲಿ ಶಿಕ್ಷಣ (ಸಾಕ್ಷರತಾ ಶಿಕ್ಷಣ) ಪಡೆಯತಕ್ಕದ್ದು. ಕೈದಿಯೊಬ್ಬ ಚೆನ್ನಾಗಿ ಓದಿಕೊಂಡಿದ್ದರೆ ಅಧೀಕ್ಷಕರು ಆತನನ್ನು ಕೈದಿ ಶಿಕ್ಷಕನೆಂದು ನೇಮಕ ಮಾಡಬಹುದು. ಆತ ಸಂಬಳ ಪಡೆಯುತ್ತಿರುವ ಶಿಕ್ಷಕ ಅಥವ ಜೈಲು ಅಧಿಕಾರಿಯ ಮಾರ್ಗದರ್ಶನದ ಮೇರೆಗೆ ಕೆಲಸ ಮಾಡತಕ್ಕದ್ದು.

೩. ಪ್ರಾಥಮಿಕ ಶಿಕ್ಷಣಕ್ಕಾಗಿ, ಸರ್ಕಾರವು ಸಾಮಾನ್ಯ ಶಾಲೆಗೆ ವಿಧಾಯಕ ಪಡಿಸಿದ ಪಠ್ಯವಿಷಯವನ್ನೇ ಅನುಸರಿಸತಕ್ಕದ್ದು.

೪. ಶಿಕ್ಷಣ ಪಡೆಯುತ್ತಿರುವ ಪ್ರತಿಯೊಬ್ಬ ಕೈದಿಯ ಶಿಕ್ಷಣ ಪ್ರಗತಿಯ ಪತ್ರವು ಸರಕಾರ ವಿಧಾಯಕ ಪಡಿಸಿದ ಪ್ರಪತ್ರದಲ್ಲಿರತಕ್ಕದ್ದು.

೫. ಪ್ರಾಥಮಿಕ ಶಿಕ್ಷಣಕ್ಕೂ ಹೆಚ್ಚಿನ ಶಿಕ್ಷಣವನ್ನು ಪಡೆಯಬಯಸುವ ಕೈದಿಗಳಿಗೆ ಅವಶ್ಯಕ ಪುಸ್ತಕಗಳನ್ನು ಮತ್ತು ಲಭ್ಯವಿರುವ ಸಹಾಯವನ್ನು ಬಂದಿಖಾನೆ ಆಡಳಿತ ನೀಡತಕ್ಕದ್ದು.

೬. ಪ್ರತಿಯೊಂದು ಜಿಲ್ಲಾ ಶಿಕ್ಷಣ ಅಧಿಕಾರಿಗಳು ಮತ್ತು ಅವರ ಸಹಾಯಕರು ತಮ್ಮ ವಲಯದಲ್ಲಿರುವ ಬಂದಿಖಾನೆ ಶಾಲೆಯನ್ನು ಪರಿವೀಕ್ಷಿಸಿ ಹೆಚ್ಚಿನ ಶಿಕ್ಷಣ ಅವಕಾಶದ ಬಗ್ಗೆ ಸಲಹೆ ನೀಡಿ - ವರದಿ ನೀಡತಕ್ಕದ್ದು.

೭. ಪ್ರತಿಯೊಂದು ಶೈಕ್ಷಣಿಕ ವರ್ಷದ ಕೊನೆಯಲ್ಲಿ ಕೈದಿಗಳಿಗೆ ಪರೀಕ್ಷೆ ನಡೆಸಿ, ಶಿಕ್ಷಣ ಇಲಾಖೆಯೊಂದಿಗೆ ಸಮಲೋಚಿಸಿ, ಪರೀಕ್ಷೆ ಪಾಸು ಮಾಡಿದ ಕೈದಿಗಳಿಗೆ ಶಿಕ್ಷಣ ಇಲಾಖೆಯಿಂದ ಪ್ರಮಾಣಪತ್ರವನ್ನು ದೊರಕಿಸಿಕೊಡತಕ್ಕದ್ದು.

ಕರ್ನಾಟಕ ಬಂದಿಖಾನೆ ಇಲಾಖೆ, ಈ ನಿಯಮಗಳನ್ನು ೧೯೭೮ ರಲ್ಲೇ ತನ್ನ ಕೈಪಿಡಿಯಲ್ಲಿ ಕೆಲವು ಪ್ರಗತಿಪರ ನಿಯಮಗಳನ್ನು ಅಳವಡಿಸಿಕೊಂಡಿದ್ದರೂ, ೧೯೭೮ ರ ಏಳನೇ ಹಣಕಾಸು ಆಯೋಗವು ತನ್ನ ವರದಿಯಲ್ಲಿ ಭಾರತದಲ್ಲಿನ ಕೈದಿಗಳ ಸ್ಥಿತಿಯ ಬಗ್ಗೆ ಅತೃಪ್ತಿ ಸೂಚಿಸಿ, ಅವರಿಗೆ ನೀಡುವ ಶಿಕ್ಷಣ ಇನ್ನೂ ಪ್ರಗತಿಪರವಾಗಿರಬೇಕೆಂದು ಸೂಚನೆ ನೀಡಿತ್ತು.

ಶಿಕ್ಷಣವು, ಕೈದಿಗಳ ಮನಪರಿವರ್ತನೆಗೆ ಅತಗತ್ಯವಾದ ಜ್ಞಾನಸಂವಹನ ಮಾಧ್ಯಮವೆಂದು ಕರ್ನಾಟಕ ಬಂದಿಖಾನೆ ಇಲಾಖೆ, ಅದು ಮೈಸೂರು ಬಂದಿಖಾನೆ ಇಲಾಖೆ ಆಗಿರುವಾಗಲೇ ತೀರ್ಮಾನಿಸಿದ್ದರ ಫಲವಾಗಿ, ಕೈದಿಗಳಿಗೆ ಮೊದಲೇ ಇದ್ದ ವಯಸ್ಕರ ಶಿಕ್ಷಣ ಈಗ ಕಡ್ಡಾಯವಾಯಿತು. ಪ್ರಾಥಮಿಕ ಶಿಕ್ಷಣಕ್ಕೂ ಪ್ರೋತ್ಸಾಹ ದೊರಕಿತು. ವಯಸ್ಕರ ಶಿಕ್ಷಣ ಸಮಿತಿ ಮತ್ತು ಕನ್ನಡ ಸಾಹಿತ್ಯ ಪರಿಷತ್ತು ಕೈದಿಗಳಿಗೆ ಅಗತ್ಯ ಪುಸ್ತಕ ಮತ್ತು ಇತರ ಸವಲತ್ತುಗಳನ್ನು ಒದಗಿಸಿದ್ದವು.

ಶಿಕ್ಷಣದ ಮೂಲಕ ಕೈದಿ ಓದುವಂತಾಗಬೇಕು - ಓದುವ ಮೂಲಕ ಜ್ಞಾನದ ಸೆಲೆಗಳನ್ನು ಹುಡುಕುವಂತಾಗಬೇಕು - ಆ ಜ್ಞಾನದ ಸೆಲೆಯಲ್ಲೇ ಆತ ಶಿಕ್ಷಣವನ್ನು ಮುಂದುವರಿಸುತ್ತ ತನ್ನನ್ನು ತಿದ್ದುವಂತಾಗಬೇಕು - ಎಂಬ ಉದ್ದೇಶದಿಂದ ಬಂದೀಖಾನೆಯೊಳಗೆ 'ಶಿಕ್ಷಣ'ವೆಂಬ ಮಾಂತ್ರಿಕ ಮಾಧ್ಯಮವನ್ನು ಪರಿಚಯಿಸಲಾಯಿತು. ವಯಸ್ಕರ ಶಿಕ್ಷಣ (ಸಾಕ್ಷರತಾ ಶಿಕ್ಷಣ) ದ ಜತೆ ಪ್ರಾಥಮಿಕ ಶಿಕ್ಷಣವೂ ಲಭ್ಯವಾದವು. ಬಂದಿಖಾನೆ ಇಲಾಖೆಯು ಶಿಕ್ಷಣ ಇಲಾಖೆಯಿಂದ ಶಿಕ್ಷಕರನ್ನು ಪ್ರತಿನಿಯೋಜನೆಯ ಮೇಲೆ ಪಡೆಯಿತು.

ಬಂದಿಖಾನೆ ಇಲಾಖೆಗೆ ಒಟ್ಟು ೩೪ ಶಿಕ್ಷಕ ಹುದ್ದೆಗಳು ಮಂಜೂರಾಗಿವೆ. ಇದರಲ್ಲಿ ೧೪ ಶಿಕ್ಷಕ ಹುದ್ದೆಗಳು, ೬ ಕೇಂದ್ರ ಬಂದಿಖಾನೆಗಳಿಗೆ. ಗುಲ್ಬರ್ಗ, ವಿಜಾಪುರ, ಬಳ್ಳಾರಿ, ಮೈಸೂರು ಕೇಂದ್ರ ಬಂದಿಖಾನೆಗಳಿಗೆ ತಲಾ ಒಂದು ಪುರುಷ ಶಿಕ್ಷಕ ಮತ್ತು ಒಂದು ಮಹಿಳಾ ಶಿಕ್ಷಕಿ ಹುದ್ದೆಗಳನ್ನು ಮಂಜೂರು ಮಾಡಲಾಗಿದ್ದರೆ, ಬೆಳಗಾಂ

ಮತ್ತು ಬೆಂಗಳೂರು ಕೇಂದ್ರ ಬಂದಿಖಾನೆಗಳಿಗೆ ತಲಾ ಒಬ್ಬ ಮಹಿಳಾ ಶಿಕ್ಷಕಿ ಹಾಗೂ ಎರಡು ಪುರುಷ ಶಿಕ್ಷಕ ಹುದ್ದೆಗಳನ್ನು ಮಂಜೂರು ಮಾಡಲಾಗಿದೆ.

ಆದರೆ ಅಧ್ಯಯನದ ಕ್ಷೇತ್ರ ಕಾರ್ಯದ ಸಂದರ್ಭದ ವೇಳೆ, ಬಳ್ಳಾರಿ ಕೇಂದ್ರ ಬಂದಿಖಾನೆಯಲ್ಲಿ ಹಾಗೂ ಬೆಂಗಳೂರು ಕೇಂದ್ರ ಬಂದಿಖಾನೆಯಲ್ಲಿ ಎರಡೂ ಪುರುಷ ಮತ್ತು ಮಹಿಳಾ ಶಿಕ್ಷಕಿ ಹುದ್ದೆಗಳು ಖಾಲಿಯಾಗಿರುವುದು ಕಂಡು ಬಂತು. ಇಲ್ಲಿ ಶಿಕ್ಷಕರೇ ಇಲ್ಲದ ಕಾರಣ, ಅಕ್ಷರಸ್ಥ ಕೈದಿಗಳಿಂದ ಪಾಠ ಮಾಡಿಸಲಾಗುತ್ತಿದೆ. ವಿಜಾಪುರ ಮತ್ತು ಗುಲ್ಬರ್ಗ ಕೇಂದ್ರ ಬಂದಿಖಾನೆಗಳಲ್ಲಿ ತಲಾ ೧ ಪುರುಷ ಶಿಕ್ಷಕರಿದ್ದು, ಮಹಿಳಾ ಶಿಕ್ಷಕಿ ಹುದ್ದೆ ಖಾಲಿಯಾಗಿದೆ. ಬೆಳಗಾವಿ ಕೇಂದ್ರ ಬಂದಿಖಾನೆಯಲ್ಲಿ ೨ ಪುರುಷ ಶಿಕ್ಷಕರಲ್ಲಿ ಒಬ್ಬರು ಮಾತ್ರ ಹಾಜರಾಗುತ್ತಿದ್ದು, ಒಬ್ಬ ಮಹಿಳಾ ಶಿಕ್ಷಕಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಮೈಸೂರು ಬಂದಿಖಾನೆಯಲ್ಲಿ ಒಬ್ಬ ಪುರುಷ ಶಿಕ್ಷಕ ಹಾಗೂ ಒಬ್ಬ ಮಹಿಳಾ ಶಿಕ್ಷಕಿ ಕಾರ್ಯ ನಿರ್ವಹಿಸುತ್ತಿದ್ದಾರೆ. ರಾಜ್ಯದಲ್ಲಿ ಬೆಳಗಾವಿ ಮತ್ತು ಮೈಸೂರು ಕೇಂದ್ರ ಬಂದಿಖಾನೆಗಳನ್ನು ಹೊರತುಪಡಿಸಿದರೆ, ಬೇರೆ ಯಾವುದೇ ಕೇಂದ್ರ ಬಂದಿಖಾನೆಗಳಲ್ಲಿ ಮಹಿಳಾ ಶಿಕ್ಷಕಿಯರು ಇಲ್ಲದಿರುವುದರಿಂದ ಮಹಿಳೆಯರ ಸಾಕ್ಷರತೆಯನ್ನು ಸಂಪೂರ್ಣವಾಗಿ ಕಡೆಗಣಿಸಲಾಗಿದೆ ಎಂದು ಅಭಿಪ್ರಾಯ ಪಡಲಾಗಿದೆ (ಕೋಷ್ಟಕ ೫ ಗಮನಿಸಿ).

ಶಿಕ್ಷಣ ಇಲಾಖೆಯಿಂದ ಪ್ರತಿನಿಯೋಜನೆಯ ಮೇಲೆ ಬರುವ ಈ ಶಿಕ್ಷಕರನ್ನು ಸರಕಾರ ಅವರ ವರ್ಗಾವಣೆಯ ಪ್ರಯತ್ನದ ಫಲವಾಗಿ ಬೇರೆಡೆ ವರ್ಗಾವಣೆ ಮಾಡುವ ಮುನ್ನ ಕೈದಿಗಳ ಹಿತಚಿಂತನೆಯ ಬಗ್ಗೆ ಕಾಳಜಿ ವಹಿಸುವ ಅವಶ್ಯಕತೆಯಿದೆ. 'ಇಲ್ಲಿಂದ ಅಲ್ಲಿಗೆ' ವರ್ಗಾವಣೆ ಮಾಡುವಾಗ, 'ಅಲ್ಲಿಂದ ಇಲ್ಲಿಗೆ' ವರ್ಗಾವಣೆ ಮಾಡುವುದನ್ನು ಸರಕಾರ ಕಡ್ಡಾಯಗೊಳಿಸಬೇಕಾಗಿದೆ.

ಕರ್ನಾಟಕದಲ್ಲಿ ೧೯೭೫ ಕ್ಕಿಂತ ಹಿಂದೆಯೇ ಕೈದಿಗಳಿಗೆ ಬಂದಿಖಾನೆಯೊಳಗಿನ ಶಾಲೆಯಲ್ಲಿ ಪ್ರಾಥಮಿಕ ಶಿಕ್ಷಣ ನೀಡಿ, ಏಳನೇ ತರಗತಿಯ ಪರೀಕ್ಷೆಗಾಗಿ ಹೊರಗಿನ ಶಾಲೆಗಳಲ್ಲಿ ನೇರ ಹಾಜರುಪಡಿಸಲಾಗುತ್ತಿತ್ತು. ಅಲ್ಲಿ ತೇರ್ಗಡೆಯಾಗಿ ಪ್ರಮಾಣಪತ್ರ ಪಡೆದವರನ್ನು ಹಾಗೂ ಹೊಸದಾಗಿ ಬಂದಿಖಾನೆಗೆ ಸೇರ್ಪಡೆಯಾದ ಕೈದಿಗಳಲ್ಲಿ ಆ ಮಟ್ಟದ ವಿದ್ಯಾಭ್ಯಾಸ ಇರುವವರನ್ನು ಗುರುತಿಸಿ, ಮುಂದಿನ ಪ್ರೌಢ ಶಿಕ್ಷಣಕ್ಕಾಗಿ ಯಾವುದೇ ಕಾವಲುಗಾರರಿಲ್ಲದೆ ಅವರ ಸ್ವಂತ ಬಟ್ಟೆಯನ್ನೇ (ಬಂದಿಖಾನೆಯ ಕೈದಿ ಸಮವಸ್ತ್ರವಿಲ್ಲದೆ) ಧರಿಸಿಸಿ ಬಂದಿಖಾನೆಯ ಹೊರಗಡೆಯ ಇರುವ ಶಾಲೆಗಳಿಗೆ ಕಳುಹಿಸಲಾಗುತ್ತಿತ್ತು. ಕೈದಿ, ಕಾಲೇಜು ಶಿಕ್ಷಣ ಮುಂದವರಿಸಲೂ ಇದೇ ಕ್ರಮವನ್ನು ಅನುಸರಿಸಲಾಗುತ್ತಿತ್ತು. ೧೯೭೫ - ೭೬ ರ ಅವಧಿಯಲ್ಲಿ ನಾಲ್ಕು ಮಂದಿ ಕೈದಿಗಳು ಹೊರಗಡೆ ಕಾಲೇಜುಗಳಿಗೆ ಪದವಿ ತರಗತಿಗಳಿಗಾಗಿ ಯಾವುದೇ ಕಾವಲುಗಾರರಿಲ್ಲದೆ ಹಾಜರಾಗಿದ್ದರು. ಅವರ ಶೈಕ್ಷಣಿಕ ಖರ್ಚು ವೆಚ್ಚಗಳನ್ನು ಸಂಪೂರ್ಣವಾಗಿ ಇಲಾಖೆಯೇ ಭರಿಸುತ್ತಿತ್ತು.

೧೯೭೫ ರಲ್ಲಿ ಹೀಗೆ ಶಾಲೆ ಕಲಿತು ಮೆಟ್ರಿಕ್ಯುಲೇಷನ್ ಕಟ್ಟಿದ ಕೈದಿಯೊಬ್ಬ ೧೯೭೬ ರಲ್ಲಿ ಮೆಟ್ರಿಕ್ಯುಲೇಷನ್ ಮುಗಿಸಿ, ನಂತರದ ದಿನಗಳಲ್ಲಿ ದಿನನಿತ್ಯ ಕಾಲೇಜು ಮೆಟ್ಟಿಲು ಹತ್ತಿ ಪಿಯುಸಿ, ಸ್ನಾತಕ ಪದವಿ, ಕಾನೂನು ಪದವಿ ಮುಗಿಸಿ, ಶಿಕ್ಷೆ ಮುಗಿಯುವ ಕಾಲಕ್ಕೆ ವಕೀಲ ವೃತ್ತಿಗೆ ಅರ್ಹತೆ ಪಡೆದು, ಈಗ ವಿಜಾಪುರದಲ್ಲಿ ಖ್ಯಾತ ಕ್ರಿಮಿನಲ್

ವಕೀಲನಾಗಿ ಸಮಾಜದಲ್ಲಿ ಗಣ್ಯ, ಸಂಭಾವಿತ ವ್ಯಕ್ತಿಯೆಂದು ಗುರುತಿಸಿಕೊಂಡು ವೃತ್ತಿಜೀವನ ನಡೆಸುತ್ತಿದ್ದಾರೆ.[೨೨] 'ಶಿಕ್ಷಣ' ಕೈದಿಯ ಪರಿವರ್ತನೆಗೆ ಎಷ್ಟು ಪ್ರಬಲವಾದ ಜ್ಞಾನಸಂವಹನ ಮಾಧ್ಯಮ ಎಂಬುದಕ್ಕೆ ಈ ಮಾಜಿ ಕೈದಿಯ ಜೀವನದ ಪರಿವರ್ತನೆ ಒಂದು ಉದಾಹರಣೆ.

ರಾಜ್ಯದ ಬಂದಿಖಾನೆ ಇಲಾಖೆ ೧೯೭೫ ರಿಂದ ೧೯೮೩ ರ ವರೆಗೆ ತನ್ನ ಹಲವು ಕೈದಿಗಳಿಗೆ ಬಂಧನದಲ್ಲಿದ್ದೇ ಶಿಕ್ಷಣ ಮುಂದುವರಿಸುವಂತೆ ತನ್ನ ನಿಯಮಗಳನ್ನು ಸಡಿಲಿಸಿ ಅವಕಾಶ ಮಾಡಿಕೊಟ್ಟಿತು (ಕೋಷ್ಟಕ ೩). ಆ ಅವಧಿಯಲ್ಲಿ ಬಂದಿಖಾನೆ ಇಲಾಖೆ ಶಿಕ್ಷಣಕ್ಕೆ ಎಷ್ಟು ಉತ್ತೇಜನ ಕೊಟ್ಟಿತೆಂದರೆ, ಆಸಕ್ತ ಕೈದಿಗಳಿಗೆ ಪ್ರತ್ಯೇಕವಾದ ಪಾಠ (ಟ್ಯೂಷನ್) ಹೇಳಿಕೊಡುವ ಅವಕಾಶವನ್ನು ಬಂದಿಖಾನೆಯೊಳಗೇ ಕಲ್ಪಿಸಿಕೊಟ್ಟಿತು.

**ಕೋಷ್ಟಕ ೪**

**ಕರ್ನಾಟಕ ರಾಜ್ಯದ ಕೇಂದ್ರ ಬಂದಿಖಾನೆಯುಗಳಲ್ಲಿ**

**ಪರೀಕ್ಷೆಗೆ ಹಾಜರಾದ ಮತ್ತು ಉತ್ತೀರ್ಣಗೊಂಡ ಬಂದಿಗಳ ಸಂಖ್ಯಾ ವಿವರ**

(೧೯೭೫ ರಿಂದ ೧೯೮೩ ರ ವರೆಗೆ)

| ವರ್ಷ | ಮೆಟ್ರಿಕ್ಯುಲೇಷನ್ | | ಪಿಯುಸಿ | | ಸ್ನಾತಕ ಪದವಿ | | ಇತರ ಪದವಿ (ಕಾನೂನು, ಬಿ.ಇಡಿ, ಟಿ.ಸಿ.ಎಚ್, ಚಿತ್ರಕಲಾ ಪರೀಕ್ಷೆ ಇತ್ಯಾದಿ) | |
|---|---|---|---|---|---|---|---|---|
| | ಹಾಜರಿ | ಉತ್ತೀರ್ಣ | ಹಾಜರಿ | ಉತ್ತೀರ್ಣ | ಹಾಜರಿ | ಉತ್ತೀರ್ಣ | ಹಾಜರಿ | ಉತ್ತೀರ್ಣ |
| ೧೯೭೫-೭೬ | ೧೨ | ೧ | ೩ | ೨ | ೧ | ೧ | - | - |
| ೧೯೭೬ - ೭೭ | ೪ | ೨ | ೪ | ೩ | ೧ | ೧ | ೨೩ | ೧೮ |
| ೧೯೭೭ - ೭೮ | ೧ | - | - | - | ೨ | ೨ | ೨೬ | ೨೩ |
| ೧೯೭೮ - ೭೯ | - | - | - | - | ೧ | ೧ | ೬೧ | ೫೮ |
| ೧೯೭೯ - ೮೦ | ೧ | - | - | - | ೧ | ೧ | ೩೮ | ೩೨ |
| ೧೯೮೦ - ೮೧ | - | - | - | - | - | - | ೪ | ೪ |
| ೧೯೮೧ - ೮೨ | - | - | ೧ | ೧ | - | - | ೪ | ೪ |
| ೧೯೮೨ - ೮೩ | ೧ | - | - | - | - | - | ೩ | ೩ |

ಈ ಸಾಂಪ್ರದಾಯಿಕ ಶಿಕ್ಷಣ ಪದ್ಧತಿಗಿದ್ದ ಇಲಾಖೆಯ ಉತ್ತೇಜನ ೧೯೮೪ರಿಂದ ಇದ್ದಕ್ಕಿದ್ದಂತೆ ಕಡಿಮೆಯಾಗತೊಡಗಿತು. ಉತ್ತೇಜನ ಕಮ್ಮಿಯಾದರೂ ಅದು ಕೈದಿಗಳ ಓದಿನ ಉತ್ಸಾಹಕ್ಕೆ ತಣ್ಣೀರೆರಚಲಿಲ್ಲ. ಕೈದಿ ಬಂದಿಖಾನೆಯೊಳಗಿದ್ದು ಓದು ಮುಂದುವರಿಸುವುದಕಷ್ಟೇ ಇಲಾಖೆ ತನ್ನ ಉತ್ತೇಜನವನ್ನು ಸೀಮಿತಗೊಳಿಸಿತು. ಈ ಉತ್ತೇಜನೆಯ ತೀವ್ರತೆ ಕಮ್ಮಿಯಾಗುವುದಕ್ಕೂ ಕೆಲವು ಕಾರಣವಿತ್ತು.

೧. ಕೇಂದ್ರ ಸರಕಾರದ ಗೃಹ ಸಚಿವಾಲಯ, ಏಳನೇ ಹಣಕಾಸು ಆಯೋಗದ ೧೯೭೮ ರ ಅಧ್ಯಯನ ವರದಿಯ ಶಿಫಾರಸಿನಂತೆ, ಬಂದಿಖಾನೆಯನ್ನು ಪಂಚವಾರ್ಷಿಕ ಯೋಜನೆಯಡಿ ಅಳವಡಿಸಿ, 'ಬಂದಿಖಾನೆ ಆಡಳಿತ

ಆಧುನೀಕರಣ' ಯೋಜನೆಯಲ್ಲಿ ರಾಜ್ಯಗಳಿಗೆ ಹಣಸಹಾಯ ನೀಡಲು ತೀರ್ಮಾನಿಸಿದಾಗ ಹಾಕಿದ ಷರತ್ತುಗಳಲ್ಲಿ ಒಂದು ಮುಖ್ಯ ಷರತ್ತೆಂದರೆ - ಸಾಂಪ್ರದಾಯಿಕ ಶಿಕ್ಷಣದ ಜತೆಗೆ ಹಾಗು ಅದಕ್ಕಿಂತಲೂ ಹೆಚ್ಚಾಗಿ ಹೊಸ ಹೊಸ ವೃತ್ತಿಪರಶಿಕ್ಷಣ - ತರಬೇತಿಗೆ ಒತ್ತು ಕೊಟ್ಟು, ಕೈದಿಗಳ ಮನ ತಿದ್ದುಪಡಿಯ ಜೊತೆಗೆ ಅವರ ಬಿಡುಗಡೆಯ ನಂತರದ ಪುನರ್ವಸತಿಗೂ ಪರಿಣಾಮಕಾರಿಯಾದ ಯೋಜನೆ ಕಲ್ಪಿಸಬೇಕು - ಎಂದು.

ರಾಜ್ಯಬಂದಿಖಾನೆ ಇಲಾಖೆ ಈ ನಿಟ್ಟಿನಲ್ಲಿ ವಯಸ್ಕರ ಶಿಕ್ಷಣ ಪದ್ಧತಿಗೆ ಕಡ್ಡಾಯ ರೂಪುಕೊಟ್ಟು ಉಳಿದ ಸಾಂಪ್ರದಾಯಿಕ ಶಿಕ್ಷಣವನ್ನು ಕೈದಿಯ ಆಸಕ್ತಿಯ ವಿಚಾರವೆಂಬಂತೆ ಬಿಟ್ಟು ಕೊಟ್ಟಿತು. ಆದರೆ ಕೈದಿ ಆಯ್ದ ಅಥವ ತಾನು ನಿಗದಿಪಡಿಸಿದ ವೃತ್ತಿಪರ ಶಿಕ್ಷಣವನ್ನು ವೃತ್ತಿತರಬೇತಿಯೊಂದಿಗೆ ಕಡ್ಡಾಯಗೊಳಿಸಿತು. ಸ್ವಾತಂತ್ರ್ಯಪೂರ್ವದಲ್ಲೇ ಚಲಾವಣೆಯಲ್ಲಿದ್ದ ಕೆಲ ವೃತ್ತಿಪರ ತರಬೇತಿ ಜತೆಗೆ ಹೊಸ ವೃತ್ತಿಪರ ಶಿಕ್ಷಣ - ತರಬೇತಿಗಳು ಹೊಸೆದುಕೊಂಡವು.

೨. ಕೇಂದ್ರ ಸರಕಾರದ ಮುತುವರ್ಜಿಯಿಂದ ೧೯೮೦ ರ ಜುಲೈನಲ್ಲಿ ನೇಮಿಸಲ್ಪಟ್ಟ ಜಸ್ಟಿಸ್ ನರೇನ್ ಮುಲ್ಲಾ ನೇತೃತ್ವದ, ಅತ್ಯಂತ ಮಹತ್ವದ ಸಮಿತಿ 'ಭಾರತೀಯ ಬಂದಿಖಾನೆ ಸುಧಾರಣಾ ಸಮಿತಿ ೧೯೮೦ - ೮೩', ತನ್ನ ಸಮಿತಿಯ ವರದಿಯಲ್ಲಿ ಮಾಡಿರುವ ಅನೇಕ ಮುಖ್ಯ ಶಿಫಾರಸುಗಳಲ್ಲಿ ಒಂದಾದ ಶಿಫಾರಸು : ಪ್ರತೀ ಕೇಂದ್ರ / ಜಿಲ್ಲಾ ಬಂದಿಖಾನೆಗಳಲ್ಲೂ ಕೈದಿಗಳ ಮನಪರಿವರ್ತನೆಗೆ ಹಾಗೂ ಬಿಡುಗಡೆಯ ನಂತರದಲ್ಲಿ ಅವರಿಗೆ ಪುನರ್ವಸತಿ (ಮರುನೆಲೆ) ಕಲ್ಪಿಸಲು ವೃತ್ತಿ ಶಿಕ್ಷಣ ಹಾಗೂ ವೃತ್ತಿ ತರಬೇತಿ ಕಾರ್ಯಕ್ರಮವನ್ನು ಕಡ್ಡಾಯವಾಗಿ ಹಮ್ಮಿಕೊಳ್ಳಬೇಕು - ಎಂದು. ಈ ಸಮಿತಿಯ ಶಿಫಾರಸು ಕೂಡಾ ಬಂದಿಖಾನೆ ಇಲಾಖೆಯ ಉತ್ತೇಜನವನ್ನು ಸಾಂಪ್ರದಾಯಿಕ ಶಿಕ್ಷಣದಿಂದ ವೃತ್ತಿಪರ ಶಿಕ್ಷಣದತ್ತ ವಾಲಿಸಿತ್ತು. ಆದರೆ ಇಲಾಖೆ ಸಾಂಪ್ರದಾಯಿಕ ಶಿಕ್ಷಣವನ್ನು ದೂರತಳ್ಳಲಿಲ್ಲ. ದೂರಶಿಕ್ಷಣ, ಅಂಚೆಶಿಕ್ಷಣದ ಸೌಲಭ್ಯವನ್ನು ತನ್ನ ಕೈದಿಗಳಿಗೆ ಒದಗಿಸಿಕೊಟ್ಟಿತು. ೧೯೯೩ ರಿಂದ ಇಂದಿರಾಗಾಂಧಿ ರಾಷ್ಟ್ರೀಯ ಮುಕ್ತ ವಿಶ್ವವಿದ್ಯಾಲಯ (IGNOU) ಶಾಖೆಯೊಂದನ್ನು ಬೆಂಗಳೂರು ಕೇಂದ್ರ ಬಂದಿಖಾನೆಯಲ್ಲಿ ಆರಂಭಿಸಲಾಯಿತು. ನಂತರ ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯದ ಶಾಖೆಯನ್ನೂ ತೆರೆಯಲಾಯಿತು. ಮೈಸೂರು ಕೇಂದ್ರ ಬಂದಿಖಾನೆಯಲ್ಲೂ ಇದೇ ಮುಕ್ತ ವಿಶ್ವವಿದ್ಯಾಲಯದ ಮತ್ತೊಂದು ಶಾಖೆಯನ್ನೂ ಆರಂಭಿಸಲಾಯಿತು. ಮುಕ್ತ ವಿಶ್ವವಿದ್ಯಾನಿಲಯದ ಶಿಕ್ಷಣ ನೀಡುವ ಮೂಲಕ ಕೈದಿ ವಿಶ್ವವಿದ್ಯಾಲಯಕ್ಕೆ ಹೋಗುವ ಬದಲು ವಿಶ್ವವಿದ್ಯಾಲಯವೇ ಕೈದಿ ಬಳಿಗೆ ಬಂದಂತಾಯ್ತು ಹಾಗೂ ಅಲ್ಲಿಂದಲೇ ಸಾಮಾಜಿಕ ಸಮೀಕರಣ ಪ್ರಕ್ರಿಯೆ ಆರಂಭವಾದಂತಾಯ್ತು.

ಮುಕ್ತ ವಿಶ್ವವಿದ್ಯಾನಿಲಯಗಳ ಶಾಖೆಗಳನ್ನು ಬಂದಿಖಾನೆಯೊಳಗೆ ಆರಂಭಿಸುವ ಮೂಲಕ ಬಂದಿಖಾನೆಯೊಳಗಿನ 'ಶಿಕ್ಷಣ'ವೆಂಬ ಜ್ಞಾನ ಸಂವಹನಾ ಮಾಧ್ಯಮಕ್ಕೆ ಪುಷ್ಟಿ ಬಂದಂತಾಯಿತು. ಹೊಸ ಚಾಲನೆ ದೊರಕಿತು. ಈ ಎರಡು ಮುಕ್ತ ವಿಶ್ವವಿದ್ಯಾಲಯಗಳ ವ್ಯವಸ್ಥೆಯಡಿ ಲಭ್ಯವುಳ್ಳ ಹಲವು ಡಿಪ್ಲೋಮಾ ಕೋರ್ಸ್, ಸರ್ಟಿಫಿಕೇಟ್ ಕೋರ್ಸ್‌ಗಳನ್ನು, ಸ್ನಾತಕ - ಸ್ನಾತಕೋತ್ತರ ಪದವಿಗಳನ್ನು ಕೈದಿಗಳು ಪಡೆಯುವಂತಾಯಿತು. ಶಿಕ್ಷಣ ಪ್ರಗತಿಗೆ ಕೈದಿಗಳಿಗೆ ಅಗತ್ಯವುಳ್ಳ ಶಿಕ್ಷಣ ಶುಲ್ಕ - ಪುಸ್ತಕಗಳನ್ನು ಇಲಾಖೆಯೇ ಒದಗಿಸಿಕೊಟ್ಟಿತು.

## ಕೋಷ್ಟಕ ೫

# ಕೇಂದ್ರ ಮತ್ತು ಬಯಲು ಬಂದಿಖಾನೆಗಳಲ್ಲಿನ ಸಿಬ್ಬಂದಿಯ ಶಿಕ್ಷಣ ವಿವರ

| ಕ್ರ. ಸಂ. | ಬಂದಿಖಾನೆಗಳು | ಸಾಕ್ಷರತಾ ಶಿಕ್ಷಣ/ ಸಾಂಪ್ರದಾಯಿಕ ಶಿಕ್ಷಣ | ಶಿಕ್ಷಕರು (ಶಿಕ್ಷಣ ಇಲಾಖೆಯ ಪ್ರತಿನಿಯೋಜನೆ) |
|---|---|---|---|
| ೧ | ಬಳ್ಳಾರಿ ಬಂದಿಖಾನೆ | ಸಾಕ್ಷರತಾ ಶಿಕ್ಷಣ/ಸಾಂಪ್ರದಾಯಿಕ ಪ್ರಾಥಮಿಕ ಶಿಕ್ಷಣ (ಹೆಚ್ಚಿನ ವಿದ್ಯಾಭ್ಯಾಸ ಬೇಕಿದ್ದಲ್ಲಿ ಬೆಂಗಳೂರು ಕೇಂದ್ರ ಬಂದಿಖಾನೆಗೆ ವರ್ಗಾವಣೆ) | ಯಾರೂ ಇಲ್ಲ (ಮಂಜೂರಾದ ಹುದ್ದೆ-೨) (ಪುರುಷ-೧, ಮಹಿಳೆ-೧) |
| ೨ | ಗುಲಬರ್ಗಾ ಕೇಂದ್ರ ಬಂದಿಖಾನೆ | ಸಾಕ್ಷರತಾ ಶಿಕ್ಷಣ/ಸಾಂಪ್ರದಾಯಿಕ ಪ್ರಾಥಮಿಕ ಶಿಕ್ಷಣ (ಹೆಚ್ಚಿನ ವಿದ್ಯಾಭ್ಯಾಸ ಬೇಕಿದ್ದಲ್ಲಿ ಬೆಂಗಳೂರು ಕೇಂದ್ರ ಬಂದಿಖಾನೆಗೆ ವರ್ಗಾವಣೆ) | ೧ ಪುರುಷ ಶಿಕ್ಷಕ (ಇದ್ದಾರೆ), ೧ ಮಹಿಳೆ (ಇಲ್ಲ) (ಮಂಜೂರಾದ ಹುದ್ದೆ-೨) (ಪುರುಷ-೧, ಮಹಿಳೆ-೧) |
| ೩ | ವಿಜಾಪುರ ಕೇಂದ್ರ ಬಂದಿಖಾನೆ | ಸಾಕ್ಷರತಾ ಶಿಕ್ಷಣ/ಸಾಂಪ್ರದಾಯಿಕ ಪ್ರಾಥಮಿಕ ಶಿಕ್ಷಣ (ಹೆಚ್ಚಿನ ವಿದ್ಯಾಭ್ಯಾಸ ಬೇಕಿದ್ದಲ್ಲಿ ಬೆಂಗಳೂರು ಕೇಂದ್ರ ಬಂದಿಖಾನೆಗೆ ವರ್ಗಾವಣೆ) | ೧ ಪುರುಷ (ಇದ್ದಾರೆ), ೧ ಮಹಿಳೆ (ಇಲ್ಲ) (ಮಂಜೂರಾದ ಹುದ್ದೆ-೨) (ಪುರುಷ-೧, ಮಹಿಳೆ-೧) |
| ೪ | ಬೆಳಗಾಂ ಕೇಂದ್ರ ಬಂದಿಖಾನೆ | ಸಾಕ್ಷರತಾ ಶಿಕ್ಷಣ/ಸಾಂಪ್ರದಾಯಿಕ ಪ್ರಾಥಮಿಕ ಶಿಕ್ಷಣ (ಹೆಚ್ಚಿನ ವಿದ್ಯಾಭ್ಯಾಸ ಬೇಕಿದ್ದಲ್ಲಿ ಬೆಂಗಳೂರು ಕೇಂದ್ರ ಬಂದಿಖಾನೆಗೆ ವರ್ಗಾವಣೆ) | ೧ ಪುರುಷ (ಇದ್ದಾರೆ), ೧ ಪುರುಷ (ಇಲ್ಲ) ೧ ಮಹಿಳೆ (ಇದ್ದಾರೆ), (ಮಂಜೂರಾದ ಹುದ್ದೆ-೩) (ಪುರುಷ-೨, ಮಹಿಳೆ-೧) |
| ೫ | ಮೈಸೂರು ಕೇಂದ್ರ ಬಂದಿಖಾನೆ | ಸಾಕ್ಷರತಾ ಶಿಕ್ಷಣ/ಸಾಂಪ್ರದಾಯಿಕ ಪ್ರಾಥಮಿಕ ಶಿಕ್ಷಣ ಹಾಗೂ ಉನ್ನತ ಶಿಕ್ಷಣಕ್ಕೆ ಅವಕಾಶವಿದೆ. (ಕರ್ನಾಟಕ ಮುಕ್ತ ವಿ.ವಿ. ಮತ್ತು IGNOUದಲ್ಲಿ ಸ್ನಾತಕ-ಸ್ನಾತಕೋತ್ತರ ಶಿಕ್ಷಣಕ್ಕೆ ಅವಕಾಶವಿದೆ) | ೧ ಪುರುಷ (ಇದ್ದಾರೆ), ೧ ಮಹಿಳೆ (ಇದ್ದಾರೆ), (ಮಂಜೂರಾದ ಹುದ್ದೆ-೨) (ಪುರುಷ-೧, ಮಹಿಳೆ-೧) |
| ೬ | ಬೆಂಗಳೂರು ಕೇಂದ್ರ ಬಂದಿಖಾನೆ | ಸಾಕ್ಷರತಾ ಶಿಕ್ಷಣ/ಸಾಂಪ್ರದಾಯಿಕ ಪ್ರಾಥಮಿಕ ಶಿಕ್ಷಣ ಹಾಗೂ ಉನ್ನತ ಶಿಕ್ಷಣಕ್ಕೆ ಅವಕಾಶವಿದೆ. (ಕರ್ನಾಟಕ ಮುಕ್ತ ವಿ.ವಿ. ಮತ್ತು IGNOUದಲ್ಲಿ ಸ್ನಾತಕ-ಸ್ನಾತಕೋತ್ತರ ಶಿಕ್ಷಣಕ್ಕೆ ಅವಕಾಶವಿದೆ) | ೨ ಪುರುಷ (ಇಲ್ಲ), ೧ ಮಹಿಳೆ (ಇಲ್ಲ), (ಮಂಜೂರಾದ ಹುದ್ದೆ-೩) (ಪುರುಷ-೨, ಮಹಿಳೆ-೧) |
| ೭ | ಬಯಲು ಬಂದಿಖಾನೆ | ಉನ್ನತ ವಿದ್ಯಾಭ್ಯಾಸವನ್ನು ಮುಕ್ತ ವಿಶ್ವವಿದ್ಯಾನಿಲಯದಲ್ಲಿ ಮುಂದುವರೆಸಬಹುದು. | ಇಲ್ಲ |

'IGNOU' ದಲ್ಲಿ ಈಗಾಗಲೇ ೩೨ ಮಂದಿ ಕೈದಿಗಳು ಆಹಾರ ಮತ್ತು ಪೋಷಕಾಂಶ ಕೋರ್ಸ್ (Food and Nutrition) ಮುಗಿಸಿ ಪ್ರಮಾಣಪತ್ರ ಪಡೆದಿದ್ದಾರೆ. ೩೦ ಕೈದಿಗಳು ಇನ್ನೂ ಹಲವು ಕೋರ್ಸ್‌ಗಳಿಗೆ ಪರೀಕ್ಷೆ ಕಟ್ಟಿದ್ದಾರೆ. ೪ ಮಂದಿ ಸ್ನಾತಕ (ಬಿ.ಎ.) ಪದವಿಯ ಫಲಿತಾಂಶ ನಿರೀಕ್ಷಿಸುತ್ತಿದ್ದಾರೆ. ಮೈಸೂರು ಮುಕ್ತ ವಿಶ್ವವಿದ್ಯಾನಿಲಯದಲ್ಲೂ ೫ ಮಂದಿ ಎಂ.ಎ. ಕಟ್ಟಿ ಪರೀಕ್ಷೆ ಬರೆದು, ಇಬ್ಬರು ಎಂ.ಎ. (ಪ್ರೀವಿಯಸ್)ನಲ್ಲಿ ತೇರ್ಗಡೆ ಹೊಂದಿದ್ದಾರೆ.

ಈ ಕೈದಿಗಳ ಸಾಧನೆ ಇತರ ಕೈದಿಗಳಲ್ಲೂ ಶಿಕ್ಷಣ ಮುಂದುವರಿಕೆಗೆ ಪ್ರೇರಣೆ ನೀಡುತ್ತಿದೆ. ರಾಜ್ಯದ ಯಾವುದೇ ಕೇಂದ್ರ ಬಂದಿಖಾನೆಯಲ್ಲಿರುವ ಕೈದಿಗೆ ಶಿಕ್ಷಣ ಮುಂದುವರಿಸುವ ಇಚ್ಛೆ ಇದ್ದಲ್ಲಿ ಆತನನ್ನು ಕೇಂದ್ರ ಬಂದಿಖಾನೆ ಬೆಂಗಳೂರಿಗೆ ವರ್ಗಾಯಿಸುವ ಸೌಲಭ್ಯವಿದೆ.

## ೧.೨೧ ಕಂಪ್ಯೂಟರ್ ಶಿಕ್ಷಣ

ಹೊರಜಗತ್ತಿನಲ್ಲಿನ ವೈಜ್ಞಾನಿಕ ಪ್ರಗತಿಗೆ ತಕ್ಕಂತೆ ತಮ್ಮ ಕೈದಿಗಳನ್ನು ಶೈಕ್ಷಣಿಕವಾಗಿ ಸಜ್ಜುಗೊಳಿಸಬೇಕೆಂಬ ತೀರ್ಮಾನದಿಂದ ರಾಜ್ಯ ಬಂದಿಖಾನೆ ಇಲಾಖೆ ಕಂಪ್ಯೂಟರ್ ಶಿಕ್ಷಣವನ್ನು ಬಂದಿಖಾನೆಯೊಳಗೆ ನೀಡತೊಡಗಿದೆ. ಮುಂಬೈಯ ಸ್ಪರ್‌ಲೈಟ್ ಫೌಂಡೇಶನ್‌ನ ಸಹಭಾಗಿತ್ವದಲ್ಲಿ, ಬಂದಿಖಾನೆ ಇಲಾಖೆ ೧೯೯೯ ರ ಜನವರಿಯಿಂದ ಬೆಂಗಳೂರು ಕೇಂದ್ರ ಬಂದಿಖಾನೆಯಲ್ಲಿ ಆರು ತಿಂಗಳ ಅವಧಿಯ ಡಿಪ್ಲೋಮಾ ಶಿಕ್ಷಣವನ್ನು ಆರಂಭಿಸಿದೆ. ಈ ಶಿಕ್ಷಣ ಪಡೆದವರು IGNOU ಕಂಪ್ಯೂಟರ್ ಈ ಡಿಪ್ಲೋಮಾ ಶಿಕ್ಷಣದಡಿ ತಮ್ಮ ಶಿಕ್ಷಣ ಮುಂದುವರಿಸಬಹುದು. ಈಗಾಗಲೇ ೧೨೦ ಮಂದಿ ಕೈದಿಗಳು ಡಿಪ್ಲೋಮಾ ಶಿಕ್ಷಣ ಪಡೆದಿದ್ದಾರೆ. ಸ್ಪರ್‌ಲೈಟ್ ಫೌಂಡೇಶನ್‌ನವರು ೫ ಕಂಪ್ಯೂಟರ್‌ಗಳ ಜತೆ ಪ್ರಿಂಟರ್‌ಗಳನ್ನೂ ನೀಡಿ, ಒಬ್ಬ ತಜ್ಞ ತರಬೇತುದಾರನನ್ನು ತನ್ನ ವತಿಯಿಂದ ನೇಮಿಸಿದೆ. ಇದೀಗ ಬಂದಿಖಾನೆ ಇಲಾಖೆ, ಜನೋದಯ (NGO) ರೋಟರಿಕ್ಲಬ್ ಹಾಗೂ NIIT ಜತೆಗಿನ ಸಹಕಾರದಲ್ಲಿ ಮತ್ತೊಂದು ಡಿಪ್ಲೋಮಾ ತರಗತಿ ಆರಂಭಿಸಿದೆ. ಈಗಾಗಲೇ ಈ ಸಂಸ್ಥೆಗಳು ಬಂದಿಗಳಿಗಾಗಿ ೧೦ ಕಂಪ್ಯೂಟರ್ ಸಿಸ್ಟಮ್‌ಗಳನ್ನು ಒದಗಿಸಿಕೊಟ್ಟಿದ್ದು ತರಬೇತಿ ಕಾರ್ಯಕ್ರಮ ನಡೆಯುತ್ತಿದೆ.

ರಾಜ್ಯ ಬಂದಿಖಾನೆ ಇಲಾಖೆ ಸಾಂಪ್ರದಾಯಿಕ ಶಿಕ್ಷಣಕ್ಕಾಗಿ (ವಯಸ್ಕರ ಶಿಕ್ಷಣ ಹೊರತುಪಡಿಸಿ) ಇದುವರೆಗೆ ೧೯೯೪ - ೯೫ ರಿಂದ ೨೦೦೧ - ೨೦೦೨ ರ ವರೆಗೆ 'ಶಿಕ್ಷಣ' ಲೆಕ್ಕ ಶೀರ್ಷಿಕೆಯಡಿ ೮.೯ ಲಕ್ಷ ಹಣ ನೀಡಿದ್ದು, ಅದರಲ್ಲಿ ೪,೭೯,೯೧೩ ರೂ.ಗಳನ್ನು ಮಾತ್ರ ಶಿಕ್ಷಣಕ್ಕೆ ವ್ಯಯಿಸಲಾಗಿದೆ (ಕೋಷ್ಟಕ ೬ರಲ್ಲಿ ಗಮನಿಸಿ). ಉಳಿದ ಹಣವನ್ನು ಬೇರೆ ಕೆಲಸಗಳಿಗಾಗಿ ವಿನಿಯೋಗಿಸಲಾಗಿದೆ, ಕೆಲವೊಂದು ಬಾರಿ ಸರಕಾರಕ್ಕೆ ಮರುಪಾವತಿಸಲಾಗಿದೆ. 'ಶಿಕ್ಷಣ' ಲೆಕ್ಕ ಶೀರ್ಷಿಕೆಯಡಿ ಲಭ್ಯವಿರುವ ಹಣ, ಶಿಕ್ಷಣಕ್ಕೆ ಬಳಕೆಯಾಗದೆ ಉಳಿದಲ್ಲಿ ಅದನ್ನು ಶಿಕ್ಷಣಕ್ಕೆ ಸಂಬಂಧಿಸಿದ ಪುಸ್ತಕ ಖರೀದಿಗೆ ವ್ಯಯಿಸದೆ ಅಥವ ಗ್ರಂಥಾಲಯದ ಔನ್ನತ್ತೀಕರಣಕ್ಕೂ ಬಳಸದೆ, ಹಲವು ಬಾರಿ ಬೇರೆ ಕೆಲಸಗಳಿಗೆ ಬಳಸಿಕೊಂಡಿದ್ದು ಹಾಗೂ ಮತ್ತೆ ಕೆಲವು ಬಾರಿ ಸರಕಾರಕ್ಕೆ ಮರುಪಾವತಿಸಿದನ್ನು ಗಮನಿಸಿದರೆ, ಬಂದಿಖಾನೆ ಇಲಾಖೆಗೆ ಶಿಕ್ಷಣ ಮಾಧ್ಯಮದ ವಿಸ್ತಾರ - ಆಳ - ಹರವಿನ ಬಗ್ಗೆ ಸ್ಪಷ್ಟ ಕಲ್ಪನೆ ಇಲ್ಲವೆಂದು ಪರಿಗಣಿಸಬೇಕಾಗುತ್ತದೆ.

## ಕೋಷ್ಟಕ ೬

# ಬಂದಿಖಾನೆ ಇಲಾಖೆಗೆ ಮಂಜೂರಾದ ಇಲಾಖಾ ಅನುದಾನ ಮತ್ತು ಶೈಕ್ಷಣಿಕ ಖರ್ಚಿನ ವಿವರ

(ಯೋಜನೇತರ)

(೧೯೯೧-೯೨ ರಿಂದ ೨೦೦೧-೦೨ ರವರೆಗೆ : ೧೧ ವರ್ಷಗಳು)

ಲಕ್ಷಗಳಲ್ಲಿ

| ವರ್ಷ | ಮಂಜೂರಾದ ಅನುದಾನ (ಲಕ್ಷಗಳಲ್ಲಿ) | ಅನುದಾನದಲ್ಲಿ ಶಿಕ್ಷಣಕ್ಕೆ ಪಾಲು | ಶಿಕ್ಷಣ ಶೀರ್ಷಿಕೆಯಡಿ ಶಿಕ್ಷಣಕ್ಕೆ ಖರ್ಚು | ಇತರ ಶೀರ್ಷಿಕೆಗಳಡಿ ಖರ್ಚು | ಉಳಿತಾಯ ಅದ್ಯರ್ಪಣೆ |
|---|---|---|---|---|---|
| ೧೯೯೧ - ೯೨ | ೭೩೭ - ೦೦ | ಇಲ್ಲ | - | ೬೮೫-೪೦ | ೫೧-೬೦ |
| ೧೯೯೨ - ೯೩ | ೮೧೧-೦೦ | ಇಲ್ಲ | - | ೭೩೯-೨೮ | ೭೧-೭೨ |
| ೧೯೯೩ - ೯೪ | ೯೦೭-೦೦ | ಇಲ್ಲ | - | ೮೬೮-೦೦ | ೩೯-೦೦ |
| ೧೯೯೪ - ೯೫ | ೧೦೬೪-೨೪ | ೧-೦೦ | ೦-೩೧೧೭೫ | ೯೨೬-೩೭ | ೧೩೭-೮೭ |
| ೧೯೯೫ - ೯೬ | ೧೨೨೫-೮೭ | ೧-೦೦ | ೧-೦೦ | ೧೨೧೧-೭೪ | ೧೪-೧೩ |
| ೧೯೯೬ - ೯೭ | ೧೫೧೮-೧೫ | ೧-೦೫ | ೦-೪೭೧೫೮ | ೧೪೯೨-೬೩ | ೨೫-೫೨ |
| ೧೯೯೭ - ೯೮ | ೧೬೦೯-೭೩ | ೧-೧೦ | ೦-೩೨೫೮೦ | ೧೪೨೨-೬೬ | ೧೮೭-೦೭ |
| ೧೯೯೮ - ೯೯ | ೧೭೪೨-೪೯ | ೧-೧೬ | ೦-೧೩೦೦೦ | ೧೬೭೩-೦೦ | ೬೯-೪೯ |
| ೧೯೯೯ - ೨೦೦೦ | ೨೦೨೭-೭೨ | ೧--೧೬ | ೦-೧೩೦೦೦ | ೧೯೩೯-೨೬ | ೮೮-೪೬ |
| ೨೦೦೦ - ೨೦೦೧ | ೨೧೯೫-೮೫ | ೧-೨೦ | ೧-೨೦ | ೨೧೩೧-೭೯ | ೬೦-೦೬ |
| ೨೦೦೧ - ೨೦೦೨ | ೨೩೦೯-೪೪ | ೧-೨೩ | ೧-೨೩ | ೨೨೦೧-೯೯ | ೧೦೭-೪೫ |

'ಭಾರತೀಯ ದಂಡ ಸಂಹಿತೆ', 'ಭಾರತೀಯ ದಂಡ ಪ್ರಕ್ರಿಯಾ ಸಂಹಿತೆ' ಅಪರಾಧಿಗೆ ವಿಧಿಸುವ 'ಜೀವಾವಧಿ ಸೆರೆಮನೆ ವಾಸವೇ' ಒಂದು ಶಿಕ್ಷೆ. ಸೆರೆಮನೆಯಲ್ಲಿ ಆ 'ಸೆರೆಮನೆ ವಾಸ' ಶಿಕ್ಷೆಯನ್ನು ಜಾರಿಗೆ ತರಬೇಕೇ ವಿನಾ ಅದು ಶಿಕ್ಷೆ ವಿಧಿಸುವ ತಾಣವಲ್ಲ. ಕೈದಿಗೆ ಪ್ರಜಾಪ್ರಭುತ್ವದಡಿ ದತ್ತವಾಗಿ ಬಂದಿರುವ ಓದು - ಶಿಕ್ಷಣದಂತಾ ಮೂಲಭೂತ ಸೌಲಭ್ಯ ಹಾಗೂ ಹಕ್ಕನ್ನು ಯಾರೂ ಕಸಿದುಕೊಳ್ಳುವಂತಿಲ್ಲ. ಕಸಿದುಕೊಂಡರೆ ಅದು ಒಂದು ರೀತಿಯಲ್ಲಿ ಮಾನವ ಹಕ್ಕುಗಳ ಉಲ್ಲಂಘನೆಯೂ ಹೌದು. ಬಂದಿಖಾನೆಯೊಳಗೆ ಕೈದಿಗೆ ಓದು - ಶಿಕ್ಷಣದ ಸೌಲಭ್ಯ ಒದಗಿಸದಿದ್ದರೆ ಅದು 'ಶಿಕ್ಷೆ' ಎಂದು ಪರಿಗಣಿತವಾಗುತ್ತದೆ. ಇವೆಲ್ಲಕ್ಕಿಂತಲೂ ಮುಖ್ಯವಾಗಿ ಕರ್ನಾಟಕ ರಾಜ್ಯದ ಬಂದಿಖಾನೆ ಇಲಾಖೆ ಕೆಲವು ಮಾನವೀಯ ಮೌಲ್ಯಗಳು, ಮಾನವ ಹಕ್ಕುಗಳು, ಹಾಗೂ ಮಾನವತಾವಾದಗಳನ್ನು ಮುಂದಿಟ್ಟುಕೊಂಡು ಓದು - ಶಿಕ್ಷಣ ನೀಡುವಂಥ ಮಾನವೀಕರಣ ಪ್ರಕ್ರಿಯೆಗೆ ಯಾವ ಸಮಿತಿಯ ವರದಿಯನ್ನು ಕಾಯಲಿಲ್ಲ. ಹಳೆ ಮೈಸೂರು ಪ್ರಾಂತ್ಯದಲ್ಲಿದ್ದ ಬಂದಿಖಾನೆಗಳಲ್ಲಿ ೧೮೮೩ ರಲ್ಲೇ ಕೈದಿಗಳಿಗೆ ಶಿಕ್ಷಣ ನೀಡಲಾಗುತ್ತಿತ್ತು. ೧೯೨೩ ರ ವೇಳೆಗೆ ಬೆಂಗಳೂರು, ಮೈಸೂರು ಬಂದಿಖಾನೆಗಳಲ್ಲಿ ಕೆಲವು ಕಿರುಉದ್ಯಮಗಳನ್ನು ಆರಂಭಿಸಿ, ಅದಕ್ಕೆ ಸಂಬಂಧಿಸಿದ ವೃತ್ತಿಪರ ತರಬೇತಿಯನ್ನೂ ನೀಡಲಾಗುತ್ತಿತ್ತು.

ಪ್ರಸ್ತುತ ರಾಜ್ಯದ ಬಂದಿಖಾನೆಗಳಲ್ಲಿರುವ, ಅನಕ್ಷರಸ್ಥ ಜೀವಾವಧಿ ಕೈದಿಗಳಲ್ಲಿ (೨೦೦೧ ಡಿಸೆಂಬರ್‌ನ ಕ್ಷೇತ್ರಕಾರ್ಯ ವರದಿಯಂತೆ) ಶೇಕಡಾ ೮೦ ಮಂದಿ ವಯಸ್ಕರ ಶಿಕ್ಷಣ ಯೋಜನೆಯಡಿ ಅಕ್ಷರಸ್ಥರಾಗಿದ್ದಾರೆ. ಕೆಲವರು

ತಮ್ಮ ಸಹಿಗಳನ್ನು ಹಾಕಿ, ದೊಡ್ಡ ಅಕ್ಷರದ ಒತ್ತಕ್ಷರವಿಲ್ಲದ ಪುಸ್ತಕಗಳನ್ನು ಮಾತ್ರವೇ ಸಾವಕಾಶವಾಗಿ ಓದಬಲ್ಲವರಾದರೆ, ಮತ್ತೆ ಕೆಲವರು ಕಾದಂಬರಿ - ಕಥೆಗಳನ್ನು ಓದುವಷ್ಟು ಅಕ್ಷರ ಜ್ಞಾನವುಳ್ಳವರಾಗಿದ್ದಾರೆ. ಬೆಳಗಾಂ ಕೇಂದ್ರ ಬಂದಿಖಾನೆಯಲ್ಲಿರುವ 'ಸಿದ್ರಾಮ ದುಂಡಪ್ಪ ಮಾಳಗಿ' 'ಕಲ್ಲಪ್ಪಾ ಬಾಳಪ್ಪಾ ಹರಕೆ' 'ಅಜ್ಜಪ್ಪಾ ಬೀರಪ್ಪ' 'ಲಕ್ಷ್ಮಣ ದುಪಟ್ಟೆ' ಯಂತಾ ಜೀವಾವಧಿ ಕೈದಿಗಳು ವಯಸ್ಕರ ಶಿಕ್ಷಣ ಹಾಗೂ ಪ್ರಾಥಮಿಕ ಶಿಕ್ಷಣ ಪಡೆದು ಅಕ್ಷರಸ್ಥರಾಗಿ ಕಾದಂಬರಿ - ಕಥೆಗಳನ್ನು ಓದುವಷ್ಟು ಬದಲಾಗಿದ್ದಾರೆ. (ಅನುಬಂಧ ೩)

ಆದರೂ ಬಂದಿಖಾನೆಗಳ ಅಧಿಕಾರಿಗಳು ಮತ್ತು ಶಿಕ್ಷಕರು ಅನಕ್ಷರಸ್ಥ ಕೈದಿಗಳಿಗೆ ಓದು - ಬರಹದ ಮಹತ್ವವನ್ನು ಮನವರಿಕೆ ಮಾಡಿಸಿ, ಅವರ ಮನವೊಲಿಸಿ ಮತ್ತಷ್ಟು ಮಂದಿಯನ್ನು ಅಕ್ಷರಸ್ಥರನ್ನಾಗಿ ಮಾಡುವ, ಅವರಲ್ಲಿ ಓದುವ ಹವ್ಯಾಸವನ್ನು ಬೆಳೆಸುವ ಅವಶ್ಯಕತೆ ಇನ್ನೂ ಇದೆ. ರಾಜ್ಯ ಬಂದಿಖಾನೆ ಇಲಾಖೆಯೂ ಈ ಬಗ್ಗೆ ತನ್ನ ಸಿಬ್ಬಂದಿಗಳಿಗೆ ಸ್ಪಷ್ಟ ಆದೇಶವನ್ನು ನೀಡಬೇಕಾಗಿದೆ. ಅಕ್ಷರಸ್ಥರಿಗೆ ಉನ್ನತ ಶಿಕ್ಷಣ ನೀಡಿ ಪುನರ್ವಸತಿ ಕಲ್ಪಿಸಿಕೊಳ್ಳಲು ಅಂದರೆ ಉದ್ಯೋಗ ದೊರಕಿಸಿಕೊಡಲು ಸಹಕರಿಸಿದರೆ, ಅನಕ್ಷರಸ್ಥರಿಗೆ ಶಿಕ್ಷಣನೀಡಿ (ಸಾಕ್ಷರತಾ ಅಥವ ವಯಸ್ಕರ ಶಿಕ್ಷಣದಡಿ) ಪ್ರಾಥಮಿಕ ಹಂತದ ಓದು - ಬರಹವನ್ನಷ್ಟೆ ಕಲಿಸಬಹುದು. ಅನಕ್ಷರಸ್ಥರಿಗೆ ಪುನರ್ವಸತಿಗೆ ದಾರಿಯೆಂದರೆ ವೃತ್ತಿಪರ ಶಿಕ್ಷಣ ಅಥವ ತರಬೇತಿ ಅಥವ ಕೃಷಿ. ಸದ್ಯದ ಸಾಮಾಜಿಕ ಪರಿಸ್ಥಿತಿಯಲ್ಲಿ ನಿರುದ್ಯೋಗವೇ ಎಲ್ಲೆಲ್ಲೂ ತಾಂಡವವಾಡುತ್ತಿರಬೇಕಾದರೆ ಅಕ್ಷರಸ್ಥ ಕೈದಿಗಳೂ ಬಂದಿಖಾನೆಯಿಂದ ಮುಕ್ತವಾದ ನಂತರದ ಪುನರ್ವಸತಿಗಾಗಿ ಈಗ ವೃತ್ತಿಪರ ಶಿಕ್ಷಣಕ್ಕೆ ಹೊರಳಬೇಕಾದ ಅಗತ್ಯವಿದೆ. ವೃತ್ತಿಪರ ಶಿಕ್ಷಣವೆಂಬುದು ಅಥವ ವೃತ್ತಿಪರ ತರಬೇತಿ, ಬಂದಿಖಾನೆಯೊಳಗೆ ಒಂದು ಪ್ರಭಾವಶಾಲಿ ಜ್ಞಾನಸಂವಹನ ಮಾಧ್ಯಮವಾಗಿ ಪರಿವರ್ತನೆಗೊಂಡಿದೆ. ವೃತ್ತಿಪರ ಶಿಕ್ಷಣದ ಮೂಲಕ ಕೈದಿಗಳಿಗೆ ಒಂದು ಸ್ಪಷ್ಟ ಜ್ಞಾನಮೂಲದ ಪರಿಚಯಮಾಡಿಸಿ ಆ ಮೂಲಕ ಕೈದಿಯ ಮನಪರಿವರ್ತನೆಗೆ ಹಾಗೂ ಪುನರ್ವಸತಿಗೆ ಪ್ರಯತ್ನಿಸಬಹುದು.

### ೧.೩ ವೃತ್ತಿಪರ ಶಿಕ್ಷಣ - ತರಬೇತಿ - ಉದ್ಯಮ

ಅಪರಾಧಿ ಸೃಷ್ಟಿಯಾಗುವುದಕ್ಕೆ ಮುಖ್ಯ ಕಾರಣ ನಿರುದ್ಯೋಗ, ಬಡತನ, ಅನಕ್ಷರತೆ, ಆರ್ಥಿಕ - ಸಾಮಾಜಿಕ ಅಸಮಾನತೆ. ಹೀಗೆ ಸೃಷ್ಟಿಯಾದ ಅಪರಾಧಿಯನ್ನು ಕಾನೂನು ಶಿಕ್ಷಿಸಿ ಬಂದಿಖಾನೆಗೆ ಕಳುಹಿಸುವ ಉದ್ದೇಶ ಬಂದಿಖಾನೆಯಲ್ಲಿ ಕೊಳೆಯುವುದಕ್ಕಲ್ಲ. ಸುಧಾರಣಾ ತಾಣಗಳಾಗಿ ಕಾರ್ಯನಿರ್ವಹಿಸಬೇಕಾದ ಬಂದಿಖಾನೆಗಳು ಈ ಅಪರಾಧಿಯ ಅಪರಾಧಕ್ಕೆ ಕಾರಣವನ್ನು ಪತ್ತೆಹಚ್ಚಿ, ಆ 'ಕಾರಣ'ಕ್ಕೆ ಚಿಕಿತ್ಸೆ ನೀಡಿ ಮರಳಿ ಸಮಾಜದ ಮುಖ್ಯವಾಹಿನಿಗೆ ಕಳುಹಿಸಿ ಕೊಡುವುದಕ್ಕಾಗಿ. ಸಾಮಾನ್ಯವಾಗಿ ಭಾರತೀಯ ಸಮಾಜದಲ್ಲಿ ಅಪರಾಧಕ್ಕೆ ಕಾರಣ ನಿರುದ್ಯೋಗ, ಬಡತನ, ಅನಕ್ಷರತೆಯೇ ಅಗಿರುವುದರಿಂದ ಬಂದಿಖಾನೆಗಳು ಶಿಕ್ಷಣಕ್ಕೆ ಮತ್ತು ಪುನರ್ವಸತಿ ಯೋಜನೆಗೆ ಹೆಚ್ಚಿನ ಒತ್ತು ನೀಡುತ್ತಿವೆ. ಕೈದಿ ಜೀವಾವಧಿ ಶಿಕ್ಷೆಯ ಬಿಡುಗಡೆಯ ನಂತರ ಎದುರಿಸುವ ಭೀಕರ ಸಮಸ್ಯೆಯೆಂದರೆ ಪುನರ್ವಸತಿ. ಉದ್ಯೋಗವಿಲ್ಲದ ಆತ ಮತ್ತೆ ಆರ್ಥಿಕ - ಸಾಮಾಜಿಕ ಅಸಮಾನತೆಯ ಬಲಿಪಶುವಾಗಿ ಮರಳಿ ಅಪರಾಧಕ್ಕಿಳಿಯುವ ಎಲ್ಲ ಸಾಧ್ಯತೆಗಳೂ ಇವೆ. ಈ ಸಾಧ್ಯತೆಗಳ ಬಗ್ಗೆ ಚಿಂತಿಸಿದ, ಸ್ವಾತಂತ್ರ್ಯಪೂರ್ವ ಹಾಗೂ ಸ್ವಾತಂತ್ರ್ಯಾನಂತರದಲ್ಲಿ ನೇಮಕಗೊಂಡ ಹೆಚ್ಚಿನ 'ಬಂದಿಖಾನೆ ಸುಧಾರಣಾ ಸಮಿತಿ'ಗಳು







ವೃತ್ತಿಪರ ಉತ್ಪನ್ನಗಳು

ರಾಜ್ಯ ಸರಕಾರದ ಬಂದಿಖಾನೆ ಇಲಾಖೆಗಳಿಗೆ 'ಕೈದಿಗಳಿಗೆ ವೃತ್ತಿಪರ ಶಿಕ್ಷಣದ ಜತೆ ವೃತ್ತಿತರಬೇತಿ ನೀಡುವ ಅನೇಕ ಸಣ್ಣ ಉದ್ಯಮಗಳನ್ನು ಆರಂಭಿಸಬೇಕು' ಎಂದು ಸಲಹೆ ಮಾಡಿದ್ದವು.

'ಅಖಿಲ ಭಾರತ ಬಂದಿಖಾನೆ ಕೈಪಿಡಿ ಸಮಿತಿ ೧೯೫೭ - ೫೯' ತನ್ನ ವರದಿಯಲ್ಲಿ ವೃತ್ತಿಶಿಕ್ಷಣ - ತರಬೇತಿಯ ರೂಪುರೇಷೆಗಳು ಹೀಗಿರಬೇಕೆಂದು ಸೂಚಿಸಿದೆ.

ವೃತ್ತಿ ಶಿಕ್ಷಣ ಕಡ್ಡಾಯ ಶೈಕ್ಷಣಿಕ ಕಾರ್ಯಕ್ರಮದ ಅಂಗವಾಗಿರಬೇಕು. ವೃತ್ತಿ ಶಿಕ್ಷಣ ಮತ್ತು ವೃತ್ತಿಯ ತರಬೇತಿಗಳನ್ನು ಕೈದಿ ಇರುವ ಸೆರೆಮನೆಯಲ್ಲಿ (ಪ್ರತೀ ಕೇಂದ್ರ ಮತ್ತು ಜಿಲ್ಲಾ ಬಂದಿಖಾನೆಗಳಲ್ಲಿ) ಸಂಘಟಿಸಬೇಕು. ಹೊರಗಿನ ಸರಕಾರಿ ತಾಂತ್ರಿಕ ಹಾಗೂ ವೃತ್ತಿ ಶಿಕ್ಷಣ ಸಂಸ್ಥೆಗಳಲ್ಲಿನ ಪಠ್ಯಕ್ರಮಗಳನ್ನು, ಪರೀಕ್ಷೆಗಳನ್ನು ಕೈದಿಗಳ ಶೈಕ್ಷಣಿಕ ಮತ್ತು ವೃತ್ತಿಯಲ್ಲಿನ ಕುಶಲತೆಗೆ ಶಕ್ಯವಿದ್ದಷ್ಟು ಹಾಗೂ ಹೊಂದುವಂತೆ ಇಲ್ಲಿಯೂ ಅಳವಡಿಸಬೇಕು. ಪ್ರತಿಯೊಬ್ಬ ಕೈದಿಗೂ ಆತನ ಸಹಜ ಪ್ರವೃತ್ತಿ, ಯೋಗ್ಯತೆ (ಶೈಕ್ಷಣಿಕ) ಹಾಗೂ ಮರುನೆಲೆಯ ಅಗತ್ಯಗಳನ್ನು ಗುರುತಿಸಿಕೊಂಡು, ಆತನಿಂದ ವೃತ್ತಿ ಆಯ್ಕೆಮಾಡಿಸಿ ವೃತ್ತಿ ನಿರ್ದೇಶನ ನೀಡಬೇಕು. ಆ ವೃತ್ತಿಯಲ್ಲಿ ವಿವಿಧ ನೈಪುಣ್ಯವನ್ನು ಗಳಿಸಿಕೊಳ್ಳಲು ಹೆಚ್ಚಿನ ಅವಕಾಶಗಳನ್ನು ಒದಗಿಸಬೇಕು. ತರಬೇತಿ ಸಲಕರಣೆಗಳ ಜತೆಗೆ ತಕ್ಕಷ್ಟು ತರಬೇತಿ ನೀಡುವ ಸಿಬ್ಬಂದಿಯನ್ನು ಒದಗಿಸುವುದಲ್ಲದೆ, ಅದಕ್ಕಾಗಿ ತಗುಲುವ ವೆಚ್ಚವನ್ನು ಅತ್ಯಗತ್ಯವೆಂದು ಗ್ರಹಿಸತಕ್ಕದ್ದು. ಹಾಗೂ ತರಬೇತಿ ಉದ್ಯಮಗಳಿಂದ ಬಂದ ಉತ್ಪಾದನೆಗಳ ಮಾರಾಟದಿಂದ ದೊರೆಯುವ ಲಾಭಕ್ಕೂ, ಕೈದಿಯ ತರಬೇತಿಗೆ ತಗಲುವ ಖರ್ಚಿಗೂ ತಾಳೆ ಹಾಕಬಾರದು.

ಸಮಿತಿಯ ಈ ಶಿಫಾರಸನ್ನು ತನ್ನ 'ಬಂದಿಖಾನೆ ಕೈಪಿಡಿ - ೧೯೭೮' ರಲ್ಲಿ ಅಳವಡಿಸುವ ಮುನ್ನವೇ ಕರ್ನಾಟಕ ಸರಕಾರದ ಬಂದಿಖಾನೆ ಇಲಾಖೆ, ತನ್ನ ರಾಜ್ಯದ ಬಂದಿಖಾನೆಗಳಲ್ಲಿ ವೃತ್ತಿ ಶಿಕ್ಷಣವನ್ನು - ವೃತ್ತಿ ತರಬೇತಿಯೊಂದಿಗೆ ಆರಂಭಿಸಿತ್ತು. ಪ್ರತೀ ಉದ್ಯಮಕ್ಕೂ ಶಿಕ್ಷಣ ಮತ್ತು ತರಬೇತಿ ನೀಡಲು ತರಬೇತು ಹೊಂದಿದ ತಜ್ಞ ಬೋಧಕರಿದ್ದರು. ಮೈಸೂರು ಮತ್ತು ಬೆಂಗಳೂರು ಕೇಂದ್ರ ಬಂದಿಖಾನೆಗಳಲ್ಲಿ ವೃತ್ತಿ ತರಬೇತಿ ಹಾಗೂ ವೃತ್ತಿಗಳು (ಉದ್ಯಮ) ೧೯೨೪ ರಲ್ಲೇ ಆರಂಭವಾಗಿದ್ದವು. ಆಗಲೇ ಕಂಬಳಿ - ಜಮಖಾನೆ ನೇಯ್ಗೆ, ಬಟ್ಟೆ ನೇಯ್ಗೆ, ಗುಡಾರಗಳ ತಯಾರಿ, ರಿಪೇರಿ, ಗೋಣಿ ಮತ್ತು ತೆಂಗಿನ ನಾರಿನ ಉದ್ಯಮ ಮರಗೆಲಸ, ಕಬ್ಬಿಣದ ಕೆಲಸ, ಕುಂಬಾರಿಕೆ, ಬುಟ್ಟಿ ಹೆಣಿಗೆ ಮುಂತಾದ ಗುಡಿ ಕೈಗಾರಿಕೆಗಳು ಆ ಬಂದಿಖಾನೆಗಳಲ್ಲಿದ್ದವು. ವೃತ್ತಿನಿಪುಣರು ಕೈದಿಗಳಿಗೆ ವೃತ್ತಿ ತರಬೇತಿ ನೀಡುತ್ತಿದ್ದರು.

ಕಾಲ ಬದಲಾಯಿತು. ಕೈಗಾರಿಕಾ ಕ್ಷೇತ್ರದಲ್ಲಿ ಹೊಸ ತಂತ್ರಜ್ಞಾನಗಳು ಆವಿಷ್ಕಾರಗೊಂಡವು. ಹೊಸ ಹೊಸ ಉದ್ಯಮಗಳು ಕಾಣಿಸಿಕೊಂಡವು. ರಾಜ್ಯ ಬಂದಿಖಾನೆ ಇಲಾಖೆಯು 'ಅಖಿಲಭಾರತ ಬಂದಿಖಾನೆ ಬಂದಿಖಾನೆ ಕೈಪಿಡಿ ಸಮಿತಿಯ' ಶಿಫಾರಸನ್ನು ಅಳವಡಿಸಿಕೊಂಡು ೧೯೭೨ ರ ಸುಮಾರಿಗೆ ತನ್ನ ಉದ್ಯಮಗಳನ್ನು ಯಾಂತ್ರೀಕೃತಗೊಳಿಸಿತು. ವಿದ್ಯುತ್‌ಚಾಲಿತ ನೇಯ್ಗೆಯಂತ್ರ, ಹೊಸ ಮುದ್ರಣಯಂತ್ರಗಳು ಬಂದಿಖಾನೆ ಪ್ರವೇಶಿಸಿದ್ದು ಆ ಕಾಲದಲ್ಲಿ. ಬದಲಾಗುತ್ತಿರುವ ಸಮಾಜಕ್ಕೆ ತಕ್ಕಂತೆ ಹೊಸ ಹೊಸ ಕಿರು ಉದ್ಯಮಗಳು ಹುಟ್ಟಿಕೊಂಡವು. ಅವೂ ಬಂದಿಖಾನೆಯನ್ನು ಪ್ರವೇಶಿಸಿದವು. ಇದಕ್ಕೆ ಸಂಬಂಧಿಸಿದಂತೆ ವೃತ್ತಿ ಶಿಕ್ಷಣ - ತರಬೇತಿ

ನೀಡಲು ಸಾಕಷ್ಟು ಪರಿಣಿತ ವೃತ್ತಿ ಬೋಧಕರು ನೇಮಕಗೊಂಡ ನಂತರ ಕೈದಿಗಳಿಗೆ ಹೊಸ ಬದುಕು ಬಂದಂತಾಯ್ತು. ಈ ವೃತ್ತಿಶಿಕ್ಷಣ - ತರಬೇತಿ, ಬಿಡುಗಡೆಯ ನಂತರದ ತಮ್ಮ ಮರುನೆಲೆಗೆ ಅತ್ಯವಶ್ಯಕ ಎಂದು ಮನಗಾಣುತ್ತಲೇ ಅದರಲ್ಲಿ ಪರಿಣಿತಿ ಸಾಧಿಸುವಷ್ಟು ಜ್ಞಾನವನ್ನು ಪಡೆದುಕೊಳ್ಳಲು ಎಲ್ಲ ಕೈದಿಗಳು ಮುಂದಾದರು. ಇದು ೧೯೭೨ರ ಸುಮಾರಿನ ಕತೆ - ಅಂದಿನ ಸ್ಥಿತಿ.

ಕೈದಿಗಳ ಮನಸುಧಾರಣೆ - ಪುನರ್ವಸತಿಯ ಬಗ್ಗೆಯೇ ತಲೆಕೆಡಿಸಿಕೊಳ್ಳುತ್ತಿದ್ದ ಕೇಂದ್ರ ಸರಕಾರಕ್ಕೆ ಇನ್ನೂ ರಾಜ್ಯದ ಬಂದಿಖಾನೆ ಆಡಳಿತ ನಿರ್ವಹಣೆ ಬಗ್ಗೆ ತೃಪ್ತಿಯಿಲ್ಲ. ಬಂದಿಖಾನೆ ಆಡಳಿತದಲ್ಲಿ ಸುಧಾರಣೆ ಸಾಧ್ಯವಾಗಬೇಕಾದರೆ, ಅದನ್ನು ಪಂಚವಾರ್ಷಿಕ ಯೋಜನೆಯಡಿ ತಂದು ಹಂತ ಹಂತವಾಗಿ ಯೋಜನೆಗಳನ್ನು ರೂಪಿಸಬೇಕೆಂದು ತೀರ್ಮಾನಿಸಿತು. ಏಳನೇ ಪಂಚವಾರ್ಷಿಕ ಯೋಜನೆಯಡಿ 'ಬಂದಿಖಾನೆ ಆಡಳಿತದ ಆಧುನೀಕರಣ' ಎಂಬ ಯೋಜನೆ ರೂಪಿಸಿ ಧನಸಹಾಯ ನೀಡತೊಡಗಿತು. ಆದರೆ ಆ ಧನ ಸಹಾಯದ ಹಿಂದೆ ಮಾರ್ಗದರ್ಶನಗಳ ರೂಪದಲ್ಲಿ ಷರತ್ತುಗಳ ಒಂದು ಪಟ್ಟಿಯಿತ್ತು. ಆ ಷರತ್ತುಗಳಲ್ಲಿ ಮುಖ್ಯವಾದ ಒಂದು ಷರತ್ತು : ಕೈದಿಗಳಿಗೆ ಉದ್ಯೋಗ ಅಭಿವೃದ್ಧಿ ಕಾರ್ಯಕ್ರಮಗಳನ್ನು (Work Programmes) ಹಮ್ಮಿಕೊಳ್ಳುವುದು, ವೃತ್ತಿ ಶಿಕ್ಷಣದ ಜತೆಗೆ ವೃತ್ತಿ ತರಬೇತಿ ನೀಡುವುದು ಹಾಗೂ ಉದ್ಯಮಗಳನ್ನು ಆಧುನೀಕರಣಗೊಳಿಸುವುದು. (ಅನುಬಂಧ ೪)

ಕೇಂದ್ರ ಸರಕಾರದ ಈ ಷರತ್ತು ಕೈದಿಗಳಿಗೊಂದು ವರದಾನವೆನಿಸಿತು. ಬಂದಿಖಾನೆ ಇಲಾಖೆ ಹಲವು ಉದ್ಯಮಗಳನ್ನು ಆಧುನೀಕರಣಗೊಳಿಸಿ, ಹೊಸ ಯಾಂತ್ರೀಕೃತ ಉದ್ಯಮಗಳ ಬಗ್ಗೆ ನುರಿತ ವೃತ್ತಿತಂತ್ರಜ್ಞರಿಂದ ತರಬೇತಿ ಕೊಡಿಸಿತು. ೧೯೯೯- ೨೦೦೦, ೨೦೦೦ - ೨೦೦೧ ರಲ್ಲಿ ಅನೇಕ ಉದ್ಯೋಗ ಅಭಿವೃದ್ಧಿ ಕಾರ್ಯಕ್ರಮಗಳನ್ನು ಸಂಯೋಜಿಸಿತು. ವೃತ್ತಿ ಶಿಕ್ಷಣವನ್ನು ಇನ್ನಷ್ಟು ಗುಣಾತ್ಮಕಗೊಳಿಸಲು ಹೊಸದಾಗಿ ವೃತ್ತಿ ಶಿಕ್ಷಣ ಬೋಧಕ ಹುದ್ದೆಗಳನ್ನು ಮಂಜೂರು ಮಾಡಿ ವೃತ್ತಿ ಶಿಕ್ಷಣ ಬೋಧಕರನ್ನು ಕೈಗಾರಿಕಾ ಇಲಾಖೆಯಿಂದ ಪ್ರತಿನಿಯೋಜನೆಯ ಮೇಲೆ ಖಾಯಂ ಆಗಿ ನೇಮಿಸಿಕೊಂಡಿತು. ರಾಜ್ಯ ಬಂದಿಖಾನೆ ಇಲಾಖೆಗೆ ಮಂಜೂರಾಗಿರುವ ವೃತ್ತಿಪರ ಬೋಧಕರ ಹುದ್ದೆಗಳು ಒಟ್ಟು ೪೪. ಇದರಲ್ಲಿ ಒಬ್ಬರು ಪ್ರಮುಖ ಬೋಧಕರು (Chief Instructor), ೧೫ ಗ್ರೇಡ್-೧ ಬೋಧಕರು, ೨೮ ಗ್ರೇಡ್-೨ ಬೋಧಕರು.

ಆದರೆ ಅಧ್ಯಯನದ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ರಾಜ್ಯದ ೬ ಕೇಂದ್ರ ಬಂದಿಖಾನೆಗಳ ವೃತ್ತಿ ಘಟಕಗಳಲ್ಲಿ ಸಾಕಷ್ಟು ವೃತ್ತಿಗಳಿಗೆ ವೃತ್ತಿ ಬೋಧಕರು ಇಲ್ಲದಿರುವುದು ಕಂಡುಬಂತು. ಹಲವು ವರ್ಷಗಳಿಂದ ಈ ಹುದ್ದೆಗಳು ಖಾಲಿ ಇದ್ದು, ಹಳೆಯ ತರಬೇತುಗೊಂಡ ಕೈದಿಗಳಿಂದ ಹೊಸ ಕೈದಿಗಳು ವೃತ್ತಿ ತರಬೇತಿ (ಟ್ರೈನಿಂಗ್) ಪಡೆಯಬೇಕಾಗಿದೆ.[೨೨]

ಸದ್ಯಕ್ಕೆ ರಾಜ್ಯದ ಆರು ಕೇಂದ್ರ ಬಂದಿಖಾನೆಗಳಲ್ಲಿರುವ ಒಟ್ಟು ವೃತ್ತಿ ಶಿಕ್ಷಣ ಬೋಧಕರು ೨೪ ಮಂದಿ. ಅದರಲ್ಲಿ ೧ ಪ್ರಮುಖ ಬೋಧಕರು, ೧೪ ಗ್ರೇಡ್-೧ ಬೋಧಕರು, ೭ ಗ್ರೇಡ್-೨ ಬೋಧಕರು. ಕೆಲವು ಬಂದಿಖಾನೆಗಳಲ್ಲಿ ೬ ಉದ್ಯಮ ಘಟಕಗಳಿದ್ದರೆ ಅಲ್ಲಿರುವ ಬೋಧಕರು ಕೇವಲ ೨ ಅಥವ ೩ ಮಂದಿ. ಉದಾ:

ಮೈಸೂರು, ಗುಲ್ಬರ್ಗ, ಬಳ್ಳಾರಿ ಬಂದಿಖಾನೆಗಳು. ಮೈಸೂರು ಕೇಂದ್ರ ಬಂದಿಖಾನೆಯಲ್ಲಿ ಇಬ್ಬರು ಗ್ರೇಡ್-೧ ಹಾಗೂ ೧ ಹುದ್ದೆ ಗ್ರೇಡ್-೨ ಬೋಧಕರು (೩ ಹುದ್ದೆ ಗ್ರೇಡ್-೨ ಖಾಲಿ ಇವೆ). ಗುಲಬರ್ಗಾ ಕೇಂದ್ರ ಬಂದಿಖಾನೆಯಲ್ಲಿ ೨ ಹುದ್ದೆ ಗ್ರೇಡ್-೨ ಹಾಗೂ ಗ್ರೇಡ್-೨ನ ಯಾವ ಬೋಧಕರೂ ಇಲ್ಲ (೩ ಹುದ್ದೆ ಗ್ರೇಡ್-೨ ಖಾಲಿ ಇವೆ). ಬಳ್ಳಾರಿ ಕೇಂದ್ರ ಬಂದಿಖಾನೆಯಲ್ಲಿ ಒಂದು ಹುದ್ದೆ ಗ್ರೇಡ್-೧ ಹಾಗೂ ಒಂದು ಹುದ್ದೆ ಗ್ರೇಡ್-೨ ಬೋಧಕರು (ಐದು ಹುದ್ದೆ ಗ್ರೇಡ್-೨ ಖಾಲಿ ಇವೆ).

ಅರ್ಹ ಬೋಧಕರಿಲ್ಲದೆ, ವೃತ್ತಿ ಶಿಕ್ಷಣ ಅಥವ ವೃತ್ತಿ ತರಬೇತಿಯಿಲ್ಲದೆ ಕೈದಿ ವೃತ್ತಿ ಕೌಶಲ್ಯವನ್ನು ಗಳಿಸಲಾರ. ಉದ್ಯಮಗಳಲ್ಲಿ ಹೊಸ ಹೊಸ ತಂತ್ರಜ್ಞಾನಗಳನ್ನು ಹುಟ್ಟುತ್ತಿರುವ ಈ ಸಂದರ್ಭದಲ್ಲಿ ಆಯಾ ಕ್ಷೇತ್ರಕ್ಕೆ ಸಂಬಂಧಿಸಿದ ಹೊಸ ಬೆಳವಣಿಗೆಗಳನ್ನು ಬೋಧಿಸಲು ಪ್ರತೀ ಉದ್ಯಮ ಘಟಕಗಳಿಗೂ ಬೋಧಕರು ಅತ್ಯವಶ್ಯವಾಗಿದ್ದಾರೆ (ಕೋಷ್ಟಕ ೭ ಗಮನಿಸಿ).

ಕೈದಿಗಳು ತಮ್ಮನ್ನು ಜೀವಂತ ಸುಡುತ್ತಿರುವ ಚಿಂತೆ, ನೋವು, ದುಃಖ, ದುಮ್ಮಾನ, ಸಿಡುಕು, ಅಸಹಾಯಕತೆಗಳನ್ನೆಲ್ಲ ಬದಿಗೊತ್ತಿ, ತಮಗೆ ಜ್ಞಾನಸಂವಹನಾ ಮಾಧ್ಯಮವಾಗಿ ಲಭ್ಯವಾಗಿರುವ ವೃತ್ತಿ ಶಿಕ್ಷಣ - ತರಬೇತಿಯನ್ನು ಪಡೆಯಲು ಅದೆಷ್ಟು ಕಾತರರಾಗಿದ್ದರೋ ಅಷ್ಟೇ ಪ್ರಮಾಣದಲ್ಲಿ ಬೋಧಕರಿಲ್ಲದ ಕೊರಗೂ ಅವರನ್ನು ಅಷ್ಟೇ ಬಾಧಿಸಿದೆ. ಖಾಲಿ ಹುದ್ದೆಗಳನ್ನು ತುಂಬಲು ಇಲಾಖೆಗೆ ಹಲವಾರು ಆಡಳಿತಾತ್ಮಕ ಅಡ್ಡಿಗಳಿದ್ದರೂ ಕೈದಿಗಳ ಹಿತದೃಷ್ಟಿಯಿಂದ ಅದನ್ನು ಪರಿಹರಿಸಿಕೊಳ್ಳುವ ಪ್ರಯತ್ನ ಚಾಲನೆಯಲ್ಲಿದೆ.


ಕಾರಾಗೃಹ: ಶಿಕ್ಷೆಯ

## ಕೋಷ್ಟಕ ೭

# ಕೇಂದ್ರ ಮತ್ತು ಬಯಲು ಬಂದಿಖಾನೆಗಳಲ್ಲಿನ ವೃತ್ತಿ ಶಿಕ್ಷಣ, ತರಬೇತಿ, ಉದ್ಯಮಗಳ ವಿವರ

| ಬಯಲುಬಂದಿಖಾನೆ ಮತ್ತು ಕೇಂದ್ರ ಬಂದಿಖಾನೆಗಳು | ಬಂದಿಖಾನೆ ಇಲಾಖೆಯಿಂದ ವೃತ್ತಿ ಶಿಕ್ಷಣ ತರಬೇತಿ ಮತ್ತು ಉದ್ಯಮಗಳು | | ಸಂಘ ಸ್ವಯಂಸೇವಾ ಸಂಸ್ಥೆಗಳಿಂದ ಕೈದಿಗಳಿಗೆ ವೃತ್ತಿ ಶಿಕ್ಷಣ ತರಬೇತಿ ಮತ್ತು ಉದ್ಯಮಗಳು | | ಬಂದಿಖಾನೆ ಇಲಾಖೆ ವತಿಯಿಂದ ವೃತ್ತಿ ಪರಶಿಕ್ಷಣದ ಬೋಧಕರು ಮಂಜೂರಾದ ಹುದ್ದೆಗಳು | | |
|---|---|---|---|---|---|---|---|
| | ಪುರುಷ ಕೈದಿಗಳಿಗೆ | ಮಹಿಳಾ ಕೈದಿಗಳಿಗೆ | ಪುರುಷ ಕೈದಿಗಳು | ಮಹಿಳಾ ಕೈದಿಗಳು | ಪ್ರಮುಖ ಬೋಧಕ | ಪ್ರಥಮ ದರ್ಜೆ ಬೋಧಕರು | ದ್ವಿತೀಯ ದರ್ಜೆ ಬೋಧಕರು |
| ಬಳ್ಳಾರಿ | ಟೈಲರಿಂಗ್, ಕಾರ್ಪೆಂಟರಿ, ಸೋಪ್ ಮತ್ತು ಫಿನಾಯಿಲ್ ತಯಾರಿಕೆ, ಯಂತ್ರ ನೇಯ್ಗೆ-ಕೈಮಗ್ಗ, ಜಮಖಾನೆ, ನೆಲಹಾಸು ತಯಾರಿ | - | - | ಟೈಲರಿಂಗ್, ಎಂಬ್ರಾಡರಿ ಕಸೂತಿ, ಫ್ಯಾಶನ್ ಡಿಸೈನಿಂಗ್ ಸ್ವಯಂ ಸೇವಕ ಸಂಸ್ಥೆಗಳಿಂದ ತರಬೇತಿ | - | ೧ ಟೈಲರಿಂಗ್ (ಮಂಜೂರಾದ ಹುದ್ದೆ ೧) | ೧ ಕಾರ್ಪೆಂಟರಿ ಬೋಧಕ (ಮಂಜೂರಾದ ಹುದ್ದೆ ೬ ಖಾಲಿಯಿರುವ ಹುದ್ದೆ ೩) |
| ಗುಲಬರ್ಗಾ | ಯಂತ್ರ ನೇಯ್ಗೆ-ಕೈಮಗ್ಗ, ಶಾಮಿಯಾನ-ಗುಡಾರ ತಯಾರಿಕೆ, ಜಮಖಾನೆ-ನೆಲಹಾಸು ತಯಾರಿಕೆ, ಕಮ್ಮಾರಿಕೆ, ಲಾಂಡ್ರಿ, ಬಣ್ಣ ಹಾಕುವುದು | ಟೈಲರಿಂಗ್ | - | ಟೈಲರಿಂಗ್, ಫ್ಯಾಶನ್ ಡಿಸೈನಿಂಗ್ (ಸ್ವಯಂಸೇವಾ ಸಂಸ್ಥೆಗಳಿಂದ ತರಬೇತಿ) | - | ೧ ಕಾರ್ಪೆಂಟರಿ ಬೋಧಕ ೧ ನೇಯ್ಗೆ ಬೋಧಕ (ಮಂಜೂರಾದ ಹುದ್ದೆ ೨) | ಯಾರೂ ಇಲ್ಲ (ಮಂಜೂರಾದ ಹುದ್ದೆ ೩ ಖಾಲಿಯಿರುವ ಹುದ್ದೆ ೩) |
| ವಿಜಾಪುರ | ಯಂತ್ರ ನೇಯ್ಗೆ, ಕೈಮಗ್ಗ, ಕಾರ್ಪೆಂಟರಿ | ಟೈಲರಿಂಗ್ | - | ಟೈಲರಿಂಗ್, ಫ್ಯಾಶನ್ ಡಿಸೈನಿಂಗ್ (ಸ್ವಯಂಸೇವಾ ಸಂಸ್ಥೆಗಳಿಂದ ತರಬೇತಿ) | - | ೧ ಕಾರ್ಪೆಂಟರಿ ಬೋಧಕ ೧ ನೇಯ್ಗೆ ಬೋಧಕ (ಮಂಜೂರಾದ ಹುದ್ದೆ ೨) | ಯಾರೂ ಇಲ್ಲ (ಮಂಜೂರಾದ ಹುದ್ದೆ ೨ ಖಾಲಿಯಿರುವ ಹುದ್ದೆ ೨) |
| ಮೈಸೂರು | ಟೈಲರಿಂಗ್, ಕಾರ್ಪೆಂಟರಿ, ಸೋಪ್ ಮತ್ತು ಫಿನಾಯಿಲ್ ತಯಾರಿಕೆ, ನೇಯ್ಗೆ-ಯಂತ್ರ ಮತ್ತು ಕೈಮಗ್ಗ, ಜಮಖಾನೆ-ಕಂಬಳಿ, ನೆಲಹಾಸು ತಯಾರಿ, ಕಮ್ಮಾರಿಕೆ | - | ಜನಶಿಕ್ಷಣ ಸಂಸ್ಥಾನ (J.S.S) ಅವರಿಂದ ವೈರಿಂಗ್ ಮತ್ತು ಸ್ಕ್ರೀನ್ ಪ್ರಿಂಟಿಂಗ್ ಬಗ್ಗೆ ೬ ತಿಂಗಳ ಡಿಪ್ಲೊಮಾ ತರಬೇತಿ ಮತ್ತು ಗೃಹಪಯೋಗಿ ವಸ್ತುಗಳ ರಿಪೇರಿ ಮತ್ತು ಫ್ಯಾನ್ ರಿಪೇರಿ ತರಬೇತಿ | ಟೈಲರಿಂಗ್, ಎಂಬ್ರಾಡರಿ ಹೆಣಿಗೆ ಕಸೂತಿ, ಮೆದು ಬೊಂಬೆ ತಯಾರಿ (Soft toys) ತರಬೇತಿ. | - | ೧ ಕಾರ್ಪೆಂಟರಿ ಬೋಧಕ ೧ ನೇಯ್ಗೆ ಬೋಧಕ (ಮಂಜೂರಾದ ಹುದ್ದೆ ೨) | ೧ ಟೈಲರಿಂಗ್ ಬೋಧಕ (ಮಂಜೂರಾದ ಹುದ್ದೆ ೪ ಖಾಲಿಯಿರುವ ಹುದ್ದೆ ೩) |

| | | | | | | |
|---|---|---|---|---|---|---|
| ಬೆಳಗಾಂ | ಟೈಲರಿಂಗ್, ಕಾರ್ಪೆಂಟರಿ, ಸೋಪ್ ಮತ್ತು ಫಿನಾಯಿಲ್ ತಯಾರಿಕೆ, ನೇಯ್ಗೆ-ಯಂತ್ರ ಮತ್ತು ಕೈಮಗ್ಗ, ಜಮಖಾನೆ-ಕಂಬಳಿ ತಯಾರಿಕೆ, ಕಮ್ಮಾರಿಕೆ, ಚಮ್ಮಾರಿಕೆ ಬಣ್ಣ ಹಾಕುವುದು, ಪಾಲಿಷ್ ತಯಾರಿಕೆ | - | - | - | ೧ ಪಾದರಕ್ಷೆ ತಯಾರಿಕೆ ಬೋಧಕರು<br>೧ ಕಾರ್ಪೆಂಟರಿ ಬೋಧಕ<br>೧ ವಿದ್ಯುತ್ ಕೆಲಸ ಬೋಧಕ<br>೧ ಹೊಲಿಗೆ ಬೋಧಕ<br>(ಖಾಲಿಯಿರುವ ಹುದ್ದೆ ೧) | ೧ ನೇಯ್ಗೆ ಬೋಧಕ<br>ಮಂಜೂರಾದ ಹುದ್ದೆ ೨<br>(ಖಾಲಿಯಿರುವ ಹುದ್ದೆ ೧<br>ಮಂಜೂರಾದ ಹುದ್ದೆ ೪) |
| ಬೆಂಗಳೂರು | ಟೈಲರಿಂಗ್, ಕಾರ್ಪೆಂಟರಿ, ಸೋಪ್ ಮತ್ತು ಫಿನಾಯಿಲ್ ತಯಾರಿಕೆ, ನೇಯ್ಗೆ-ಯಂತ್ರ ಮತ್ತು ಕೈಮಗ್ಗ, ಬೆತ್ತದ ಪೀಠೋಪಕರಣ, ಕಮ್ಮಾರಿಕೆ, ಮುದ್ರಣ ತಂತ್ರಗಾರಿಕೆ, ಬ್ಲೀಚಿಂಗ್ ಮತ್ತು ಬಣ್ಣ ಹಾಕುವುದು, ಲಾಂಡ್ರಿ | - | ಬಿಪಿಎಲ್ ಸಂಸ್ಥೆಯಿಂದ ಎಲೆಕ್ಟ್ರಿಕ್ ವೈರಿಂಗ್ ಬಗ್ಗೆ ತರಬೇತಿ. ಜನಶಿಕ್ಷಣ ಸಂಸ್ಥಾನದ ಶ್ರಮಿಕ ವಿದ್ಯಾಪೀಠದವರಿಂದ ಸ್ಕ್ರೀನ್ ಪ್ರಿಂಟಿಂಗ್ ಬಗ್ಗೆ ತರಬೇತಿ, ಮುಂಬೈ ಸ್ಪಿರ್‌ಲೈಟ್ ಫೌಂಡೇಶನ್‌ನಿಂದ ೬ ತಿಂಗಳ ಕಂಪ್ಯೂಟರ್ ಡಿಪ್ಲೊಮಾ ತರಬೇತಿ | ಟೈಲರಿಂಗ್, ಎಂಬ್ರಾಯ್ಡರಿ, ಕಸೂತಿ ಹೆಣಿಗೆ ಮದು ಬೊಂಬೆ ತಯಾರಿ ತರಬೇತಿ. | - ೧ ಕಾರ್ಪೆಂಟರಿ ಬೋಧಕ<br>೧ ನೇಯ್ಗೆ ಬೋಧಕ<br>೨ ಟೈಲರಿಂಗ್ ಬೋಧಕ<br>(ಮಂಜೂರಾದ ಹುದ್ದೆ ೪) | ೧ ಕಮ್ಮಾರಿಕೆ ಬೋಧಕ<br>೧ ಕಾರ್ಪೆಂಟರಿ ಬೋಧಕ<br>(ಮಂಜೂರಾದ ಹುದ್ದೆ ೫<br>ಖಾಲಿಯಿರುವ ಹುದ್ದೆ ೩) |
| ಬಯಲು ಬಂದಿಖಾನೆ | ಕೃಷಿ ಸಂಬಂಧಿ ವೃತ್ತಿ ಶಿಕ್ಷಣ ಮಣ್ಣಿನ ಸಾಲ ಸಂರಕ್ಷಣೆ, ಹನಿನೀರಾವರಿ ಪದ್ಧತಿ ಅಳವಡಿಕೆ, ಮೀನು ಸಾಕಾಣಿಕೆ, ಜೇನು ಸಾಕಾಣಿಕೆ, ಕುರಿ ಸಾಕಾಣಿಕೆ, ಅಣಬೆ ಬೆಳೆ ಇತ್ಯಾದಿ | - | - | - | - - | - |

ರಾಜ್ಯದ ೬ ಕೇಂದ್ರ ಬಂದಿಖಾನೆಗಳಲ್ಲಿ ಈ ಕೆಳಗಿನ ವೃತ್ತಿ ಶಿಕ್ಷಣ - ತರಬೇತಿ ಹಾಗೂ ಉದ್ಯಮಗಳು ಚಾಲ್ತಿಯಲ್ಲಿವೆ.

೧. ವಿದ್ಯುತ್ ಚಾಲಿತ ನೇಯ್ಗೆ ಹಾಗೂ ಕೈಮಗ್ಗದ ನೇಯ್ಗೆ
(Powerlooms and Handlooms)

೨. ದರ್ಜಿ ಕೆಲಸ (Tailoring)

೩. ಮರಗೆಲಸ (ಬಡಗಿ - Carpentary)

೪. ಜಮಖಾನೆ - ನೆಲಹಾಸು ತಯಾರಿಕೆ (Carpet Making)

೫. ಬೆತ್ತದ ಪೀಠೋಪಕರಣ ತಯಾರಿಕೆ (Cane works)

೬. ಮುದ್ರಣ (Printing technology) ಮತ್ತು ಬೈಂಡಿಂಗ್

೭. ಚಮ್ಮಾರಿಕೆ (ಪಾದರಕ್ಷೆ ತಯಾರಿಕೆ) (Foot wear Manufacture)

೮. ಡೇರೆ, ಶಾಮಿಯಾನ ತಯಾರಿಕೆ (Tent making)

೯. ಸಾಬೂನು ಮತ್ತು ಫಿನೈಲ್ ತಯಾರಿಕೆ (Soap and Phengle Manufacture)

೧೦. ಬಟ್ಟೆ ಸ್ವಚ್ಛ ಹಾಗೂ ರಂಗು ಹಾಕುವುದು (Laundry and dyeing)

೧೧. ಕಮ್ಮಾರಿಕೆ ಮತ್ತು ಸ್ಟೀಲ್ ಫರ್ನಿಚರ್‌ಗಳ ತಯಾರಿ
(Blacksmithy and Steel furniture making)

೧೨. ಎಲೆಕ್ಟ್ರಿಕ್ ವೈರಿಂಗ್ (ವೃತ್ತಿ ಶಿಕ್ಷಣ - ತರಬೇತಿ ಮಾತ್ರ ಲಭ್ಯವಿದೆ).

ಈ ಅಧ್ಯಯನದಲ್ಲಿ, ೧೯೭೪ - ೭೫ ರಿಂದ ೨೦೦೧ - ೨೦೦೨ ರ ವರೆಗಿನ (೨೭ ವರ್ಷಗಳ) ಇಲಾಖಾ ವಾರ್ಷಿಕ ವರದಿಗಳನ್ನು ಪರಿಶೀಲಿಸಿದಾಗ, ಮೇಲೆ ಸೂಚಿಸಿರುವ ಎಲ್ಲ ತರಬೇತಿ - ಉದ್ಯಮಗಳು ೨೭ ವರ್ಷಗಳಿಗಿಂತಲೂ ಹಿಂದೆ ರೂಪಿಸಲ್ಪಟ್ಟವು ವಿನಾ ಯಾವುದೇ ಹೊಸ ಉದ್ಯಮ ತರಬೇತಿಗಳು ಈ ನಡುವೆ ಆರಂಭಗೊಂಡಿಲ್ಲ ಎಂದು ತಿಳಿದುಬರುತ್ತದೆ. ಆದರೆ ಈ ಎಲ್ಲ ಉದ್ಯಮಗಳು ಕೈಗಾರಿಕಾ ಕ್ಷೇತ್ರದಲ್ಲಿ ಹೊಸ ಆವಿಷ್ಕಾರ ನಡೆದಂತೆ ಆಧುನೀಕೃತಗೊಂಡಿವೆ. ಆಧುನಿಕ ತಂತ್ರಜ್ಞಾನಗಳ ಬಗ್ಗೆ ಕೈದಿಗಳಿಗೆ ವೃತ್ತಿ ಶಿಕ್ಷಣ ಬೋಧಕರು ಮಾಹಿತಿ ನೀಡುತ್ತಿದ್ದಾರೆ. ಈ ಕೈಗಾರಿಕಾ ಯುಗದಲ್ಲಿ ಹೊಸ ಹೊಸ ಉದ್ಯಮಗಳು ಕಣ್ತೆರೆಯುತ್ತಿರುವಾಗ, ಆಧುನಿಕ ಸಮಾಜ, ಅದರ ಮನಸ್ಸು ಹಾಗೂ ಮಾರುಕಟ್ಟೆಯ ಬೇಡಿಕೆಗಳನ್ನು ಗಮನದಲ್ಲಿಟ್ಟುಕೊಂಡು ಕೈದಿಗಳಿಗೆ ಹೊಸ ಉದ್ಯಮ ಹಾಗು ಆ ಉದ್ಯಮ ಸಂಬಂಧಿ ಶಿಕ್ಷಣ - ತರಬೇತಿಗಳನ್ನು ನೀಡುವ ಅವಶ್ಯಕತೆ ಇದೆ.

## ಕೋಷ್ಟಕ ೮

### ವಿವಿಧ ಬಂದಿಖಾನೆಗಳ ಕೈಗಾರಿಕೆಗಳ ವಾರ್ಷಿಕ ಉತ್ಪನ್ನ

(೧೯೯೭-೯೮ ರಿಂದ ೨೦೦೧-೦೨ ರವರೆಗೆ : ೫ ವರ್ಷಗಳು)

| ವರ್ಷಗಳು | ಲಕ್ಷರೂಪಾಯಿಗಳಲ್ಲಿ |
|---|---|
| ೧೯೯೭ - ೧೯೯೮ | ೪೮.೫೮ |
| ೧೯೯೮ - ೧೯೯೯ | ೩೧.೬೧ |
| ೧೯೯೯ - ೨೦೦೦ | ೨೮.೭೩ |
| ೨೦೦೦ - ೨೦೦೧ | ೩೮.೪೭ |
| ೨೦೦೧ - ೨೦೦೨ (ಡಿಸೆಂಬರ್ ೨೦೦೧ ರವರೆಗೆ) | ೫೨.೫೩ |

ಕೇಂದ್ರ ಗೃಹಸಚಿವಾಲಯದ 'ನ್ಯಾಷನಲ್ ಕ್ರೈಮ್ ರೆಕಾರ್ಡ್ಸ್ ಬ್ಯೂರೊ'ವಿನ ಬಂದಿಖಾನೆಗಳ ಅಂಕಿ ಅಂಶ - ೧೯೯೬ರ ಅನ್ವಯ, ದೇಶದಲ್ಲಿರುವ ಬಂದಿಖಾನೆಗಳಲ್ಲಿ ಇಪ್ಪತ್ತಕ್ಕೂ ಹೆಚ್ಚಿನ ಉದ್ಯಮಗಳಿದ್ದು, ಅವುಗಳಲ್ಲಿ ಮಧ್ಯಪ್ರದೇಶ ರಾಜ್ಯ ಮೊದಲಸ್ಥಾನದಲ್ಲಿದ್ದರೆ ಕರ್ನಾಟಕ ರಾಜ್ಯ ಮೂರನೇ ಸ್ಥಾನದಲ್ಲಿದೆ (೩೦ ರಾಜ್ಯಗಳಲ್ಲಿ).

ಬಂದಿಖಾನೆ ಇಲಾಖೆ ಕೈದಿಗಳಿಗಾಗಿ ಹೊಸ ಉದ್ಯಮದ ಹುಡುಕಾಟದಲ್ಲಿರುವಾಗ ಮೈಸೂರಿನ ಜನಶಿಕ್ಷಣ ಸಂಸ್ಥಾನ (J S S) ಸಂಸ್ಥೆ ಪುರುಷ ಕೈದಿಗಳಿಗಾಗಿ ಮೈಸೂರು ಕೇಂದ್ರ ಬಂದಿಖಾನೆಯಲ್ಲಿ, 'Wiring' ಮತ್ತು 'Screen Printing' ಬಗ್ಗೆ ಆರು ತಿಂಗಳ ಡಿಪ್ಲೊಮಾ ತರಗತಿಗಳನ್ನು ಆರಂಭಿಸಿ, ಅದರ ಜತೆಗೆ ಗೃಹೋಪಯೋಗಿ ವಸ್ತುಗಳ ರಿಪೇರಿ ಮತ್ತು ವಿಶೇಷವಾಗಿ ಟಿ.ವಿ., ಫ್ಯಾನ್ ರಿಪೇರಿ ಬಗ್ಗೆ ಸಣ್ಣ ಅವಧಿಯ ತರಬೇತಿ ಕಮ್ಮಟಗಳನ್ನು ನಡೆಸಿತ್ತು. ಇದರ ಸೌಲಭ್ಯವನ್ನು ಬಹಳಷ್ಟು ಕೈದಿಗಳು ಪಡೆದಿದ್ದಾರೆ.

ಬೆಂಗಳೂರು ಬಂದಿಖಾನೆಯಲ್ಲಿ ಬಿ.ಪಿ.ಎಲ್. ಸಂಸ್ಥೆ 'Eletric Wiring' ಬಗ್ಗೆ ಮತ್ತು ಸಂಯುಕ್ತ ವಿದ್ಯಾಪೀಠ 'Screen Printing' ಬಗ್ಗೆ ತರಬೇತಿ ಕಾರ್ಯಕ್ರಮಗಳನ್ನು ನಿಯಮಿತವಾಗಿ ಸಂಘಟಿಸಿದ್ದವು. ಗುಲ್ಬರ್ಗ ಕೇಂದ್ರ ಬಂದಿಖಾನೆಯಲ್ಲೂ ಜಿಲ್ಲಾ ಕೈಗಾರಿಕಾ ಕೇಂದ್ರ ಮತ್ತು ಕಿಡ್ಸೆರ್ಡ್ ಸಂಸ್ಥೆ 'ಟಿವಿ ಮತ್ತು ರೇಡಿಯೋ ರಿಪೇರಿ' (೨೩-೯-೧೯೯೯) ತರಬೇತಿ ಕಾರ್ಯವನ್ನು ನಿಯಮಿತವಾಗಿ ಯೋಜಿಸಿತ್ತು. ಇಂತಾ ತರಬೇತಿ ಕಾರ್ಯಕ್ರಮಗಳು ಬಂಧಿಗಳಿಗೆ ಮರುನೆಲೆಯನ್ನು ಕಲ್ಪಿಸಿಕೊಡುವಲ್ಲಿ ಬಹಳ ಸಹಕಾರಿಯಾಗಬಲ್ಲವು ಎಂದು ಈ ತರಬೇತಿ ಪಡೆದ ನಂತರ ಬಂದಿಖಾನೆಯಿಂದ ಬಿಡುಗಡೆಗೊಂಡು ಇದೀಗ ಅದೇ ಕೆಲಸವನ್ನು ಮರುನೆಲೆಗಾಗಿ ಬಳಸಿಕೊಂಡಿರುವ ಇಬ್ಬರು ಕೈದಿಗಳು ತಮ್ಮನ್ನೇ ಉದಾಹರಿಸಿಕೊಂಡು ಹೇಳುತ್ತಿದ್ದಾರೆ (ಕ್ಷೇತ್ರಕಾರ್ಯದಲ್ಲಿ ಇವರಿಬ್ಬರನ್ನು ಭೇಟಿಮಾಡಲಾಯಿತು).

ಕೇಂದ್ರದ ಗೃಹ ಸಚಿವಾಲಯದಿಂದ ಪಂಚವಾರ್ಷಿಕ ಯೋಜನೆಯಡಿ ಧನಸಹಾಯ ತಡೆಯುವಾಗ ರಾಜ್ಯ ಬಂದಿಖಾನೆ ಇಲಾಖೆ ಒಪ್ಪಿರುವ ಷರತ್ತಿನಂತೆ, ಇಲಾಖೆಯು ಕೈದಿಗಳಿಗಾಗಿ ಹಲವು ಉದ್ಯಮ ಅಭಿವೃದ್ಧಿ ಕಾರ್ಯಕ್ರಮ (Work Programmes) ಗಳನ್ನು ೨೦೦೦ - ೨೦೦೧ ರ ಸಾಲಿನಿಂದ ಹಮ್ಮಿಕೊಂಡಿದೆ. ಅವುಗಳಲ್ಲಿ

ಮುಖ್ಯವಾದವು ದ್ವಿಚಕ್ರ ವಾಹನ ದುರಸ್ತಿ, ಪಂಪಸೆಟ್ಟುಗಳ ದುರಸ್ತಿ, ರೇಡಿಯೋ - ದೂರದರ್ಶನಗಳ ದುರಸ್ತಿ, ಪೊಟೋಗ್ರಫಿ, ವಿಡಿಯೋಗ್ರಫಿ, ಫೋಟೋ ಲ್ಯಾಮಿನೇಷನ್, ವಾಚುಗಳ ದುರಸ್ತಿ, ಗೃಹೋಪಯೋಗಿ ವಿದ್ಯುತ್ ಉಪಕರಣಗಳ ದುರಸ್ತಿ, ಪುಸ್ತಕ ಬೈಂಡಿಂಗ್, ಕಂಪ್ಯೂಟರ್ ರಿಪೇರಿ ಮತ್ತು ಪ್ರಕಟಣೆ. ಕೃಷಿಯನ್ನೂ ಉದ್ಯಮವನ್ನಾಗಿ ಪರಿಗಣಿಸಿರುವುದರಿಂದ ಅದಕ್ಕೆ ಸಂಬಂಧಿಸಿದ ಹಲವು ಕೆಲಸಗಳು. ಉದಾ : ಹನಿ ನೀರಾವರಿ ಸೌಲಭ್ಯ ಅಳವಡಿಕೆ, ಹಲವು ಕೃಷಿ ಯಂತ್ರಗಳ ಬಳಕೆ ಇತ್ಯಾದಿ, ಹೈನುಗಾರಿಕೆ, ಕುರಿ ಸಾಕಾಣಿಕೆ, ಜೇನು ಸಾಕಾಣಿಕೆ, ಕೋಳಿ ಸಾಕಾಣಿಕೆ, ತೋಟಗಾರಿಕೆ, ರೇಷ್ಮೆಹುಳು ಸಾಕಾಣಿಕೆ, ಹಂದಿ ಸಾಕಾಣಿಕೆ, ಮೀನು ಸಾಕಾಣಿಕೆ, ಅಣಬೆ ಬೆಳೆ ಇತ್ಯಾದಿಗಳನ್ನು ಉದ್ಯಮ ಕಾರ್ಯಕ್ರಮಗಳಾಗಿ ಹಮ್ಮಿಕೊಂಡು ಉದ್ಯೋಗ ಕಾರ್ಯಕ್ರಮಗಳನ್ನು ಆರಂಭಿಸಲಾಗಿದೆ.

ಧರ್ಮಸ್ಥಳದ ಶ್ರೀ ಮಂಜುನಾಥೇಶ್ವರ ಎಜ್ಯುಕೇಷನ್ ಟ್ರಸ್ಟ್ ಇವರ ಮುಂದಾಳತ್ವದಲ್ಲಿ ಕೆನರಾ ಬ್ಯಾಂಕ್, ಸಿಂಡಿಕೇಟ್ ಬ್ಯಾಂಕ್ ಇವರ ಸಹಯೋಗದೊಂದಿಗೆ ನಡೆಯುತ್ತಿರುವ ರುಡ್‌ಸೆಟಿ ಸಂಸ್ಥೆ (RUDSETI- Rural urban Development and self employment and training Institute) ಬೆಂಗಳೂರು ಮತ್ತು ಮೈಸೂರು ಬಂದಿಖಾನೆಯಲ್ಲಿ ಹೊಸ ಸಹಸ್ರಮಾನದ ಆದಿಯಲ್ಲಿ ಅಭಿಶಿಕ್ಷಣ ಕಾರ್ಯಕ್ರಮವೊಂದನ್ನು ಏರ್ಪಡಿಸಿ ಕೈದಿಗಳಿಗಾಗಿ ಹಲವು ಹೊಸ ಉದ್ಯಮಗಳ ಬಗ್ಗೆ ಮಾಹಿತಿ ನೀಡಿ, ಆ ಉದ್ಯಮ ಆರಂಭಿಕೆಗೆ ಸಿಗಲಿರುವ ಆರ್ಥಿಕ ಸಹಾಯದ ಹಾಗೂ ಸ್ವಉದ್ಯೋಗ ಮಹತ್ವದ ಬಗ್ಗೆ ಮಾಹಿತಿ ನೀಡಿತು. ಅಲ್ಲದೆ ಪ್ರಸ್ತುತ ಸಮಾಜದಲ್ಲಿ ಯಾವ ಉದ್ಯೋಗ ಎಷ್ಟು ಲಾಭದಾಯಕವಾಗಬಲ್ಲದು - ಕೈದಿ ಮರಳಿ ಸಮಾಜಕ್ಕೆ ಬರುವಾಗ, ಆತನ ಪುನರ್ವಸತಿಗೆ ಈ ಸಂಸ್ಥೆ ಯಾವ ರೀತಿ ನೆರವಾಗಬಲ್ಲದು - ಕೈದಿ ಬಂದಿಖಾನೆಯೊಳಗೆ ವೃತ್ತಿ ತರಬೇತಿಯನ್ನು ಪಡೆದರೆ, ಬಿಡುಗಡೆ ನಂತರ ಆ ಸಂಸ್ಥೆ ಹೇಗೆ ಸ್ಪಂದಿಸಬಲ್ಲದು - ಎಂದು ಕೈದಿಗಳಿಗೆ 'ಆರ್ಥಿಕ ಸ್ವಾವಲಂಬನೆ' ಬಗ್ಗೆ ವಿಶ್ವಾಸ ಮೂಡಿಸುವಂತೆ ಕಾರ್ಯಾಗಾರವನ್ನು ನಡೆಸಿಕೊಟ್ಟಿತು. ಆದರೆ ಇದುವರೆಗೆ ಇಲ್ಲಿ ಚರ್ಚಿತವಾದ ಎಲ್ಲ ವೃತ್ತಿಶಿಕ್ಷಣ, ವೃತ್ತಿ ತರಬೇತಿ, ಉದ್ಯಮಗಳು ಹಾಗೂ ಉದ್ಯೋಗ ಕಾರ್ಯಕ್ರಮಗಳು ಪುರುಷ ಕೈದಿಗಳಿಗೆ ಮಾತ್ರ ಮೀಸಲಾಗಿಟ್ಟವು. ಪ್ರತೀ ಬಂದಿಖಾನೆಯೊಳಗೆ ಪುರುಷ ಕೈದಿಗಳಿಗೆ ಜ್ಞಾನಾರ್ಜನೆಯ ಜತೆಗೆ (ವೃತ್ತಿ ಶಿಕ್ಷಣ - ತರಬೇತಿ) ದಿನನಿತ್ಯವೂ ಉದ್ಯಮಘಟಕದಲ್ಲಿ ಖಾಯಂ ದುಡಿಮೆ ಇರುವುದರಿಂದ ಮಜೂರಿಯ ಸೌಲಭ್ಯವೂ ಇದೆ. ಸರ್ಕಾರದ ಆದೇಶ: ಹೆಚ್‌ಡಿ:೩೭:ಪಿಆರ್‌ಎ:೯೮, ದಿನಾಂಕ ೨೨-೧-೯೯ ರಂತೆ ಕೈದಿಗಳಿಗೆ ದಿನವೊಂದಕ್ಕೆ ಈ ರೀತಿಯಲ್ಲಿ ಮಜೂರಿಯ ಸೌಲಭ್ಯವಿದೆ.

೧. ತರಬೇತಿ (ಟ್ರೈನಿ) ಕೆಲಸಗಾರ ಕೈದಿಗೆ ೩೫ ರೂ.

೨. ಕುಶಲ (ಸ್ಕಿಲ್ಡ್) ಕೆಲಸಗಾರ ಕೈದಿಗೆ ೪೦ ರೂ. ಮತ್ತು

೩. ಹೆಚ್ಚಿನ ಕುಶಲ (ಹೈಲೀ ಸ್ಕಿಲ್ಡ್) ಕೆಲಸಗಾರ ಕೈದಿಗೆ ೪೫ ರೂ. (ಇದರಲ್ಲಿ ದಿನನಿತ್ಯದ ಆಹಾರ ಮತ್ತು ಬಟ್ಟೆಯ ವೆಚ್ಚಕ್ಕಾಗಿ ರೂ.೨೫ ನ್ನೂ ಕಡಿತಗೊಳಿಸಲಾಗುತ್ತದೆ).

ಕೋಷ್ಟಕ ೯

## ರಾಜ್ಯದ ಕೈದಿಗಳು ಗಳಿಸಿರುವ ಮಜೂರಿಯ ವಿವರ

(೧೯೯೭-೯೮ ರಿಂದ ೨೦೦೧-೦೨ ರವರೆಗೆ : ೫ ವರ್ಷಗಳು)

| ವರ್ಷಗಳು | ಲಕ್ಷರೂಪಾಯಿಗಳಲ್ಲಿ |
|---|---|
| ೧೯೯೭ - ೧೯೯೮ | ೯.೮೨ |
| ೧೯೯೮ - ೧೯೯೯ | ೮.೫೬ |
| ೧೯೯೯ - ೨೦೦೦ | ೧೦.೫೧ |
| ೨೦೦೦ - ೨೦೦೧ | ೧೯.೬೫ |
| ೨೦೦೧ - ೨೦೦೨ (ಡಿಸೆಂಬರ್ ೨೦೦೧ ರವರೆಗೆ) | ೧೯.೦೭ |

ಮಹಿಳಾ ಕೈದಿಗಳಿಗೂ ಹೀಗೆಯೆ ದಿನನಿತ್ಯ ಕೈತುಂಬ ಅರ್ಥಪೂರ್ಣವಾದ, ಬಿಡುಗಡೆಯ ನಂತರ ಮರುನೆಲೆ ಒದಗಿಸಿಕೊಡುವ, ದುಡಿಮೆ ಇದ್ದಲ್ಲಿ ಅವರನ್ನು ನಿರಂತರ ಕಾಡುವ ಚಿಂತೆ, ಕೆಟ್ಟ ಆಲೋಚನೆಗಳೆಲ್ಲವೂ ದುಡಿಮೆಯ ಪಾಲಾಗಿ ನೆಮ್ಮದಿಯ ಬದುಕು ಅವರದಾಗಬಹುದು. ಇತ್ತೀಚೆಗೆ ಮಹಿಳಾ ಕೈದಿಗಳಿಗೂ ವೃತ್ತಿ ಶಿಕ್ಷಣ - ತರಬೇತಿ ನೀಡುವ ಯೋಜನೆಯೊಂದು ಆರಂಭವಾಗಿದೆ.

### ೧.೩೧ ಮಹಿಳಾ ಕೈದಿಗಳಿಗೆ ವೃತ್ತಿ ಶಿಕ್ಷಣ - ತರಬೇತಿ - ಉದ್ಯೋಗ

ಅಕ್ಕಿ, ರಾಗಿ, ಸ್ವಚ್ಛ ಮಾಡುವುದೇ ಮಹಿಳಾ ಕೈದಿಗಳಿಗೆ ನೀಡುವ ದುಡಿಮೆ - ಎಂದು ಬಂದಿಖಾನೆ ಇಲಾಖೆ ತೀರಾ ಇತ್ತೀಚಿಗಿನ ವರೆಗೂ ಭಾವಿಸಿದಂತಿತ್ತು. ಹಲವು ವರ್ಷಗಳಿಂದ ಬಂದಿಖಾನೆ ಆಡಳಿತ ವರ್ಗ ಅವರಿಗೆ ವೃತ್ತಿ ಶಿಕ್ಷಣ - ತರಬೇತಿ ನೀಡುವ ಗೋಜಿಗೆ ಹೋಗದೆ, ಅವರ ಮರುನೆಲೆಯ ಬಗ್ಗೆ ಯೋಚಿಸದೆ, ಅವರನ್ನು ಕತ್ತಲೆ ಕೋಣೆಯಲ್ಲಿ ದಬ್ಬುವುದಷ್ಟೇ ತನ್ನ ಕಾಯಕವೆಂದು ಅದರಲ್ಲೇ ಮಗ್ನವಾಗಿತ್ತು. ಪುರುಷ ಕೈದಿಗಳನ್ನು ಹೋಲಿಸಿದರೆ ಮಹಿಳಾ ಕೈದಿಗಳ ಮಾನಸಿಕ ಸ್ಥಿತಿಯೇ ಬೇರೆ. ತನ್ನ ಕುಟುಂಬ - ಮಕ್ಕಳ ನಡುವಣ ಬಂಧಗಳನ್ನು ತಾತ್ಕಾಲಿಕವಾಗಿಯಾದರೂ ಕಡಿದುಹಾಕಿ ಬದುಕುವುದಕ್ಕೆ ಮಹಿಳಾ ಕೈದಿಗೆ ಕಷ್ಟವಾಗುವುದರ ಜತೆಗೆ ಆಕೆಗೆ ಮುಂದಿನ ಭವಿಷ್ಯ - ಮರುನೆಲೆಯ ಬಗ್ಗೆ ಪುರುಷ ಕೈದಿಗಿಂತಲೂ ಹೆಚ್ಚಿನ ಆತಂಕವಿರುತ್ತದೆ. ಇಂತಾ ಪರಿಸ್ಥಿತಿಯಲ್ಲಿ ಮಹಿಳಾ ಕೈದಿಗಳು ದಿನನಿತ್ಯ ಚಿಂತೆ, ಆತಂಕ, ದುಃಖದಲ್ಲೇ ತೊಳಲಾಡುತ್ತಿರುವಾಗ ಆಕೆಗೆ ಮರುನೆಲೆ ಕಲ್ಪಿಸಿಕೊಳ್ಳುವಂತಹ, ಕೈತುಂಬಾ ದುಡಿಮೆ ಸಿಗುವ ಉದ್ಯಮಗಳನ್ನು ಪರಿಚಯಿಸದೆ ಆಡಳಿತವರ್ಗವು ಬರೀ ಅಕ್ಕಿ ರಾಗಿ ಸ್ವಚ್ಛತೆಗೆ ಅವರನ್ನು ಮೀಸಲಿಟ್ಟದ್ದು ಅನೇಕ ಮಹಿಳಾ ಸಂಘಟನೆಗಳಿಗೆ ಸರಿಕಾಣಲಿಲ್ಲ.

ಇವುಗಳ ಹೋರಾಟ, ಒತ್ತಡ ಹಾಗೂ ಕೋರಿಕೆಯಿಂದ ಮಹಿಳಾ ಕೈದಿಗಳನ್ನು ಅಕ್ಕಿ - ರಾಗಿ ಸ್ವಚ್ಛತೆ ಜತೆಗೆ ಕಡತ (file), ಲಕೋಟೆ ತಯಾರಿಸುವ ಕೆಲಸಗಳಿಗೆ ಹಚ್ಚಲಾಯಿತು. ಈಗ ಬಂದಿಖಾನೆಗಳಲ್ಲಿ ಲಭ್ಯವಿರುವ ಉದ್ಯಮಗಳೆಲ್ಲ ಪುರುಷಕೇಂದ್ರಿತವಾಗಿದ್ದು, ಮಹಿಳಾ ಕೈದಿಗಳಿಗೆ ಈ ಉದ್ಯಮಗಳ ಬಗ್ಗೆ ವೃತ್ತಿ ಶಿಕ್ಷಣ - ತರಬೇತಿ ನೀಡಲಾಗುತ್ತಿರಲಿಲ್ಲ. ಇದಕ್ಕೆ ಕಾರಣ ಈ ಉದ್ಯಮಗಳು ಮಹಿಳಾ ಕೈದಿಗಳ ಸಾಮರ್ಥ್ಯಕ್ಕೆ ಮೀರಿದ್ದು ಎಂಬುದು

ಒಂದಾದರೆ ಮತ್ತೊಂದು ಕಾರಣ ಮಹಿಳಾ ಕೈದಿಗಳು ಮತ್ತು ಪುರುಷ ಕೈದಿಗಳು ಒಂದೆಡೆ ಸೇರಬಾರದು ಎಂಬ ಇಲಾಖಾ ನಿಯಮದ ಪರಿಪಾಲನೆಗಾಗಿ.

ಇವೆಲ್ಲ ಕಾರಣಗಳನ್ನು ಗಮನದಲ್ಲಿಟ್ಟುಕೊಂಡು, ಮಹಿಳಾಪರ ಸಂಘಟನೆಗಳ ಅಭಿಪ್ರಾಯಗಳನ್ನು ಸಂಗ್ರಹಿಸಿಕೊಂಡು, ಮಹಿಳಾ ಕೈದಿಗಳ ಮನಸ್ಸನ್ನು ಸುಧಾರಿಸುವಂತಹ, ಅವರ ಚಿಂತೆ - ಚಿಂತನೆಯನ್ನು ಒಂದು ರಚನಾತ್ಮಕ ಹಾಗೂ ಪರಿಣಾಮಕಾರಿ ಕಾರ್ಯಕ್ಕೆ ತೊಡಗಿಸಬಲ್ಲ ಪರ್ಯಾಯ ಉದ್ಯಮಕ್ಕಾಗಿ ಇಲಾಖೆ, ಸ್ವಯಂಸೇವಕ ಸಂಘಟನೆಗಳ ಜತೆ ಚರ್ಚಿಸಿ ಚಿಂತನೆ ನಡೆಸತೊಡಗಿತು. ಅನೇಕ ಸರ್ಕಾರೇತರ ಸ್ವಯಂಸೇವಕ ಸಂಸ್ಥೆ (NGO) ಗಳ ಸಹಕಾರವನ್ನೂ ಇಲಾಖೆ ಬಯಸಿತು.

೧೯೯೯ ರಿಂದ ಪ್ರಮುಖ ಸ್ವಯಂ ಸೇವಕ ಸಂಘ, ಜನೋದಯ ಸಂಸ್ಥೆ ಪ್ರತೀ ಕೇಂದ್ರ ಬಂದಿಖಾನೆಗಳಲ್ಲಿ ಮಹಿಳಾ ಕೈದಿಗಳಿಗಾಗಿ ನವೀನ ತಂತ್ರಜ್ಞಾನದ 'ಟೈಲರಿಂಗ್ ಶಿಕ್ಷಣ - ತರಬೇತಿ' ತರಗತಿಗಳನ್ನು ಆರಂಭಿಸಿತು. ಹೊಸ ಹೊಲಿಗೆ ಯಂತ್ರ 'ಫ್ಯಾಶನ್ ಮೇಕರ್'ಗಳನ್ನು ನೀಡಿ ಅವುಗಳ ಮೂಲಕ ಟೈಲರಿಂಗ್, ಪ್ಯಾಶನ್ ಡಿಸ್ಯಾನಿಂಗ್, ಎಂಬ್ರ್ಯಾಡರಿಗಳನ್ನು ಮಹಿಳಾ ಕೈದಿಗಳಿಗೆ ಕಲಿಸಿತು. ಶಿಕ್ಷಣ ನೀಡಿದ ನಂತರ ಅದನ್ನೊಂದು ಉದ್ಯಮವನ್ನಾಗಿ ಪರಿವರ್ತಿಸಿ, ತಾನು ಕಚ್ಚಾವಸ್ತುಗಳನ್ನು ನೀಡಿ ಕೈದಿಗಳ ದುಡಿಮೆಗೆ ಇಂತಿಷ್ಟು ಮಜೂರಿ ಎಂದು ಇಲಾಖೆಯೊಂದಿಗೆ ಒಪ್ಪಂದ ನಡೆಸಿ, ಕೈದಿಗಳತ್ತ ಜ್ಞಾನಸಂವಹನೆಯನ್ನು ಹಾಗೂ ಮರುನೆಲೆಯನ್ನು ಕಲ್ಪಿಸಿಕೊಡುವಲ್ಲಿ ಸಹಕರಿಸುತ್ತಿದೆ.

'ಪ್ರೆಂಡ್ಸ್ ಆಫ್ ಪ್ರಿಸನರ್ಸ್ ಸೊಸೈಟಿ' ಎಂಬ ಸರ್ಕಾರೇತರ ಸ್ವಯಂ ಸೇವಕ ಸಂಘ, ನಿಯಮಿತವಾಗಿ ಬಂದಿಖಾನೆಗೆ ಭೇಟಿಕೊಟ್ಟು, ಮಹಿಳಾ ಕೈದಿಗಳಿಗೆ, ಎಂಬ್ರ್ಯಾಡರಿ, ಕಸೂತಿ, ವಿವಿದ ಉಲ್ಲನ್ ಹೆಣಿಗೆ, ಗೊಂಬೆ ತಯಾರಿ (Soft toys) ಬಗ್ಗೆ ಶಿಕ್ಷಣ - ತರಬೇತಿ ನೀಡಿ, ಉದ್ಯಮ ರೂಪದಲ್ಲಿ ಅದನ್ನು ಬೆಳೆಸುತ್ತಿದೆ. ಮಹಿಳಾ ಕೈದಿಗಳಿಗೆ ಮರುನೆಲೆಗೆ ಸಹಕರಿಸುವುದರ ಜೊತೆಗೆ ಮನಪರಿವರ್ತನೆಗೂ ಇದು ದಾರಿಮಾಡಿಕೊಡುತ್ತಿದೆ.

ಕೇಂದ್ರ ಗೃಹ ಸಚಿವಾಲಯದ ಷರತ್ತಿನಂತೆ, ಬಂದಿಖಾನೆ ಇಲಾಖೆ ಮಹಿಳಾ ಕೈದಿಗಳಿಗೂ ಕೆಲವು ಉದ್ಯೋಗ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವ (೨೦೦೦ - ೨೦೦೧ ರ ಸಾಲಿನಲ್ಲಿ) ಯೋಜನೆಯನ್ನು ರೂಪಿಸಿದೆ. ಈ ಉದ್ಯೋಗ ಕಾರ್ಯಕ್ರಮ ಯೋಜನೆಯಲ್ಲಿ ಮುಖ್ಯವಾದವು. ೧. ಉಣ್ಣೆಬಟ್ಟೆ ಹೆಣಿಗೆ ೨. ಕೈಚೀಲ ತಯಾರಿಕೆ ೩. ರೆಕ್ಸಿನ್ ನಿಂದ ತಯಾರಿಸುವ ಸಿದ್ಧ ವಸ್ತುಗಳು ೪. ಪ್ಯಾಷನ್ ಡಿಸ್ಯಾನಿಂಗ್ ೫. ಬೆತ್ತದ ಕುರ್ಚಿ ತಯಾರಿಕೆ ೬. ಬೇಕರಿ ವಸ್ತುಗಳ ತಯಾರಿಕೆ ೭. ಅಗರಬತ್ತಿ ತಯಾರಿಕೆ ಮುಂತಾದವು.

೨೦೦೦ - ೨೦೦೧ ನೇ ಸಾಲಿನಲ್ಲಿ ಕೇಂದ್ರದ 'ಬಂದಿಖಾನೆ ಆಡಳಿತ ಆಧುನೀಕರಣ ಯೋಜನೆ'ಯಡಿ ಪ್ರತೀ ಕೇಂದ್ರ ಬಂದಿಖಾನೆಗಳ ಮಹಿಳಾ ಕೈದಿಗಳಿಗೆ ಹೊಲಿಗೆ ಯಂತ್ರಗಳನ್ನು (Fashion Maker Machines) ಒದಗಿಸಲಾಗಿದೆ. ಮನಸ್ಸಿನ ಉಲ್ಲಾಸಕ್ಕೆ ಹಾಗು ವ್ಯಕ್ತಿತ್ವ ವಿಕಾಸಕ್ಕೆ ಪೂರಕ ಜ್ಞಾನಕೊಡುವ ವೃತ್ತಿ ಶಿಕ್ಷಣ ಹಾಗೂ ಭವಿಷ್ಯದ ದಿನಗಳಿಗಾಗಿ ಹಣ ಉಳಿತಾಯಕ್ಕೆ ಅನುಕೂಲವಾಗಿರುವ ದುಡಿಮೆಯಿಂದ ಮಹಿಳಾ ಕೈದಿಗಳು ಈಗ ಮನಸ್ಸು ಪರಿವರ್ತಿಸಿಕೊಂಡು ಜ್ಞಾನಮುಖಿ, ವೃತ್ತಿಮುಖಿಗಳಾಗುತ್ತಿದ್ದಾರೆ.



## ೧.೪ ಕೃಷಿ ಶಿಕ್ಷಣ

ರಾಜ್ಯ ಬಂದಿಖಾನೆ ಇಲಾಖೆ ಕೈದಿಗಳ ಪರಿವರ್ತನೆ, ಸುಧಾರಣೆ ಹಾಗೂ ಪುನರ್ವಸತಿಯ ಪ್ರಯತ್ನವಾಗಿ ಕೈಗಾರಿಕಾ ಆಧರಿತ ಶಿಕ್ಷಣ - ಉದ್ಯಮಗಳನ್ನು ಅವಲಂಬಿಸಿರುವುದರ ಜತೆಗೆ ಕೈಗಾರಿಕೇತರ ಉದ್ಯಮಗಳನ್ನೂ ಅವಲಂಬಿಸಿದೆ.

ಕರ್ನಾಟಕದ ಬಂದಿಖಾನೆಗಳಲ್ಲಿರುವ ಜೀವಾವಧಿ ಕೈದಿಗಳಲ್ಲಿ ಬಹಳಷ್ಟು ಮಂದಿ ಗ್ರಾಮೀಣ ಪರಿಸರದಿಂದ, ಕೃಷಿ ಹಿನ್ನೆಲೆಯಿಂದ ಬಂದವರು. ಪ್ರಕೃತಿಯ ಮಧ್ಯೆ ಬೆಳೆದು ಪ್ರಕೃತಿಯಿಂದಲೇ ಬದುಕುವ ಕಲೆ ಕಲಿತವರು. ಆ ಪರಿಸರದಿಂದ ಬಂದವರನ್ನು ಅದೇ ಪರಿಸರಲ್ಲಿಟ್ಟು ಅವರ ಮನಪರಿವರ್ತನೆ ಹಾಗೂ ಪುನರ್ವಸತಿಗೆ ದಾರಿ ಕಲ್ಪಿಸುವ ದೃಷ್ಟಿಯಿಂದ ಬಂದಿಖಾನೆ ಇಲಾಖೆ, ಎಲ್ಲ ಕೇಂದ್ರ ಬಂದಿಖಾನೆಗಳಿಗೆ ತಾಗಿಕೊಂಡಿರುವಂತೆ ಸಾಕಷ್ಟು ಕೃಷಿ ಭೂಮಿಯನ್ನು ಹೊಂದಿದೆ. ಇದರಲ್ಲಿ ಬೆಂಗಳೂರು ಕೇಂದ್ರ ಬಂದಿಖಾನೆ ೧೧೭ ಎಕ್ರೆ ೧೬ ಗುಂಟೆ ಕೃಷಿ ಭೂಮಿಯನ್ನು ಹೊಂದಿದ್ದರೆ, ಬೆಳಗಾಂ ಕೇಂದ್ರ ಬಂದಿಖಾನೆ ೭೬ ಎಕ್ರೆ, ಮೈಸೂರು ಕೇಂದ್ರ ಬಂದಿಖಾನೆ ೧೮.೫ ಎಕ್ರೆ, ವಿಜಾಪುರ ಕೇಂದ್ರ ಬಂದಿಖಾನೆ ೪೦ ಎಕ್ರೆ ೧೬ ಗುಂಟೆ, ಗುಲ್ಬರ್ಗ ಕೇಂದ್ರ ಬಂದಿಖಾನೆ ೭೫ ಎಕ್ರೆ ೨೪ ಗುಂಟೆ ಹಾಗೂ ಬಳ್ಳಾರಿ ಕೇಂದ್ರ ಬಂದಿಖಾನೆ ೨೧ ಎಕ್ರೆ ೨೦ ಗುಂಟೆ ಕೃಷಿಭೂಮಿಯನ್ನು ಹೊಂದಿವೆ. ಈ ಭೂಮಿಯಲ್ಲಿ ಆಯ್ದ ಕೈದಿಗಳಿಗೆ ಕೃಷಿ, ತೋಟಗಾರಿಕೆ, ಹೈನುಗಾರಿಕೆಗಳ ಬಗ್ಗೆ ಆಧುನಿಕ ಮಾದರಿಯಲ್ಲಿ ತರಬೇತಿ ನೀಡಲಾಗುತ್ತಿದ್ದು, ಆಧುನಿಕ ತಂತ್ರಜ್ಞಾನವುಳ್ಳ ಕೃಷಿಯಂತ್ರ - ಸಲಕರಣೆಗಳ ಬಳಕೆಯ ಬಗ್ಗೆ, ನೀರಿನ ಮಿತವ್ಯಯಕ್ಕೆ ಹನಿನೀರಾವರಿಯ ಬಗ್ಗೆ, ಭೂಸಾರ ಸಂರಕ್ಷಣೆಯ ಬಗ್ಗೆ ತರಬೇತಿ ನೀಡಲಾಗುತ್ತಿದೆ. ಕೋರಮಂಗಲದ ಬಯಲು ಬಂದಿಖಾನೆಯಲ್ಲಿ ವ್ಯಾಪ್ತಿಯಲ್ಲಿ ೧೧೪ ಎಕ್ರೆ ಕೃಷಿ ಭೂಮಿಯಿದ್ದು, ಇದನ್ನು ಸಂಪೂರ್ಣವಾಗಿ ಕೃಷಿ - ತೋಟಗಾರಿಕೆ - ಹೈನುಗಾರಿಕೆಗಳಿಗೆ

ಬಳಸಲಾಗುತ್ತಿದೆ. ೪೫ ಮಂದಿ ಜೀವಾವಧಿ ಕೈದಿಗಳಿಗೆ (೩೦.೮.೨೦೦೨ರ ಕ್ಷೇತ್ರಕಾರ್ಯದ ಮಾಹಿತಿಯಂತೆ) ಇಲ್ಲಿ ಅತ್ಯಾಧುನಿಕ ಮಾದರಿಯಲ್ಲಿ ತೋಟಗಾರಿಕೆ ಮತ್ತು ವ್ಯವಸಾಯದ ಬಗ್ಗೆ ತರಬೇತಿ ನೀಡಲಾಗುತ್ತಿದ್ದು ಇದರ ಜೊತೆಗೆ ರೇಷ್ಮೆ, ಕುರಿಸಾಕಣಿಕೆ, ಮೀನುಸಾಕಣಿಕೆ, ಮಣ್ಣಿನ ಸಾರ ಸಂರಕ್ಷಣೆ, ಕೃಷಿಯಲ್ಲಿ ಮಿತನೀರು ಬಳಕೆಯ ಬಗ್ಗೆಯೂ ಪ್ರಾತ್ಯಕ್ಷಿಕೆ ಮೂಲಕ ತರಬೇತಿ ಕೊಡಲಾಗುತ್ತಿದೆ. ಈಗಾಗಲೇ ಹೈನುಗಾರಿಕೆಯಲ್ಲಿ ಮೂರು ಮಂದಿ ಕೈದಿಗಳು ತರಬೇತಿ ಹೊಂದಿದ್ದು, ಕುರಿಸಾಕಣಿಕೆಯಲ್ಲಿ ಮೂರುಮಂದಿ, ರೇಷ್ಮೆ ಸಾಕಣಿಕೆಯಲ್ಲಿ ಮೂರು ಮಂದಿ, ಮೀನು ಸಾಕಣಿಕೆಯಲ್ಲಿ ಒಬ್ಬರು ತರಬೇತಿ ಹೊಂದಿದ್ದಾರೆ.

**ಕೋಷ್ಟಕ ೯**

## ಕೇಂದ್ರ ಮತ್ತು ಬಯಲು ಬಂದಿಖಾನೆಗಳಲ್ಲಿನ ಕೃಷಿಭೂಮಿ ವಿವರ

| ಕ್ರ. ಸಂ. | ಬಂದಿಖಾನೆಗಳು | ಕೃಷಿ ಭೂಮಿ | ಕೃಷಿ/ತೋಟಗಾರಿಕೆ ಬೋಧನೆಯ ಕಾರ್ಯನಿರ್ವಹಿಸುತ್ತಿರುವ ಅಧಿಕಾರಿ/ಸಿಬ್ಬಂದಿಗಳು |
|---|---|---|---|
| ೧ | ಬಳ್ಳಾರಿ ಬಂದಿಖಾನೆ | ೩೧ ಎಕ್ರೆ ೩೦ ಗುಂಟೆ | ಯಾವುದೇ ಹುದ್ದೆ ಮಂಜೂರಾತಿ ಇಲ್ಲ |
| ೨ | ಗುಲಬರ್ಗಾ ಕೇಂದ್ರ ಬಂದಿಖಾನೆ | ೭೫ ಎಕ್ರೆ ೧೪ ಗುಂಟೆ | ಗ್ರಾಮಸೇವಕ-೧, (ಮಂಜೂರಾದ ಹುದ್ದೆ-೧) |
| ೩ | ವಿಜಾಪುರ ಕೇಂದ್ರ ಬಂದಿಖಾನೆ | ೪೦ ಎಕ್ರೆ ೧೬ ಗುಂಟೆ | ಕೃಷಿಸಹಾಯಕ-೧, (ಮಂಜೂರಾದ ಹುದ್ದೆ-೧) |
| ೪ | ಮೈಸೂರು ಕೇಂದ್ರ ಬಂದಿಖಾನೆ | ೧೮.೫ ಎಕ್ರೆ | ಯಾವುದೇ ಹುದ್ದೆ ಮಂಜೂರಾತಿ ಇಲ್ಲ |
| ೫ | ಬೆಳಗಾಂ ಕೇಂದ್ರ ಬಂದಿಖಾನೆ | ೭೬ ಎಕ್ರೆ | ಕೃಷಿಸಹಾಯಕ-೧, (ಮಂಜೂರಾದ ಹುದ್ದೆ-೧) |
| ೬ | ಬೆಂಗಳೂರು ಕೇಂದ್ರ ಬಂದಿಖಾನೆ | ೧೦೭ ಎಕ್ರೆ ೧೬ ಗುಂಟೆ | ಯಾವುದೇ ಹುದ್ದೆ ಮಂಜೂರಾತಿ ಇಲ್ಲ |
| ೭ | ಬಯಲು ಬಂದಿಖಾನೆ | ೧೧೮ ಎಕ್ರೆ | ಸಹಾಯಕ ಕೃಷಿ ಅಧಿಕಾರಿ-೧, (ಮಂಜೂರಾದ ಹುದ್ದೆ-೧)<br>ಕೃಷಿ ಸಹಾಯಕ-೧ (ಖಾಲಿ), (ಮಂಜೂರಾದ ಹುದ್ದೆ-೧)<br>ಸಹಾಯಕ ತೋಟಗಾರಿಕಾ ಅಧಿಕಾರಿ-೧ (ಖಾಲಿ), (ಮಂಜೂರಾದ ಹುದ್ದೆ-೧) |

ಜ್ಞಾನದೊಂದಿಗೆ ಪ್ರಕೃತಿಯ ಸ್ನೇಹ ದೊರಕಿಸಿಕೊಳ್ಳುವುದರ ಜೊತೆಗೆ ದಿನಕ್ಕೆ ೪೫ರೂ. ಮಜೂರಿ ಪಡೆಯುವ ಕೈದಿಗಳು ಇಲ್ಲಿ ಕನಿಷ್ಠ ಭದ್ರತೆಯಲ್ಲಿರುವುದರಿಂದ ಹೊರಗಿನ ಸಮಾಜಕ್ಕೆ ತೀರಾ ಸನಿಹದಲ್ಲಿರುತ್ತಾರೆ. ಐದುವರ್ಷ ಮೇಲ್ಪಟ್ಟು ಶಿಕ್ಷೆ ಮುಗಿಸಿರುವ ಒಳ್ಳೆಯ ನಡತೆಯ ಜೀವಾವಧಿ ಕೈದಿಯನ್ನು, ಆತ ಜ್ಞಾನಸಂಪಾದನೆಯ ಜತೆಗೆ ಮನಪರಿವರ್ತನೆಯ ದಾರಿ ತುಳಿಯುತ್ತ ಹೊರ ಸಮಾಜಕ್ಕೆ ಹತ್ತಿರವಾಗಲಿ ಎಂಬ ಉದ್ದೇಶದಿಂದಲೇ ಬಯಲು ಬಂದಿಖಾನೆಯ ಕೃಷಿ ಉದ್ಯಮದಲ್ಲಿ ತೊಡಗಿಸಲಾಗುತ್ತದೆ. ರಾಜ್ಯದ ಆರು ಕೇಂದ್ರ ಬಂದಿಖಾನೆಗಳು ಹಾಗೂ ಒಂದು ಬಯಲು ಬಂದಿಖಾನೆಯಲ್ಲಿ ಆಯ್ದ ಕೈದಿಗಳಿಗೆ, ಆಧುನಿಕ ತಂತ್ರಜ್ಞಾನ ಬಳಸಿ ವ್ಯವಸಾಯ, ತೋಟಗಾರಿಕೆ, ಹೈನುಗಾರಿಕೆ, ಕುರಿಸಾಕಣಿಕೆ, ಮೀನುಸಾಕಣಿಕೆ, ಕೋಳಿಸಾಕಣಿಕೆ, ಅಣಬೆ ಬೆಳೆ, ರೇಷ್ಮೆ ಉದ್ಯಮ, ಜೇನುಸಾಕಣಿಕೆ, ಹಂದಿಸಾಕಣಿಕೆ, ಜೈವಿಕ ಗೊಬ್ಬರ - ಕೀಟನಾಶಕಗಳ ಬಗ್ಗೆ ಮಾಹಿತಿ ಪ್ರಾತ್ಯಕ್ಷಿಕೆ ಹಾಗೂ ತರಬೇತಿಯನ್ನು ನೀಡಲು ಬಂದಿಖಾನೆ ಇಲಾಖೆ ಸಾಕಷ್ಟು ಪರಿಣಿತ ಬೋಧಕರ ಹುದ್ದೆಗಳನ್ನು ಮಂಜೂರು ಮಾಡಿದೆ. ಅವುಗಳು :

ಬಂದಿಖಾನೆ ಇಲಾಖೆಯಲ್ಲಿ ೩ ಸಹಾಯಕ ಕೃಷಿ ಅಧಿಕಾರಿ, ೧ ಸಹಾಯಕ ತೋಟಗಾರಿಕಾ ಅಧಿಕಾರಿ, ೫ ಕೃಷಿ ಬೋಧಕ (Agriculture Instructor) ೩ ಲೈವ್‌ಸ್ಟೋಕ್ ಇನ್ಸ್‌ಪೆಕ್ಟರ್ (Vet. cum Livestock Inspector) ಹಾಗೂ ೧ ಗ್ರಾಮಸೇವಕ ಹುದ್ದೆ ಮಂಜೂರಾಗಿದ್ದು, ಈ ಎಲ್ಲ ಹುದ್ದೆಗಳಿಗೆ ರಾಜ್ಯದ ಕೃಷಿ ಮತ್ತು ತೋಟಗಾರಿಕಾ ಇಲಾಖೆಗಳಿಂದ ಸಿಬ್ಬಂದಿಗಳನ್ನು ಪ್ರತಿನಿಯೋಜನೆ ಮೇಲೆ ತುಂಬಲಾಗುತ್ತದೆ.

ಅಧ್ಯಯನದ ಕ್ಷೇತ್ರಕಾರ್ಯದ ಸಂದರ್ಭ ಗಮನಿಸಿದ ಅಂಶವೆಂದರೆ ಒಟ್ಟು ಈ ಹುದ್ದೆಗಳಲ್ಲಿ ಕೇವಲ ಶೇಕಡಾ ೭೦ ಹುದ್ದೆಗಳು ತುಂಬಿದ್ದು, ಶೇಕಡಾ ೩೦ ಹುದ್ದೆಗಳು ಖಾಲಿ ಇರುವುದನ್ನು ಗಮನಿಸಲಾಗಿದೆ (ಕೋಷ್ಟಕ ೯ ರಲ್ಲಿ ನೀಡಲಾಗಿದೆ). ಕೈದಿ, ಪ್ರಕೃತಿ ಜತೆ ಮುಖಾಮುಖಿಯಾಗುತ್ತ ತರಬೇತಿ ಅಥವ ದುಡಿಮೆಯ ಸಂದರ್ಭ ಯಾವುದೇ ಆತಂಕ - ಚಿಂತೆಗಳಿಲ್ಲದೆ, ಸ್ವಾತಂತ್ರ್ಯದ ಬದುಕನ್ನು ಸವಿಯುತ್ತಾ ಸಹಜವಾಗಿರುವುದರಿಂದ ಈ ಕೃಷಿ ಶಿಕ್ಷಣ ಮಾಧ್ಯಮವು ಕೂಡಾ ಜ್ಞಾನಸಂವಹನೆಗೆ, ಮನಪರಿವರ್ತನೆಗೆ ಒಂದು ಪ್ರಭಾವಶಾಲಿ ಮಾಧ್ಯಮ ಎಂದು ಪರಿಗಣಿಸಲಾಗಿದೆ. ಹೆಚ್ಚಿನ ಕೈದಿಗಳು ಈ ಮಾಧ್ಯಮವನ್ನೇ ತಮ್ಮ 'ಔದ್ಯೋಗಿಕ ಶಿಕ್ಷಣಕ್ಕಾಗಿ' ಆಯ್ದುಕೊಳ್ಳಲು ಆಸಕ್ತಿ ತೋರಿರುವುದರಿಂದ ಬಂದಿಖಾನೆ ಇಲಾಖೆ ರಾಜ್ಯದ ಇನ್ನೂ ಕೆಲವು ಕಡೆ ಬಯಲು ಬಂದಿಖಾನೆಗಳನ್ನು ನಿರ್ಮಿಸುವ ಹಾಗೂ ಕೃಷಿ ಭೂಮಿಯನ್ನು ಖರೀದಿಸುವ ಯೋಜನೆಯನ್ನು ಹಾಕಿಕೊಂಡಿದೆ.

ಈ ಕೃಷಿಯಾಧಾರಿತ ಶಿಕ್ಷಣ ಹಾಗೂ ದುಡಿಮೆಯಿಂದ ಕೈದಿಗಳಿಗೆ ಮುಕ್ತ ವಾತಾವರಣದ ಜತೆಗೆ ಉತ್ತಮ ಶಿಕ್ಷಣ ಹಾಗೂ ಮಜೂರಿ ಲಭಿಸುವುದು ಮಾತ್ರವಲ್ಲ ಇಲಾಖೆಗೂ ಪ್ರತೀವರ್ಷ ಲಕ್ಷಗಟ್ಟಲೆ ಆದಾಯ ಬರುತ್ತಿದೆ.

### ಕೋಷ್ಟಕ ೧೦

### ಬಯಲು ಬಂದಿಖಾನೆ, ಕೋರಮಂಗಲದ ಕೃಷಿ ಆದಾಯ ವಿವರ

(೧೯೯೭-೯೮ ರಿಂದ ೨೦೦೧-೦೨ರವರೆಗೆ : ಐದು ವರ್ಷಗಳು)

| ಕೋರಮಂಗಲ, ಬಯಲು ಬಂದಿಖಾನೆಯ ಕೃಷಿ ಆದಾಯ : | | |
|---|---|---|
| ೧೯೯೭ - ೧೯೯೮ | | ೪.೯೮ ಲಕ್ಷ |
| ೧೯೯೮ - ೧೯೯೯ | | ೩.೨೪ ಲಕ್ಷ |
| ೧೯೯೯ - ೨೦೦೦ | | ೧೦.೨೫ ಲಕ್ಷ |
| ೨೦೦೦ - ೨೦೦೧ | | ೧೬.೬ ಲಕ್ಷ |
| ೨೦೦೧ - ೨೦೦೨ | | ೨೧.೦೨ ಲಕ್ಷ |
| ಉಳಿದ ಆರು ಕೇಂದ್ರ ಬಂದಿಖಾನೆಗಳ ಕೃಷಿ ಆದಾಯ : | | |
| ೧೯೯೭ - ೧೯೯೮ | | ೨೪.೨೦ ಲಕ್ಷ |
| ೧೯೯೮ - ೧೯೯೯ | | ೨೦.೧೮ ಲಕ್ಷ |
| ೧೯೯೯ - ೨೦೦೦ | | ೨೫.೩೭ ಲಕ್ಷ |
| ೨೦೦೦ - ೨೦೦೧ | | ೩೬.೧೨ ಲಕ್ಷ |
| ೨೦೦೧ - ೨೦೦೨ | | ೨೫.೮೮ ಲಕ್ಷ |

ಕೈದಿಗಳಿಗೆ ಪ್ರಾತ್ಯಕ್ಷಿಕೆ ಶಿಕ್ಷಣ - ತರಬೇತಿ ನೀಡುವುದಕ್ಕಾಗಿ ಕೇಂದ್ರ ಸರಕಾರದ ಧನಸಹಾಯದಡಿಯ ಯೋಜನೆ 'ಬಂದಿಖಾನೆಗಳ ಆಡಳಿತ ಆಧುನೀಕರಣ'ದಲ್ಲಿ ಬೆಳಗಾವಿ, ಗುಲ್ಬರ್ಗ ಕೇಂದ್ರ ಬಂದಿಖಾನೆಗಳಿಗೆ ಹೆಚ್.ಎಂ.ಟಿ. ಟ್ರ್ಯಾಕ್ಟರ್‌ಗಳನ್ನು ಒದಗಿಸಲಾಗಿದೆ. ಕೇಂದ್ರ ಬಂದಿಖಾನೆ ಗುಲ್ಬರ್ಗ, ಬಿಜಾಪುರ, ಮೈಸೂರು, ಬಯಲು ಬಂದಿಖಾನೆಗಳ ಕೃಷಿ ಭೂಮಿಗಳಿಗೆ ಹನಿನೀರಾವರಿ ಯೋಜನಾ ಪದ್ಧತಿ ಅಳವಡಿಸಲಾಗಿದೆ. ೨೦೦೩ರಲ್ಲಿ

ಈ ಎಲ್ಲ ಬಂದಿಖಾನೆಗಳ ಕೃಷಿಭೂಮಿಯಲ್ಲಿ ಜೇನು ಸಾಕಣಿಕೆ, ಕೋಳಿ ಸಾಕಾಣಿಕೆ, ಮೀನು ಸಾಕಾಣಿಕೆ, ಹಂದಿ ಸಾಕಣಿಕೆ, ಅಣಬೆ ಬೆಳೆಸುವಿಕೆ ಬಗ್ಗೆ ಕೈದಿಗಳಿಗೆ ಉದ್ಯಮ - ತರಬೇತಿಯನ್ನಾಗಿ ಕಲ್ಪಿಸಿಕೊಡಲಾಗುತ್ತದೆ.

**೧.೫ ನಾಟಕ**

ಅಕ್ಷರಸ್ಥ ಮತ್ತು ಅನಕ್ಷರಸ್ಥ ಸಮುದಾಯವೆರಡಕ್ಕೂ ಏಕಕಾಲದಲ್ಲಿ ಜ್ಞಾನಸಂವಹನ ಮಾಡುವ ಪ್ರಭಾವಶಾಲಿ ಮಾಧ್ಯಮ ನಾಟಕ. ಇಲ್ಲಿ ಜ್ಞಾನವೆಂದರೆ ಮನುಕುಲವನ್ನು ಬೆಳಗಬಲ್ಲ ಭವ್ಯ ಸಂದೇಶವಿರಬಹುದು, ಬದುಕಿನ ಸತ್ಯವಿರಬಹುದು, ಬದುಕಿನ ಮೌಲ್ಯವಿರಬಹುದು.

ವರ್ತಮಾನ ಕಾಲವೇ ಇಲ್ಲದ, ನಿರ್ಜೀವ ಭೂತಕಾಲದಿಂದ ತಮ್ಮನ್ನು ಹೊರತರಬಲ್ಲಂತಾ ಯಾವುದೇ ಅನುಭವ ಅಥವ ಆಸಕ್ತಿಯೂ ಇಲ್ಲವಾಗಿರುವ ಕೈದಿಗಳಲ್ಲಿ, ಭವಿಷ್ಯದ ಬಗ್ಗೆ ಕನಸುಗಳೂ ಇಲ್ಲದಿರುವಾಗ ಅವರಲ್ಲಿ ಜೀವನ ಪ್ರೇಮದ ಬೆಳಕು ಕಾಣಿಸಲು, ನಾಟಕವೆಂಬ ಜ್ಞಾನ ಸಂವಹನಾ ಮಾಧ್ಯಮವನ್ನು ಸೆರೆಮನೆಗೆ ಪರಿಚಯಿಸಲಾಯಿತು. ಮನರಂಜನೆಯ ಜತೆಗೆ ಕೈದಿಗಳಿಗೆ ತಲಪಿಸಬೇಕಾದ 'ಬದುಕಿನ ಸಂದೇಶ'ವನ್ನು ಈ ಮಾಧ್ಯಮ ಪರಿಣಾಮಕಾರಿಯಾಗಿ ತಲುಪಿಸುವ ಕಾರಣ ಇದನ್ನು ಬಂದಿಖಾನೆ ಆಡಳಿತ ಅತ್ಯಂತ ಪರಿಣಾಮಕಾರಿ ಪಾರಂಪರಿಕ ಜ್ಞಾನಸಂವಹನ ಮಾಧ್ಯಮವೆಂದು ಸ್ವೀಕರಿಸಿದೆ.

ಒಂದು ಪುಸ್ತಕ ಮಾಡುವುದಕ್ಕಿಂತ ನೂರು ಪಾಲು ಹೆಚ್ಚಿನ ಸಾಧನೆಯನ್ನು ಒಂದು ನಾಟಕ ಮಾಡಬಲ್ಲದು ಎಂಬ ಹೆನ್ರಿ ಆರ್ಮಿಂಗ್‌ನ ಮಾತು ಬಂದಿಖಾನೆಗಳಲ್ಲಿ ನಡೆಯುತ್ತಿರುವ, ಕೈದಿ ಮನಪರಿವರ್ತನಾ ಪ್ರಕ್ರಿಯೆ ಸಂದರ್ಭದಲ್ಲಂತೂ ಅಕ್ಷರಶ: ನಿಜ. ನಾಟಕಗಳಲ್ಲಿ ಜ್ಞಾನ ಅಥವ ಸಂದೇಶ, ವ್ಯಕ್ತಿ - ವ್ಯಕ್ತಿಗಳ ನಡುವೆ ನೇರ ಸಂವಹಿಸುವುದು ಮಾತ್ರವಲ್ಲ, ಅದು ಅತೀ ಸ್ವಾಭಾವಿಕ ನೆಲೆಯಿಂದ ಮೂಡಿ ಬರುವುದರಿಂದ ಕೈದಿಗಳಲ್ಲಿ ಅದು ತಕ್ಷಣವೇ ಹೊಸ ಆಲೋಚನೆ, ಹೊಸ ಸಂವೇದನೆಯನ್ನು ಹುಟ್ಟಿಸಿ ಹೊಸ ಬದುಕನ್ನು ಕಟ್ಟಿಕೊಳ್ಳಲು ಸಹಕಾರಿಯಾಗುತ್ತದೆ. ನಾಟಕದೊಳಗಿರುವ ಈ ಅದ್ಭುತ 'ಸತ್ಯ'ವನ್ನು ಮನಗಂಡ ದಾದಾ ಪಾಲ್ಕೆ ಪ್ರಶಸ್ತಿ ವಿಜೇತ ವಿ. ಶಾಂತಾರಾಮ್ ಅವರು ೬೦ ರ ದಶಕದಲ್ಲೇ ಕೈದಿಗಳಿಗಾಗಿ ಕೈದಿಗಳಿಂದಲೇ 'ದೋ ಆಂಖೇ ಬಾರಾ ಹಾತ್' ಎಂಬ ನಾಟಕವನ್ನು ಆಡಿಸಿ ಯಶಸ್ವಿಯಾದರು.

ಈ ಯಶಸ್ಸಿನ ಎಳೆ ಹಿಡಿದೇ ನಮ್ಮ ರಾಜ್ಯದ ಬಂದಿಖಾನೆ ಇಲಾಖೆ ತನ್ನ ಕೈದಿಗಳ ಮನಪರಿವರ್ತನೆಗೂ ನಾಟಕ ಮಾಧ್ಯಮವನ್ನು ಆಯ್ಕೆಮಾಡಿತು. ಒಂಟಿಯಾಗಿ ಅಂತರ್ಮುಖಿಯಾಗಿ ಯೋಚನಾಮಗ್ನರಾಗಿ ತಮ್ಮನ್ನು ತಾವೇ ಕಟ್ಟಿಕೊಳ್ಳುವುದು ಎಲ್ಲರಿಗೂ ಸಾಧ್ಯವಾಗುವುದಿಲ್ಲ. ಇತರರ ಒಡನಾಟದಲ್ಲಿ ಸೃಜನಶೀಲ ಚಟುವಟಿಕೆಗಳಿಗೆ ತೊಡಗಿದಾಗ ನಮ್ಮ ಒಳಗನ್ನೂ ಸೃಜನಶೀಲಗೊಳಿಸಿಕೊಳ್ಳುವ ಅವಕಾಶವಿದೆ. ಹಾಗೆ ತೊಡಗಿಸಿಕೊಳ್ಳುವ ಸೃಜನಶೀಲ ಚಟುವಟಿಕೆ ಎಂದರೆ 'ರಂಗಭೂಮಿ' ಒಂದೇ ಎಂಬ ಆಲೋಚನೆಯಿಂದ ರಾಜ್ಯ ಬಂದಿಖಾನೆ ಇಲಾಖೆ ಈ ಮಹತ್ತರವಾದ ಕಾರ್ಯವನ್ನು ಮೈಸೂರಿನ ರಂಗಾಯಣದ ನಿರ್ದೇಶಕರಾಗಿದ್ದ, ರಾಷ್ಟ್ರದ ಪ್ರತಿಭಾನ್ವಿತ ಹಿರಿಯ ರಂಗಕರ್ಮಿ ಬಿ.ವಿ. ಕಾರಂತರಿಗೆ ಈ ಕಾರ್ಯವನ್ನು ಒಪ್ಪಿಸಿತು.









ನಾಟಕ ತರಬೇತಿ ಮತ್ತು ಪ್ರದರ್ಶನ

ಕಾರಂತರು, ತನ್ನ ನುರಿತ ಶಿಷ್ಯಂದಿರನ್ನು ಮುಂದಿಟ್ಟುಕೊಂಡು ೧೯೯೭ ರಲ್ಲಿ ಬಳ್ಳಾರಿಯ ಕೇಂದ್ರ ಬಂದಿಖಾನೆಯಲ್ಲಿ ಕೈದಿಗಳಿಗೆ ರಂಗ ತರಬೇತಿಯನ್ನಾರಂಭಿಸಿ, ರಂಗಾಯಣದ ಕಲಾವಿದ ಮಂಜುನಾಥ ಬೆಳಕೆರೆ ಕೈದಿಗಳ ಮನಪರಿವರ್ತನೆಯ ಅಂಶವನ್ನೇ ಮನದಲ್ಲಿಟ್ಟುಕೊಂಡು ಬರೆದ 'ಕಾಲನೇಮ'ವೆಂಬ ನಾಟಕವನ್ನು ಕೈದಿಗಳ ಮೂಲಕವೇ ಯಶಸ್ವಿಯಾಗಿ ಪ್ರಯೋಗಿಸಿದರು.

ಕೈದಿಗಳ ಮನಸ್ಥಿತಿಯ ಮೇಲೆ ಅತ್ಯಂತ ಗಾಢ ಪರಿಣಾಮ ಬೀರುವ 'ಪಶ್ಚಾತ್ತಾಪದಿಂದ ಪರಿವರ್ತನೆ' ಎಂಬ ಸಂದೇಶವುಳ್ಳ ನಾಟಕವನ್ನು ಆಯ್ದುಕೊಂಡು, ಭೂತದ ಬಗ್ಗೆ ಪರಿತಪಿಸುತ್ತ, ಭವಿಷ್ಯದ ಬಗ್ಗೆ ಚಿಂತಿಸುತ್ತ, ವರ್ತಮಾನದ ಬದುಕನ್ನು ಯಾಂತ್ರಿಕವಾಗಿ ದೂಡುತ್ತಿರುವ ಆಯ್ದ ಕೈದಿಗಳನ್ನು ರಂಗತರಬೇತಿಯಲ್ಲಿ ತೊಡಗಿಸಿ, ಇದರ ಜತೆಗೆ - ಅವಶ್ಯಕ ರಂಗಪರಿಕರಗಳ ತಯಾರಿ, ವ್ಯಕ್ತಿತ್ವ ವಿಕಸನ, ಆಧ್ಯಾತ್ಮ ಶಿಕ್ಷಣ, ಆರೋಗ್ಯದ ಅರಿವಿನಂತಹ ಹಲವು ಶಿಬಿರಗಳನ್ನು ಈ ಸಂದರ್ಭದಲ್ಲೇ ಆಯೋಜಿಸುವ ಮೂಲಕ 'ನಾಟಕ'ವೆಂಬ ಜ್ಞಾನಸಂವಹನ ಮಾಧ್ಯಮವನ್ನು ಕೈದಿಯ ಮನಪರಿವರ್ತನೆಗೆ ಹೇಗೆ ಪರಿಣಾಮಕಾರಿಯಾಗಿ ಬಳಸಬಹುದು ಎಂಬುದನ್ನು ಬಿ.ವಿ. ಕಾರಂತರು ಶಿಷ್ಯರೊಂದಿಗೆ ತೋರಿಸಿಕೊಟ್ಟು ಮುಂದಿನ ಜ್ಞಾನಸಂವಹನದ ಜವಾಬ್ದಾರಿಯನ್ನು ತನ್ನ ಶಿಷ್ಯ ಪರಂಪರೆಗೆ ವಹಿಸಿಕೊಟ್ಟರು.

ಬಳ್ಳಾರಿ ಕೇಂದ್ರ ಬಂದಿಖಾನೆಯಲ್ಲಿ ನಡೆದ ಈ ಯಶಸ್ವಿ ಪ್ರಯೋಗ, ಕೈದಿಗಳಲ್ಲಾದ ಮಹತ್ತರ ಬದಲಾವಣೆಯನ್ನು ಗಮನಿಸಿದ ರಾಜ್ಯದ ಬಂದಿಖಾನೆ ಇಲಾಖೆ ಇದನ್ನು ಮುಂದುವರಿಸುವ ಜವಾಬ್ದಾರಿಯನ್ನು ಕಾರಂತರ ಶಿಷ್ಯವರ್ಗಕ್ಕೆ ಬಿಟ್ಟು ಕೊಟ್ಟಿತು. ಕಾರಂತರ ಶಿಷ್ಯ ರಂಗಾಯಣದ ಕಲಾವಿದ ಹುಲಗಪ್ಪ ಕಟ್ಟೀಮನಿ ಅವರು ಗುರು ಹಾಕಿಕೊಟ್ಟ ದಾರಿಯಲ್ಲಿ ಮುನ್ನಡೆದು, ೧೯೯೯ ರ ಆಗಸ್ಟ್ ೧೫ ರಂದು ಮೈಸೂರಿನ ಕೇಂದ್ರ ಬಂದಿಖಾನೆಯ ಕೈದಿಗಳಿಂದ ಕುವೆಂಪು ಬರೆದ 'ರಕ್ತಾಕ್ಷಿ' ನಾಟಕವನ್ನಾಡಿಸಿದರು.

೧೯೯೭ರ 'ಕಾಲನೇಮ' ನಾಟಕ ಬಳ್ಳಾರಿ ಕೇಂದ್ರ ಬಂದಿಖಾನೆಯ ಒಳಗಡೆ ಪ್ರಯೋಗವಾಗಿದ್ದರೆ, ೧೯೯೮ ರಲ್ಲಿ ಮೈಸೂರಿನ ಕೇಂದ್ರ ಬಂದಿಖಾನೆಯ ಕೈದಿಗಳ 'ರಕ್ತಾಕ್ಷಿ' ನಾಟಕ ಬಂದಿಖಾನೆಯ ನಾಲ್ಕು ಗೋಡೆಗಳಿಂದ ಬಲು ದೂರಕ್ಕಿರುವ ಮೈಸೂರಿನ ಕಲಾಮಂದಿರದಲ್ಲಿ ಪ್ರದರ್ಶಿತವಾಯಿತು. ನಾಟಕ ಪ್ರಯೋಗಕ್ಕಾಗಿ ಕೈದಿಗಳನ್ನು ಬಂದಿಖಾನೆಯಿಂದ ಹೊರಗಡೆ ಕಳುಹಿಸುವ ನಿರ್ಧಾರದ ಮೂಲಕ ಕೈದಿಗಳನ್ನು ಬಂದಿಖಾನೆ ಆಡಳಿತ ವಿಶ್ವಾಸಕ್ಕೆ ತೆಗೆದುಕೊಳ್ಳುವುದರೊಂದಿಗೆ ಕೈದಿಗಳ ಮನಪರಿವರ್ತನೆಯ ಪ್ರಕ್ರಿಯೆ ಆರಂಭವಾದಂತಾಯ್ತು.

'ರಕ್ತಾಕ್ಷಿ' ನಾಟಕವೂ 'ಕಾಲನೇಮ' ನಾಟಕದಂತೆ ಕೈದಿ ಜಗತ್ತಿಗೆ ಮಹತ್ತರ ಸಂದೇಶವನ್ನು ನೀಡುವಂತಾದ್ದು. 'ಕಾಲನೇಮ' ನಾಟಕದ ಸಂದೇಶ - ಹೆಣ್ಣು, ಹೊನ್ನು, ಮಣ್ಣುಗಳ ವ್ಯಾಮೋಹ ಹಾಗೂ ಅಧಿಕಾರ ಲಾಲಸೆಯ ಕೇಡಿನಿಂದ ಹುಟ್ಟುವ ಪಶ್ಚಾತ್ತಾಪ, ಅದರಿಂದಾಗುವ ಮನಪರಿವರ್ತನೆ - ಆಗಿದ್ದರೆ, 'ರಕ್ತಾಕ್ಷಿ' ನಾಟಕದ ಸಂದೇಶವೂ ಅದೇ. ರಾಜ್ಯದಾಹ ಅಧಿಕಾರಕ್ಕಾಗಿ ನಡೆಯುವ ಒಳಸಂಚು, ಪಿತೂರಿ, ಕುತಂತ್ರ, ಮನದೊಳಗೆ ನಡೆಯುವ ಮಾನಸಿಕ ಯುದ್ಧ - ಅದರ ಪರಿಣಾಮವಾಗಿ ಘಟಿಸುವ ಕೊಲೆ - ನಂತರ ಹುಟ್ಟುವ ಪಾಪಪ್ರಜ್ಞೆ - ಪಶ್ಚಾತ್ತಾಪ - ಕೊನೆಗೆ ಮನಪರಿವರ್ತನೆ.

ರಕ್ತಾಕ್ಷಿ ನಾಟಕದಿಂದ ಕೈದಿಗಳಲ್ಲಾದ ಅದ್ಭುತ ಬದಲಾವಣೆಯನ್ನು ಗಮನಿಸಿದ ನಿರ್ದೇಶಕ ಹುಲಗಪ್ಪ ಕಟ್ಟೀಮನಿ, ನಾಡಿನ ಹಲವು ಪ್ರಗತಿಪರ ಚಿಂತಕರು, ರಂಗಕರ್ಮಿಗಳನ್ನು ಒಟ್ಟುಗೂಡಿಸಿ, ಮೈಸೂರುನಗರ ಪೊಲೀಸ್ ಕಮಿಷನರ್ ಹಾಗೂ ಮೈಸೂರು ಕೇಂದ್ರ ಬಂದಿಖಾನೆ ಆಡಳಿತದ ಸಹಯೋಗದಲ್ಲಿ 'ವಿಕಸನ' ಎಂಬ ವೇದಿಕೆಯನ್ನು ಹುಟ್ಟುಹಾಕಿದರು. ರಾಜ್ಯ ಬಂದಿಖಾನೆ ಇಲಾಖೆ ಈ ವೇದಿಕೆಗೆ ಸರ್ವ ಪ್ರೋತ್ಸಾಹವನ್ನು ನೀಡಿತು.

ಸೆರೆವಾಸಿಗಳನ್ನು 'ಸೆರೆಯಿಂದ ತೆರೆಗೆ' ತರಲು ಈ ವೇದಿಕೆ ಮೊದಲು ಮೈಸೂರು ಬಂದಿಖಾನೆಯನ್ನು ಪ್ರವೇಶಿಸಿತು. ಸೆರೆವಾಸಿಗಳ ಅಂತಃಕರಣ ಯಾತ್ರೆಯಾಗಿ 'ವಿಕಸನ' ಬಂದಿಖಾನೆ ಪ್ರವೇಶಿಸಿ, ಅಲ್ಲಿನ ಬಂದಿಗಳೊಂದಿಗೆ ಮನಬಿಚ್ಚಿ ಮಾತನಾಡಿ ಅವರೆದೆಯೊಳಗಿನ ತುಡಿತಗಳನ್ನು ಪಡಿಯಾಡಿತು. ಗೋಡೆಗಳ ಗೂಡಿನಲ್ಲಿ ಬಂದಿಯಾದರೂ ಅವರಿಂದ ಅಮಿತ ಕಲಾ ಕೌಶಲ್ಯವನ್ನು ಹೊರತೆಗೆಯಿತು. ಚಿತ್ರಕಾರ, ಶಿಲ್ಪಕಾರ, ಕುಶಲತೆ, ಸಂಗೀತ, ಸಾಹಿತ್ಯವನ್ನೆಲ್ಲ ಅದುಮಿಕೊಂಡಿದ್ದ ಕೈದಿಗಳೆಲ್ಲ ವಿಕಸನದ ಬೆಚ್ಚಗಿನ ಪ್ರೀತಿಗೆ ಸ್ಪಂದಿಸಿ ಗರಿಬಿಚ್ಚಿ ಕುಣಿದಾಡಿದರು. ಒಂದಲ್ಲ...ಎರಡಲ್ಲ...ನಲವತ್ತೈದು ದಿನಗಳ ಕಾಲ ರಂಗ ತರಬೇತಿಗಾಗಿ ಅವರೊಂದಿಗಿದ್ದ ವಿಕಸನ ವೇದಿಕೆ, ಕೈದಿಗಳಿಗೆ ಕಂಸಾಳೆ, ಮಣ್ಣಿನಲ್ಲಿ ಕುಸುರಿ ಕೆಲಸ, ಮರದ ಕೆತ್ತನೆ, ಚಿತ್ರಕಲೆ, ಯೋಗ, ಸಂಗೀತವನ್ನೆಲ್ಲ ಕಲಿಸಿಕೊಡುವ ಮೂಲಕ ಮುಂದಿನ ನಾಟಕಕ್ಕೆ ಅವರನ್ನು ಸಮರ್ಥ ರಂಗನಟರನ್ನಾಗಿ ಅಣಿಗೊಳಿಸತೊಡಗಿತು. ಹಗಲು - ರಾತ್ರಿಗಳೆಂಬ ವ್ಯತ್ಯಾಸವಿಲ್ಲದೆ ಬರಿ ಉಸಿರಿಗೆಂಬಂತೆ ದಿನದೂಡುತ್ತಿದ್ದ ಕೈದಿಗಳು ಈ ನಲವತ್ತೈದು ದಿನಗಳಲ್ಲಿ ಹಗಲು - ರಾತ್ರಿಗಳನ್ನು ಅರ್ಥೈಸಿಕೊಳ್ಳುವವರಾಗಿ ಸೆರೆಯಿಂದ ತೆರೆಯತ್ತ ಸರಿಯತೊಡಗಿದ್ದರು.

ವಿಕಸನ ವೇದಿಕೆ 'ಮಾರನಾಯಕ' ನಾಟಕದ ತಯಾರಿಗಾಗಿ ಸುಮಾರು ೪೫ ದಿನ ಮೈಸೂರು ಬಂದೀಖಾನೆಯೊಳಗಿದ್ದು, ಬಂದಿಗಳ ನಡುವೆ 'ಮಾನವತೆಯ ಸಿಂಚನ' ನಡೆಸಿ ಮನಪರಿವರ್ತನಾ ಕಾರ್ಯಕ್ರಮವನ್ನು ರೂಪಿಸಿತು. ಸೆರೆವಾಸಿಗಳು ಕ್ರೂರಿಗಳಲ್ಲ ; ಅವರು ಕಲಾವಿದರೂ ಹೌದು - ಕಲಾರಾಧಕರೂ ಹೌದು ಎಂಬಂತೆ ಕೈದಿಗಳು ತಮ್ಮೊಳಗಿನ ಅದ್ಭುತ ಶಕ್ತಿಯನ್ನು ಹೊರಚಿಮ್ಮಿ ಸಾಮೂಹಿಕ ಬದುಕಿಗೆ ಬೆಸೆದುಕೊಳ್ಳುವ ಕಾತುರ ವ್ಯಕ್ತಪಡಿಸಿದ್ದನ್ನು ವಿಕಸನ ವೇದಿಕೆ ಬಂದಿಖಾನೆ ಇಲಾಖೆಗೆ ಮನವರಿಕೆ ಮಾಡಿತು.

ಕುವೆಂಪುವಿನ 'ರಕ್ತಾಕ್ಷಿ' ನಾಟಕ (ಮೂಲ: ಶೇಕ್ಸ್‌ಪಿಯರ್‌ನ 'ಟೆಂಪೆಸ್ಟ್') ದಂತೆ ನಾಟಕ 'ಮಾರನಾಯಕ' ಕೂಡಾ ಶೇಕ್ಸ್‌ಪಿಯರ್‌ನ ನಾಟಕ 'ಮ್ಯಾಕ್‌ಬೆತ್'ನ ರೂಪಾಂತರ. ಆದರೆ ಅದು ಕನ್ನಡದ್ದೇ ಸ್ವಂತ ಕೃತಿ ಎನ್ನುವಷ್ಟು ಸಹಜವಾಗಿ ಹಾಗೂ ಗಟ್ಟಿಯಾಗಿ ರೂಪಾಂತರಿಸಿದ್ದ ಕನ್ನಡದ ಖ್ಯಾತಕವಿ - ನಾಟಕಕಾರ ಎಚ್.ಎಸ್. ಶಿವಪ್ರಕಾಶ್ ಅವರು, ಶೇಕ್ಸ್‌ಪಿಯರ್‌ನ ದುರಂತ ನಾಟಕಗಳ ಅಂತ್ಯದಲ್ಲಿ ಕೆಡುಕಿನದೇ ಮೇಲುಗೈ ಇರುವುದು ಹಾಗೂ ಅವುಗಳೇ ಶಕ್ತ ಪಾತ್ರಗಳಾಗಿರುವುದನ್ನು ಗಮನಿಸಿ, ತನ್ನ ರೂಪಾಂತರದಲ್ಲಿ ಕೈದಿಗಳ ಮನಪರಿವರ್ತನೆಯನ್ನು ಕೇಂದ್ರವಾಗಿರಿಸಿಕೊಂಡು ಭಾರತೀಯರ ಲೋಕನೀತಿಗನುಗುಣವಾಗಿ ನಾಟಕದಲ್ಲಿ ಬದಲಾವಣೆ ಮಾಡಿಕೊಂಡಿದ್ದರು. ನಿರ್ದೇಶಕರು ಕೂಡಾ ಸೂಕ್ಷ್ಮ ಸಂವೇದನೆಯುಳ್ಳ ಶೇಕ್ಸ್‌ಪಿಯರ್‌ನ ನಾಟಕಗಳನ್ನೇ ಆಯ್ದುಕೊಳ್ಳುವ ಮೂಲಕ ಅವು ಬಲು ಸೂಕ್ಷ್ಮವಾಗಿ ಕೈದಿಗಳ ಮನಸ್ಸಿನಾಳಕ್ಕೆ ಹೊಕ್ಕು ತಮ್ಮ ಕಾರ್ಯಸಾಧನೆ ಮಾಡಿ, ಅದು ಅಲ್ಲೊಂದು ಸ್ವಚ್ಛ ಮನಸ್ಸನ್ನು ರೂಪುಗೊಳಿಸುತ್ತದೆ ಎಂಬ ದೂರದೃಷ್ಟಿಯನ್ನು ಇರಿಸಿಕೊಂಡಿದ್ದರು.

ಕೈದಿಗಳನ್ನು ಬಂದಿಖಾನೆಯ ಉಸಿರುಗಟ್ಟಿಸುವ ವಾತಾವರಣದಿಂದ ಹೊರತಂದು ನಗರದ ಮಧ್ಯೆ ನಾಟಕ ಪ್ರಯೋಗ ನಡೆಸಲಾಯಿತು. ೯-೭-೯೯ರ ರಂದು ಬೆಂಗಳೂರಲ್ಲೂ ಈ ನಾಟಕ ಪ್ರದರ್ಶನ ನಡೆಯಿತು.

ಈ 'ಮಾರನಾಯಕ' ನಾಟಕದ ಸಂದೇಶವೂ 'ರಕ್ಷಾಕ್ತಿ'ಯದ್ದೇ. ರಾಜ್ಯದಾಹಿ ಮಾರನಾಯಕ ಒಬ್ಬ ವೀರಯೋಧ. ರಾಜ ಭದ್ರಪ್ಪನಾಯಕನನ್ನು ಕೊಂದು ಅಧಿಕಾರದ ಪಟ್ಟವೇರುತ್ತಾನೆ. ಆತನ ದುಷ್ಟ ಕೃತ್ಯಗಳಿಗೆ ಪೂರಕಳಾಗಿ ನಿಲ್ಲುವ ಪತ್ನಿಯ ಸಹಕಾರದಿಂದ ಒಂದರ ನಂತರ ಒಂದು ಕೊಲೆ ಮಾಡುತ್ತಲೇ ಹೋಗುತ್ತಾನೆ. ಕೊನೆಗೆ ಆ ಕೊಲೆಗಳ ಪಾಪ ಪ್ರಜ್ಞೆಯೇ ಅವರಿಬ್ಬರನ್ನೂ ಕಾಡತೊಡಗಿ ಪತ್ನಿ ಪಾಪಪ್ರಜ್ಞೆಯಿಂದ ತಪ್ಪಿಸಿಕೊಳ್ಳಲಾಗದೆ ನೇಣು ಹಾಕಿಕೊಳ್ಳುತ್ತಾಳೆ. ಮಾರನಾಯಕ ಪಾಪವನ್ನು ಹೊತ್ತು ಪ್ರಾಯಶ್ಚಿತ್ತಕ್ಕಾಗಿ ಕಾಡಿನಲ್ಲೆಲ್ಲ ಅಲೆದಾಡುತ್ತಿರುತ್ತಾನೆ. ಮಾಡಿದ ಪಾಪಕ್ಕೆ ಪಶ್ಚಾತ್ತಾಪ ಪಡುತ್ತ ಅಲೆದಾಡುವ ಮಾರನಾಯಕ ತನ್ನ ಪಾತ್ರದ ಮೂಲಕ ಅದು ಕೈದಿಗಳಿಗೆ ಕೊಡುವ ಸಂದೇಶವಂತೂ ಮಹತ್ತರವಾದುದು.

ವಿಕಸನ ವೇದಿಕೆಯ ಚಿಂತಕರು, ಕೈದಿಗಳ ಹಿತೈಷಿಗಳು, ಸೆರೆವಾಸದಿಂದ ಖಿನ್ನರಾದ ಬಂದಿಗಳ ಮನಸ್ಸಿಗೆ ಜ್ಞಾನದ ತಂಪೆರೆಯುವ ಮೂಲಕ ಬಂದಿಖಾನೆಯೊಳಗೆ ನಡೆಸಿದ ೪೫ ದಿನಗಳ ರಂಗತರಬೇತಿ ಕಮ್ಮಟದಿಂದ ಬಂದ ಅದ್ಭುತ ಪ್ರತಿಕ್ರಿಯೆಯನ್ನು ಗಮನಿಸಿದ ರಾಜ್ಯ ಬಂದಿಖಾನೆ ಇಲಾಖೆ ಈ ಪ್ರಯತ್ನವನ್ನು ಎಲ್ಲ ಕಡೆಯೂ ಹಮ್ಮಿಕೊಳ್ಳಲು ನಿರ್ಧರಿಸಿತು. ಬೆಂಗಳೂರು ಕೇಂದ್ರ ಬಂದಿಖಾನೆಯಲ್ಲೂ ನಾಟಕ ತರಬೇತಿ ಕಮ್ಮಟವೊಂದನ್ನು ನಡೆಸಿಕೊಡಲು 'ಮಾರನಾಯಕ' ನಾಟಕದ ನಿರ್ದೇಶಕರನ್ನು ಆಹ್ವಾನಿಸಲಾಯಿತು.

ಮೈಸೂರಿನ 'ಸಂಕಲ್ಪ' ವೇದಿಕೆಯ ಸಹಯೋಗದಲ್ಲಿ ಕರ್ನಾಟಕ ಬಂದಿಖಾನೆ ಇಲಾಖೆ ೪೫ ದಿನಗಳ ಕಲಾ ಕಾರ್ಯಾಗಾರ ಹಾಗೂ ನಾಟಕ ತರಬೇತಿ ಶಿಬಿರವನ್ನೂ ೨೦೦೦ ದ ಜೂನ್ ಮೊದಲ ವಾರದಲ್ಲಿ ಆಯೋಜಿಸಿತು. ಕಲಾ ಕಾರ್ಯಾಗಾರ ಹಾಗೂ ರಂಗತರಬೇತಿ ಶಿಬಿರದ ಆರಂಭದ ಮೊದಲ ದಿನವನ್ನೇ ಕೈದಿಯ ಮನಪರಿವರ್ತನೆಯ ಮೊದಲ ದಿನವೆಂಬಂತೆ, ಅವರಿಗೆ ರಂಗತರಬೇತಿ ಜತೆ ಯೋಗ, ಚಿತ್ರಕಲೆ, ಕಾಷ್ಠ ಮತ್ತು ಮಣ್ಣಿನ ಶಿಲ್ಪ, ಕಂಸಾಳೆಯನ್ನೂ ಕಲಿಸತೊಡಗಿ, ಅವರು ಆಡಬೇಕಾಗಿದ್ದ 'ಜುಂಡಿ ಶೇಷ ನಾಯಕ' ನಾಟಕದ ರಂಗಪರಿಕರಗಳನ್ನು ಅವರಿಂದಲೇ ನಿರ್ಮಿಸಿಕೊಳ್ಳಲಾಯಿತು.

೨೦೦೦ ಜುಲೈ ೨೫ ರಂದು ಬೆಂಗಳೂರು ಕೇಂದ್ರ ಬಂದಿಖಾನೆಯಿಂದ ಹೊರಬಂದ ಕೈದಿ ರಂಗನಟರು, ಮೈಸೂರು ಕೇಂದ್ರ ಬಂದಿಖಾನೆಯ ಬಂದಿಗಳ ಜತೆ ಸೇರಿ ಚೌಡಯ್ಯ ಸ್ಮಾರಕ ಭವನದಲ್ಲಿ 'ಜುಂಡಿ ಶೇಷ ನಾಯಕ' ನಾಟಕವನ್ನು ಪ್ರದರ್ಶಿಸುವ ಮೂಲಕ ನಾಟಕ ಮಾಧ್ಯಮ 'ಮನ ಪರಿವರ್ತನೆ'ಗೆ ಪ್ರಬಲ ಜ್ಞಾನಸಂವಹನ ಮಾಧ್ಯಮ ಎಂದು ಸಾಬೀತುಪಡಿಸಿದರು.

'ಜುಂಡಿ ಶೇಷ ನಾಯಕ' ನಾಟಕ ಶೇಕ್ಸ್‌ಪಿಯರ್‌ನ 'ಜೂಲಿಯಸ್ ಸೀಸರ್'ನ ರೂಪಾಂತರ. ಕನ್ನಡದ ವಾಸನೆಗೆ ತಕ್ಕಂತೆ ಎಸ್. ಭಗವಾನ್ ಅವರು ಇದನ್ನು ರೂಪಾಂತರಿಸಿದ್ದಾರೆ. 'ಪ್ರಜಾಪ್ರಭುತ್ವ' ಮತ್ತು 'ಸರ್ವಾಧಿಕಾರ' ಇವುಗಳ ನಡುವೆ ನಡೆಯುವ ನಿರಂತರ ಘರ್ಷಣೆಯೇ ಇದರ ತಿರುಳು. ಜುಂಡಿ ಶೇಷ ನಾಯಕ ಸರ್ವಾಧಿಕಾರಿಯಾಗಿ

ಬದಲಾಗುತ್ತಿರುವುದನ್ನು ಕಂಡ, ಪ್ರಜಾಪ್ರಭುತ್ವದಲ್ಲಿ ನಂಬಿಕೆಯುಳ್ಳ ಬೀರನಾಯಕ ಮತ್ತು ಕೆಂಬೀರಯ್ಯ ಇತರ ಹಲವು ಮಂದಿ ಪಿತೂರಿಕೋರರೊಳಗೂಡಿ ಶೇಷ ನಾಯಕನನ್ನು ಬಲಿ ತೆಗೆದುಕೊಳ್ಳುತ್ತಾರೆ. 'ಪ್ರಜಾಪ್ರಭುತ್ವದ ಪ್ರಜೆಗಳಿಗಾಗಿ ನಾವು ಬಲಿಗಾರರಾಗೋಣ ಕೊಲೆಗಾರರಾಗುವುದು ಬೇಡ' ಎಂದು ಘೋಷಿಸುತ್ತಾರೆ. ನಂತರದ ದಿನಗಳಲ್ಲಿ ಮತ್ತೊಬ್ಬ ಅಧಿಕಾರದಾಹಿ ಅಂದಾನಿಯ ಕೊಲೆ ಸಂಚಿಗೆ ಬೀರನಾಯಕ ಮತ್ತು ಕೆಂಬೀರಯ್ಯರಿಬ್ಬರೂ ಬಲಿಯಾಗಿ ಕೊನೆ ಉಸಿರು ಎಳೆಯುವಾಗ 'ಯಾವ ಮನುಷ್ಯನಿಗೂ ಪ್ರಾಣಕೊಡುವ ಶಕ್ತಿ ಇಲ್ಲವಾದ್ದರಿಂದ - ಯಾವ ಮನುಷ್ಯನ ಪ್ರಾಣ ತೆಗೆಯುವ ಹಕ್ಕೂ ನಮಗಿಲ್ಲ' ಎಂಬ ಉದ್ಗಾರ ಅವರಿಬ್ಬರಿಂದಲೂ ಹೊರಬರುತ್ತದೆ. ಈ ಉದ್ಗಾರ ಪ್ರತಿಯೊಬ್ಬ ಕೈದಿಯ ಅಂತರಾಳವನ್ನು ತಟ್ಟುವಂಥಾದ್ದು.

ರಾಜ್ಯ ಬಂದಿಖಾನೆ ಇಲಾಖೆ ಇದುವರೆಗೆ ಪ್ರಯೋಗಿಸಿದ್ದ ನಾಟಕಗಳ ರಂಗನಟರ ತಂಡದಲ್ಲಿ (ಕೈದಿಗಳು) ಯಾರೂ ಮೂಲತಃ ಕಲಾವಿದರಲ್ಲ. ಹಳ್ಳಿಯ ಮಾರಿ ಜಾತ್ರೆಗಳಲ್ಲಾಗುವ ನಾಟಕಗಳಲ್ಲಿ ಕೆಲವರು ನಟಿಸಿದ್ದುಂಟು. ಆದರೆ ಅವರು ನಾಟಕ ತರಬೇತಿ ಪಡೆದವರಲ್ಲ. ಆದರೆ ಇವರೆಲ್ಲರಿಗೂ ಇಲ್ಲಿ ಸೂಕ್ತ ರಂಗತರಬೇತಿ ಸಿಕ್ಕಿದೊಡನೆ, ಅವರ ಅಂತರಂಗದೊಳಗಿಂದ ಅಭಿನಯ ಸಾಮರ್ಥ್ಯವನ್ನು ಹೊರಹೊಮ್ಮಿಸಿದ ಪರಿಯಂತು ವೃತ್ತಿಪರ ರಂಗಭೂಮಿ ಕಲಾವಿದರನ್ನು ಮೀರಿಸುವಂತಿತ್ತು. ಈ ಮಾಧ್ಯಮವನ್ನು ಕೈದಿಗಳ ಮನಪರಿವರ್ತನೆಗೆ ಮಾತ್ರವಲ್ಲ ಅವರ ಮರುನೆಲೆಗೂ ಬಳಸುವ ಬಗ್ಗೆ ಮೈಸೂರಿನ ರಂಗಾಯಣ ಯೋಚಿಸುತ್ತಿದೆ.

ಆ ರಂಗತರಬೇತಿ ಕಾರ್ಯಾಗಾರದಲ್ಲಿ, ಕೈದಿಗಳು ಆವೆ ಮಣ್ಣಿನಲ್ಲಿ ತಮಗಿಷ್ಟ ಬಂದಂತೆ ಕಲಾಕೃತಿಗಳನ್ನು ತಿದ್ದಿ ರಚಿಸುವಂತೆ, ರಾಜ್ಯಬಂದಿಖಾನೆ ಇಲಾಖೆಯು ರಂಗನಿರ್ದೇಶಕರ ಮೂಲಕ ಎಲ್ಲಾ ಕೈದಿಗಳ ಮನಸ್ಸನ್ನು ತಮಗಿಷ್ಟ ಬಂದಂತೆ ತಿದ್ದಿ ಪರಿವರ್ತಿಸಿಕೊಳ್ಳುವ ಅವಕಾಶವಿತ್ತು. ಆದರೆ ಬಂದಿಖಾನೆ ಇಲಾಖೆ ಕೈದಿಗಳನ್ನು ಸೆರೆಯಿಂದ ತೆರೆಗೆ ತರುವ ಆ ಪ್ರಗತಿಪರ ಯೋಜನೆಯಲ್ಲಿ ಮಹಿಳಾ ಕೈದಿಗಳನ್ನು ಅಲಕ್ಷಿಸಿತು. ಮಹಿಳಾ ಕೈದಿಗಳಿಗೆ ಕನಿಷ್ಠ ಆ ನಾಟಕ ತರಬೇತಿ ನೋಡುವ ಅಥವ ರಂಗ ತರಬೇತಿ ಕಲಾ ಶಿಬಿರದಲ್ಲಿ ಪಾಲ್ಗೊಳ್ಳುವ ಅವಕಾಶವನ್ನೂ ಇಲಾಖೆ ನೀಡಲಿಲ್ಲ.

ಅಧ್ಯಯನದ ಕ್ಷೇತ್ರ ಕಾರ್ಯದ ವೇಳೆ ರಾಜ್ಯ ಬಂದಿಖಾನೆ ಇಲಾಖೆಯ ಮಹಾನಿರ್ದೇಶಕರಲ್ಲಿ ಕೇಳಿದ : 'ನಾಟಕವೆಂಬ ಜ್ಞಾನಸಂವಹನ' ಮಾಧ್ಯಮದ ಸದುಪಯೋಗ ಪಡೆಯಲು ಮಹಿಳಾ ಕೈದಿಗಳಿಗೇಕೆ ಅವಕಾಶವಿಲ್ಲ? ಇದುವರೆಗೆ ನಡೆದ ನಾಟಕಗಳಲ್ಲಿ ಮಹಿಳಾ ಪಾತ್ರಗಳಿಗೆ ಹವ್ಯಾಸಿ ರಂಗನಟಿಯರನ್ನು ಕರೆಸಿಕೊಂಡ ಉದ್ದೇಶವೇನು?' ಎಂಬ ಪ್ರಶ್ನೆಗೆ ಅವರಿಂದ ಬಂದ ಉತ್ತರ :

'ಪುರುಷ ಕೈದಿಗಳನ್ನು ಈ ನೂತನ ಪ್ರಯತ್ನಕ್ಕೆ ಇಳಿಸುವಾಗಲೆಲ್ಲ ಇಲಾಖೆ ಬಹಳ ಅಳುಕಿನಿಂದಲೇ ಸಾಕಷ್ಟು ಯೋಚಿಸಿದೆ. ಕೈದಿಯ ಭದ್ರತೆ, ಇಲಾಖಾ ನಿಯಮಗಳನ್ನು ಗಮನದಲ್ಲಿಟ್ಟುಕೊಂಡು, ಅದಕ್ಕೆ ಅವಶ್ಯಕವಾದ ಪೂರ್ವತಯಾರಿ, ಯೋಚನೆ, ಸಿದ್ಧತೆಯನ್ನು ಮಾಡಿಕೊಂಡು ಹೊಸ ಪ್ರಯೋಗಕ್ಕೆ ಅವಕಾಶ ನೀಡಬೇಕಾಗಿತ್ತು. ಸುಧಾರಣೆಯ ನೆಪದಲ್ಲಿ ಒಂದೇ ಏಟಿಗೆ ಸುಧಾರಣೆಯ ಹತ್ತು ಮೆಟ್ಟಿಲನ್ನೂ ಏರಹೋದರೆ ಅಪಾಯ, ಅಪಘಾತ ಕಟ್ಟಿಟ್ಟ ಬುತ್ತಿ. ಮೆಟ್ಟಿಲಿಂದ ಮೆಟ್ಟಿಲಿಗೆ ಏರುವ ಉದ್ದೇಶವಿರಿಸಿದ ಇಲಾಖೆ, ಮೊದಲ ನಾಟಕ ಪ್ರಯೋಗ

(ಬಳ್ಳಾರಿ 'ಕಾಲನೇಮ') ವನ್ನು ಬಂದಿಖಾನೆಯೊಳಗೆ ನಡೆಸಿದರೆ, ನಂತರದ ಪ್ರಯೋಗಗಳನ್ನು (ಮೈಸೂರು, ಬೆಂಗಳೂರಲ್ಲಿ) ಬಂದಿಖಾನೆಯ ಹೊರಗೆ ನಡೆಸುವ ಧೈರ್ಯ ತೋರಿತು. ಎರಡೂ ಪ್ರಯೋಗಗಳು ಯಶಸ್ವಿಯಾಗಿರುವ ಹಿನ್ನಲೆಯಲ್ಲಿ ಸದ್ಯದಲ್ಲೇ ಮಹಿಳಾ ಕೈದಿಗಳಿಗೂ ರಂಗತರಬೇತಿ ಕೊಡಿಸಿ, 'ನಾಟಕ' ಮಾಧ್ಯಮದ ಪರಿಚಯ ಮಾಡಿಸುವ ಯೋಚನೆಯಿದೆ. ಇದಕ್ಕೆ ಪೂರ್ವಭಾವಿಯಾಗಿ ಕೈದಿಗಳ ಭದ್ರತೆ ಹಾಗೂ ಇಲಾಖಾ ನಿಯಾಮಾವಳಿಗಳ ಬಗ್ಗೆ ಸಾಕಷ್ಟು ಚರ್ಚೆ ನಡೆಸಲಾಗಿದೆ' ಎಂಬ ಉತ್ತರ[೪](ಮಾತುಕತೆ ೨೮.೧೨.೨೦೦೦)

ಸದ್ಯದಲ್ಲೇ ಬೆಂಗಳೂರು ಕೇಂದ್ರ ಬಂದಿಖಾನೆಯ ಪುರುಷ ಕೈದಿಗಳು ಮತ್ತು ಮಹಿಳಾ ಕೈದಿಗಳು ಒಟ್ಟಾಗಿ 'ಮಾಧವಿ' (ಮೂಲ: ಬೀಷ್ಮ ಸಾಹ್ನಿ) ಎಂಬ ನಾಟಕವನ್ನು ಬೆಂಗಳೂರಿನ ರವೀಂದ್ರ ಕಲಾ ಕ್ಷೇತ್ರದಲ್ಲಿ ಪ್ರದರ್ಶಿಸಲಿದ್ದಾರೆ. ಈಗಾಗಲೇ (೨೦೦೨ ಜೂನ್ ೧೦ ರಿಂದ ಆರಂಭ) ಮೈಸೂರಿನ 'ಸಂಕಲ್ಪ' ವೇದಿಕೆಯ ಸಹಯೋಗದೊಂದಿಗೆ ಕರ್ನಾಟಕ ಬಂದಿಖಾನೆ ಇಲಾಖೆಯು, ನಿರ್ದೇಶಕ ಹುಲಗಪ್ಪ ಕಟ್ಟೀಮನಿ ಮತ್ತು ತಂಡದವರ ನಿರ್ದೇಶನದಡಿ ಸುಮಾರು ಎರಡು ತಿಂಗಳ ಕಲಾ ಕಾರ್ಯಾಗಾರ, ಮಹಿಳಾ ಸಮಾನತೆ - ಸಮಸ್ಯೆ ಬಗ್ಗೆ ಪರಸ್ಪರ ಮುಕ್ತ ಚರ್ಚೆ - ವಿಚಾರ ಸಂಕಿರಣ, ನಾಟಕ ತರಬೇತಿ ಶಿಬಿರವೊಂದನ್ನು ಬೆಂಗಳೂರು ಕೇಂದ್ರ ಬಂದಿಖಾನೆಯಲ್ಲಿ ಆಯೋಜಿಸಿದ್ದು, ಅದರ ಮುಕ್ತಾಯ ಕಾರ್ಯಕ್ರಮವಾಗಿ 'ಮಾಧವಿ' ನಾಟಕ ಪ್ರಯೋಗ ನಡೆಯಲಿದೆ. ಮಹಿಳಾ ಕೈದಿಗಳು ರಂಗತರಬೇತಿ ಶಿಬಿರದಲ್ಲಿ, ಕಲಾ ಕಾರ್ಯಾಗಾರದಲ್ಲಿ ಅತೀ ಉತ್ಸಾಹದಿಂದ ಪಾಲ್ಗೊಂಡ ರೀತಿಯಲ್ಲಿ ಅವರೂ ಹೊಸ ಆಲೋಚನೆ, ಹಾಗೂ ಹೊಸ ರೀತಿಯಲ್ಲಿ ಜ್ಞಾನವನ್ನು ಬರಮಾಡಿಕೊಳ್ಳಲು ಆಸಕ್ತರಾಗಿದ್ದಾರೆ ಎಂಬುದನ್ನು ಪ್ರತಿಬಿಂಬಿಸುತ್ತಿತ್ತು.

'ಮಾರನಾಯಕ' ನಾಟಕವನ್ನು ಫೆಬ್ರವರಿ ೨೦೦೦ ದಲ್ಲಿ ಕೇರಳದಲ್ಲಿ ನಡೆದ ಶೇಕ್ಸ್ ಪಿಯರ್ ನ ನಾಟಕಗಳ ರಾಷ್ಟ್ರೀಯ ನಾಟಕೋತ್ಸವದಲ್ಲಿ ಪ್ರದರ್ಶಿಸಿ ರಾಷ್ಟ್ರದ ಗಮನವನ್ನು ಸೆಳೆಯಲಾಯಿತು. 'ಮಾಧವಿ' ನಾಟಕವೂ 'ಮಾರನಾಯಕ' ನಾಟಕದಂತೆ ರಾಷ್ಟ್ರದ ಗಮನವನ್ನೇ ತನ್ನತ್ತ ಸೆಳೆದಿದೆ. ಕಾರಣ ಮಹಿಳಾ ಕೈದಿಗಳು, ಪುರುಷ ಕೈದಿಗಳ ಜತೆಗೂಡಿ ರಂಗಮಂಚವನ್ನೇರುವುದು ದೇಶದ ಇತಿಹಾಸದಲ್ಲೇ ಇದು ಪ್ರಥಮ. ರಾಜ್ಯ ಬಂದಿಖಾನೆ ಇಲಾಖೆ ಈ 'ನಾಟಕ' ವೆಂಬ ಜ್ಞಾನಸಂವಹನ ಮಾಧ್ಯಮಕ್ಕಾಗಿ ಯಾವುದೇ ರೀತಿಯ ಧನ ಸಹಾಯವನ್ನು ನೀಡುತ್ತಿಲ್ಲ. ಎಲ್ಲಾ ಖರ್ಚನ್ನು ಅನೇಕ ಸ್ವಯಂ ಸೇವಕ ಸಂಸ್ಥೆ (NGO) ಗಳು, ವ್ಯಾಪಾರಿ ಸಂಸ್ಥೆಗಳು ಭರಿಸುತ್ತಿವೆ. ಇಲಾಖೆಯಿಂದ ಕೇವಲ ಸಹಕಾರ, ಪ್ರೋತ್ಸಾಹವಷ್ಟೇ ಮೀಸಲು.

ರಾಷ್ಟ್ರೀಯ ಹಬ್ಬ ಹರಿದಿನಗಳಲ್ಲಿ ಬಂದಿಖಾನೆಯ ಕೈದಿಗಳೇ ನಾಟಕ ತಂಡಗಳನ್ನು ರಚಿಸಿ ತಾವೇ ನಾಟಕ ನಿರ್ದೇಶಿಸಿಕೊಂಡು ನಾಟಕವಾಡುವುದಿದೆ. ಆದರೆ ನಾಟಕದ ಸಂದೇಶ ಅಥವ ಸಾರವನ್ನು ಬಂದಿಖಾನೆ ಇಲಾಖೆಯ ಮಹಾನಿರೀಕ್ಷಕರು ಅಥವ ಆಯಾ ಬಂದಿಖಾನೆಗಳ ಅಧೀಕ್ಷಕರು ಪರಶೀಲಿಸಿದ ನಂತರ ನಾಟಕವಾಡಲು ಒಪ್ಪಿಗೆ ನೀಡಲಾಗುತ್ತದೆ. ಈಗಾಗಲೇ ಹಲವು ಮಂದಿ ಪ್ರಗತಿಪರ ಚಿಂತಕರು, ಪುರಾಣ, ದಂತಕತೆ ಅಥವ ಸಾಹಿತ್ಯದಿಂದ ಈ ಕೆಲವು ಆಯ್ದು ವಸ್ತುಗಳನ್ನು ಆರಿಸಿ (ಮನಪರಿವರ್ತನೆಗೆ ಸಂಬಂಧಿಸಿದಂತೆ) ನಾಟಕಗಳ ಮೂಲಕ ಆ ಸಂದೇಶವನ್ನು ಕೈದಿಗಳಿಗೆ ತಲುಪಿಸಲು ಆಸಕ್ತರಾಗಿದ್ದಾರೆ.

೧. ರಾಕ್ಷಸೀ ಗುಣದ ಅಂಗುಲಿಮಾಲನ ಕ್ರೌರ್ಯವನ್ನು, ಆತನ ಅಪಕ್ವ ಮನಸ್ಸನ್ನು ತನ್ನ ಪ್ರಬುದ್ಧ ಚಿಂತನೆಯಿಂದ ಪರಿಪಕ್ವಗೊಳಿಸಿ ಆತನಲ್ಲಿ ಜ್ಞಾನದ ದೀವಿಗೆ ಬೆಳಗಿ ಆತನ ಮನಪರಿವರ್ತಿಸಿದ ಮಾನವತಾವಾದಿ ಬುದ್ಧನ ಪ್ರಸಂಗವನ್ನು ಕೆಲವರು ನಾಟಕದ ವಸ್ತುವನ್ನು ಆರಿಸಿಕೊಂಡರೆ, ಮತ್ತೆ ಕೆಲವರು

೨. ಫ್ರೆಂಚ್ ಕಾದಂಬರಿಕಾರ ವಿಕ್ಟರ್ ಹ್ಯೂಗೋನ 'ಲೆ ಮಿಸರೇಬಲ್' (Les Miserable) ಕೃತಿಯಲ್ಲಿ ಕಥಾನಾಯಕ ಜೀನ್ ವಾಲ್ ಜೀನ್ ಮನಪರಿವರ್ತನೆಗೊಳ್ಳುವ ಬಗೆಯನ್ನು ನಾಟಕ ರೂಪದಲ್ಲಿ ಕೈದಿಗಳೆದುರಿಡಲು ಪ್ರಯತ್ನಿಸಿದ್ದಾರೆ. ಈ ಕಾದಂಬರಿಯ ವಸ್ತು : ಕಥಾನಾಯಕ ಜೀನ್ ವಾಲ್ ಜೀನ್ ಹಸಿದಿರುವ ತಂಗಿಮಕ್ಕಳಿಗಾಗಿ ಬ್ರೆಡ್ ಕೊಂಡುಕೊಳ್ಳಲು ಚರ್ಚ್‌ನಿಂದ ಎರಡು ಬೆಳ್ಳಿಯ ಕ್ಯಾಂಡಲ್‌ಸ್ಟಿಕ್ಸ್‌ನ್ನು ಕಳವು ಮಾಡಿ ಬ್ರೆಡ್ ಕೊಂಡುಕೊಳ್ಳುವಾಗ ಪೊಲೀಸರ ಕೈಗೆ ಸಿಕ್ಕಿಹಾಕಿಕೊಳ್ಳುತ್ತಾನೆ. ಪೊಲೀಸರು ಆತನನ್ನು ಚರ್ಚ್‌ನ ಮುಖ್ಯ ಗುರುಗಳ (ಬಿಷಪ್) ಬಳಿ ಕರೆತರುವಾಗ, ಮುಖ್ಯ ಗುರು 'ಆತ ಅದನ್ನು ಕದಿಯಲಿಲ್ಲ, ನಾನೇ ಅದನ್ನು ಕೊಟ್ಟೆ' ಎಂದಂದ ಕೂಡಲೇ ಜೀನ್ ವಾನ್ ಜೀನ್ ಪಶ್ಚಾತ್ತಾಪದಿಂದ ಮುದುರುತ್ತಾನೆ. ಆತನ ಕಳ್ಳ ಮನಸ್ಸು ಪರಿವರ್ತನೆಗೊಳ್ಳುತ್ತದೆ. ಕಥೆ ಮುಂದುವರಿಯುತ್ತದೆ...

೩. ಮತ್ತೆ ಕೆಲವರು ಉತ್ತರ ಕರ್ನಾಟಕದ ಬಂದಿಖಾನೆಗಳಲ್ಲಿ ಆಡಿಸಬೇಕೆಂದಿರುವ ನಾಟಕದ ವಸ್ತು ಹೀಗಿದೆ:

ಒಂದು ದಿನ ಭಕ್ತಿ ಭಂಡಾರಿ ಬಸವಣ್ಣನನ್ನು ಅಪಹರಿಸಿ ಕೊಂಡೊಯ್ಯಲು ಅವರ ಅರಮನೆಗೆ ಏಳು ಮಂದಿ ಕಳ್ಳರ ದಂಡು ಬಂತು. ಕಳ್ಳರು ಹಣೆಗೆ ವಿಭೂತಿಯನ್ನಿಟ್ಟು, ರುದ್ರಾಕ್ಷಿಗಳನ್ನು ತೊಟ್ಟುಕೊಂಡು, ಕಪ್ಪು ಬಣ್ಣದ ಗುಂಡನೆಯ ಎಳೆಯ ಬದನೆಕಾಯಿಗಳನ್ನು ಲಿಂಗಗಳೆಂದು ಕಂಠವಸ್ತ್ರದಲ್ಲಿ ಕಟ್ಟಿದ್ದರು. ಒಳಗೆ ಕಪಟ ತುಂಬಿಕೊಂಡು ಹೊರಗೆ ಮೈಗೆಲ್ಲ ವಿಭೂತಿ ಬಳಿದುಕೊಂಡಿದ್ದ ಅವರು ಕಳ್ಳ ಬೆಳ್ಳಿಗೆ ಚಿನ್ನದ ಮುಲಾಮು ಕೊಟ್ಟಂತಿದ್ದರು. ಅವರೆಲ್ಲ ಈ ರೀತಿಯ ವೇಷ ಕಟ್ಟಿ ಬಸವಣ್ಣನವರ ಮನೆಯ ದಾಸೋಹದ ಶರಣ ಸಮೂಹದಲ್ಲಿ ಸೇರಿ ಉಂಡು, ಎಲ್ಲೋ ಅವಿತಿದ್ದು, ಇರುಳಲ್ಲಿ ಬಸವಣ್ಣನವರ ಮಲಗುವ ಮನೆಗೆ ಕನ್ನಹಾಕಿ ಅವರನ್ನು ತೊಡರಿಕೊಂಡೇ ಮುಂದೆಹೋದರು. ಮಲಗಿದ್ದ ಬಸವಣ್ಣ ಎಚ್ಚೆತ್ತು ಕಳ್ಳರನ್ನು ಕಂಡು 'ಶರಣು ಶರಣಾರ್ಥಿಯೇ ನನ್ನೊಡೆಯರೆ' ಎಂದು ಅವರ ಪಾದಗಳಿಗೆ ನಮಸ್ಕರಿಸಿದರು. ಒಡನೆಯೇ ಕಳ್ಳರ ಹೃದಯ ಪರಿವರ್ತನೆಯಾಯಿತು. ಪಶ್ಚಾತ್ತಾಪ ಎದೆತುಂಬಿ ಮೂಡಿಬಂದು ಕೈಯಲ್ಲಿದ್ದ ಆಯುಧಗಳನ್ನು ಅತ್ತೆಸೆದು ಬಸವಣ್ಣನವರಲ್ಲಿ ಕ್ಷಮೆಯಾಚಿಸಿ ಅವರ ಪ್ರಿಯ ಶಿಷ್ಯರಾಗುತ್ತಾರೆ. ಇಲ್ಲೂ ಹೃದಯ ಪರಿವರ್ತನೆಯು ನಾಟಕದ ಮುಖ್ಯ ಆಶಯವಾಗಿದೆ.

೩. ಸಂಸ್ಕೃತದ ಮಹಾಕವಿ ಭಾರವಿಯ ಜೀವನ ವೃತ್ತಾಂತವೊಂದು ನಾಟಕದ ವಸ್ತುವಾಗಲು ಹಾತೊರೆಯುತ್ತಿದೆ :

ಭಾರವಿ ಕಡುಬಡತನದಿಂದ ನೆಲಕಚ್ಚುವ ಸ್ಥಿತಿಯಲ್ಲಿರುತ್ತಾನೆ. ಬಡತನದ ಬಗ್ಗೆ ಎಚ್ಚರವಹಿಸದೆ ಸದಾ ತನ್ನ ಕಾವ್ಯಾಸಕ್ತಿಯಲ್ಲೇ ಮಗ್ನನಾಗಿರುವುದನ್ನು ಸಹಿಸದ ಆತನ ಹೆಂಡತಿ ಆತನನ್ನು ಸದಾ ದೂಷಿಸುತ್ತಿರುತ್ತಾಳೆ. ಒಂದು ದಿನ ಆತ ತಾಳ್ಮೆಗೆಟ್ಟು ಮನೆಬಿಟ್ಟು ಹೊರಟು, ದಾರಿಯಲ್ಲಿ ಆಯಾಸ ಪರಿಹರಿಸಲೆಂದು ಸರೋವರದ ತಟದಲ್ಲಿವಿರಮಿಸುತ್ತ, ಕಾಲಹರಣಕ್ಕಾಗಿ ಕಮಲಪತ್ರ (ಎಲೆ)ದ ಮೇಲೆ ಪದ್ಯವೊಂದನ್ನು ಬರೆದಿಡುತ್ತಾನೆ.

'ಯಾವೊಬ್ಬನೂ ಹಿಂದುಮುಂದು ಯೋಚಿಸದೆ ಯಾವುದೇ ಕಾರ್ಯಕ್ಕೆ ಕೈಹಾಕಬಾರದು. ಸರಿಯಾಗಿ ತಿಳಿಯದೇ ಮಾಡಿದ ಕಾರ್ಯ ಬಹುದೊಡ್ಡ ಕೇಡಿಗೆ ಕಾರಣವಾಗುತ್ತದೆ. ಸಂಪತ್ತು - ಸದ್ಗುಣಿಯನ್ನು ಮಾತ್ರವೇ ಅಪೇಕ್ಷಿಸುತ್ತದೆ ಮತ್ತು ಪೂರ್ವವಿಮರ್ಶೆ ಮಾಡಿ ಕಾರ್ಯ ಕೈಗೊಳ್ಳುವವನ್ನು ಸಂಪತ್ತು ತಾನಾಗಿಯೇ ಸೇರುತ್ತದೆ' ಎಂಬುದು ಆ ಪದ್ಯದ ಸಾರ.

ಅದೇ ಸಮಯಕ್ಕೆ ಸರಿಯಾಗಿ ಆ ದೇಶದ ರಾಜನು ಬೇಟೆಗೆಂದು ಹೊರಟು ಆ ಹಾದಿಯಲ್ಲಿದ್ದ ಸರೋವರಕ್ಕೆ ಬಂದು, ಭಾರವಿ ಬರೆದ ಪದ್ಯವನ್ನೋದಿ ಆಹ್ಲಾದಗೊಳ್ಳುತ್ತಾನೆ. ಸಾಹಿತ್ಯಪ್ರೇಮಿಯಾದ ಆ ರಾಜ ಆ ಕವಿಶ್ಲೋಕ (ಪದ್ಯ) ವನ್ನು ಸುವರ್ಣಾಕ್ಷರದಲ್ಲಿ ತನ್ನ ಶಯ್ಯಾಗಾರದ ಬಿತ್ತಿಯ ಮೇಲೆ ಬರೆಯಿಸುತ್ತಾನೆ. ಕಾಲ ಉರುಳುತ್ತದೆ. ಒಂದು ದಿನ ಅರಸು ಬೇಟೆಯ ಅಪೇಕ್ಷೆಯಿಂದ ಅರಮನೆ ತೊರೆಯುತ್ತಾನೆ. ಆದರೆ ಬೇಟೆ ಮುಗಿಸದೆ ಅನಿರೀಕ್ಷಿತವಾಗಿ ಅರಮನೆಗೆ ಹಿಂದಿರುತ್ತಾನೆ. ಅಲ್ಲಿ ಆತ ಕಲ್ಪನಾತೀತವಾದ ದೃಶ್ಯವೊಂದನ್ನು ಕಾಣುತ್ತಾನೆ. ತನ್ನ ಪಟ್ಟದರಸಿಯ ಪಕ್ಕದಲ್ಲಿ ಯುವಕನೊಬ್ಬ ಪವಡಿಸಿದ್ದಾನೆ. ಕೋಪೋದ್ರೇಕಕ್ಕೆ ಬಲಿಯಾದ ಅರಸ ವಿವೇಚನೆಯನ್ನು ಕಳೆದುಕೊಂಡು, ಆ ಯುವಕನನ್ನು, ಪತಿತೆ ಪಟ್ಟದರಸಿಯನ್ನು ಒಂದೇ ಏಟಿನಿಂದ ಕತ್ತರಿಸಲು ಒರೆಯಿಂದ ಖಡ್ಗವನ್ನು ಎಳೆಯುವಷ್ಟರಲ್ಲಿ ರಾಜನ ದೃಷ್ಟಿ ಶಯನಾಗೃಹದ ಬಿತ್ತಿಯ ಮೇಲಿದ್ದ ಸುವರ್ಣಾಕ್ಷರದ ಭಾರವಿಯ ಪದ್ಯದ ಮೇಲೆ ಹರಿಯುತ್ತದೆ. ಆ ಅಕ್ಷರಗಳು ರಾಜನ ಕೋಪವನ್ನು ತಣಿಸುತ್ತವೆ. ಮಲಗಿದ್ದ ಪಟ್ಟದರಸಿ ನಿದ್ದೆಯಿಂದ ತಟ್ಟನೆ ಎದ್ದು, ರಾಜನ ಆಗಮನವನ್ನು ಕಂಡು ಆನಂದದಿಂದ ತಮ್ಮ ರಾಜಕುಮಾರನ ಆಗಮನದ ಬಗ್ಗೆ ತಿಳಿಸುತ್ತಾಳೆ. ಆ ಯುವಕ ಬೇರೆ ಯಾರೂ ಆಗಿರದೆ ರಾಣಿಯ ಔರಸ ಪುತ್ರನೇ ಆಗಿದ್ದು, ಎಷ್ಟೋ ವರ್ಷಗಳ ಹಿಂದೆ ಜನನ ಕಾಲದಲ್ಲಿ ಸೂಲಗಿತ್ತಿಯಿಂದ ಅಪಹೃತನಾಗಿ, ಆ ಮಗು ದೊಡ್ಡವನಾಗಿ, ಹಿಂದಿನ ದಿನ ಮಾತ್ರವೇ ಪತ್ತೆಯಾದ ಸುದ್ದಿಯನ್ನು ರಾಣಿ ಹೇಳುತ್ತಾಳೆ. ರಾಜ ತಟ್ಟನೆ ಪದ್ಯದ ಕರ್ತೃವಿಗೆ ಕೃತಜ್ಞತೆ ಸಲ್ಲಿಸಿ, ಅವನನ್ನು ಕರೆಸಿ ಗೌರವಿಸುತ್ತಾನೆ.

೪. ಮತ್ತೆ ಕೆಲವರು ಏಸುಕ್ರಿಸ್ತನ ನೀತಿಬೋಧನೆಯ ಪ್ರಸಂಗವೊಂದನ್ನು ನಾಟಕದ ವಸ್ತುವನ್ನಾಗಿ ಆಯ್ಕೆ ಮಾಡಿಕೊಂಡು ನಾಟಕ ಆಡಿಸಲು ಪ್ರಯತ್ನಿಸಿದ್ದಾರೆ : ಒಮ್ಮೆ ಏಸುವು ಒಂದು ಓಲಿವ್ ಗುಡ್ಡದಲ್ಲಿ ಜನರಿಗೆ ಬೋಧಿಸುತ್ತಿರುವಾಗ ಧರ್ಮಶಾಸ್ತ್ರಿಗಳು, ಫರಿಸಾಯರೂ ಒಬ್ಬ ಹೆಂಗಸನ್ನು ಅಲ್ಲಿಗೆ ಕರೆತರುತ್ತಾರೆ. ಆಕೆ ಹಾದರ ಮಾಡುವಾಗಲೇ ಸಿಕ್ಕಿಬಿದ್ದವಳು. ಆಕೆಯನ್ನು ಕಲ್ಲಲ್ಲಿ ಹೊಡೆದು ಸಾಯಿಸಬೇಕೆಂಬುದು ತಮ್ಮೆಲ್ಲರ ಅಭಿಪ್ರಾಯವೆಂದು ಧರ್ಮಶಾಸ್ತ್ರಿಗಳು ಹೇಳುತ್ತಾ ಏಸುವಿನ ಅಭಿಪ್ರಾಯವನ್ನು ನಿರೀಕ್ಷಿಸುತ್ತಾರೆ. ಆಗ ಏಸುವು 'ನಿಮ್ಮಲ್ಲಿ ಪಾಪ ಮಾಡದವನು ಯಾವನೋ ಅವನು ಇವಳಿಗೆ ಮೊದಲನೆಯ ಕಲ್ಲು ಬೀಸಲಿ' ಎಂದು ಹೇಳಿ ಸುಮ್ಮನಾಗುತ್ತಾರೆ. ಇದನ್ನು ಕೇಳಿದ್ದೇ ತಡ ಎಲ್ಲರೂ ಅಲ್ಲಿಂದ ತೆಪ್ಪಗೆ ಕಾಲುಕೀಳುತ್ತಾರೆ. ಅಲ್ಲಿ ಉಳಿದವರು ಏಸು ಮತ್ತು ಆ ಹೆಂಗಸು ಮಾತ್ರ. ಆ ಹೆಂಗಸಿಗೂ ತನ್ನ ತಪ್ಪಿನ ಅರಿವಾಗಿ ತನ್ನನ್ನು ಪರಿವರ್ತಿಸಿಕೊಳ್ಳುತ್ತಾಳೆ. ಒಂದಲ್ಲ ಒಂದು ರೀತಿಯಲ್ಲಿ ಪಾಪ, ಅಪರಾಧ ಎಸಗದವರು ಯಾರೂ ಇಲ್ಲ ಎಂದು ಹೇಳುತ್ತಲೇ ಅಪರಾಧವನ್ನು ನೋಡುವ ದೃಷ್ಟಿ - ಶಿಕ್ಷಿಸುವಾತನಿಗಿರಬೇಕಾದ ನೈತಿಕತೆಯ ಬಗ್ಗೆ ಈ ನಾಟಕವು ಸಂದೇಶ ನೀಡುತ್ತದೆ.

ಬೆಳಗಾವಿ ಕೇಂದ್ರ ಬಂದಿಖಾನೆಯಲ್ಲಿ ಕಳೆದ ವರ್ಷ (೨೦೦೦) 'ಕಲಿತ ಕಳ್ಳ' ಎಂಬ ನಾಟಕವನ್ನು ದಸರದಂದು ಪ್ರದರ್ಶಿಸಿದ್ದರೆ, ಈ ಬಾರಿ 'ವೀರ ಸಿಂಧೂರ ಲಕ್ಷ್ಮಣ' ಎಂಬ ನಾಟಕ ಕೈದಿಗಳಿಂದ ಪ್ರದರ್ಶಿತವಾಗಲಿದೆ. ಗುಲ್ಬರ್ಗ ಕೇಂದ್ರ ಬಂದಿಖಾನೆಯಲ್ಲೂ ಸದ್ಯದಲ್ಲೇ 'ಸಾಹೇಬರು ಬರುತ್ತಾರೆ' ಎಂಬ ನಾಟಕ ಪ್ರದರ್ಶನಗೊಳ್ಳಲಿದೆ. ನಾಟಕ ತರಬೇತಿ ನಡೆಯುತ್ತಿದೆ (೧೦.೩.೨೦೦೧ರ ಕ್ಷೇತ್ರಕಾರ್ಯದ ಮಾಹಿತಿಯಂತೆ).

## ೨. ಆಧುನಿಕ ಜ್ಞಾನ ಸಂವಹನ ಮಾಧ್ಯಮ

ವಿಜ್ಞಾನ ಮತ್ತು ತಂತ್ರಜ್ಞಾನದಲ್ಲಿ ಪ್ರಗತಿ ಸಾಧನೆಯಾದಂತೆ, ಆಧುನಿಕ ತಂತ್ರಜ್ಞಾನವುಳ್ಳ ಸಂವಹನ ಮಾಧ್ಯಮಗಳು ಆವಿಷ್ಕಾರಗೊಂಡು ಜಗತ್ತನ್ನು ಕಿರಿದು ಮಾಡ ಹೊರಟಿವೆ. ಜಗತ್ತಿನ ಒಂದು ಮೂಲೆಯಲ್ಲಿ ಉಗಮಿಸಿದ ಜ್ಞಾನವನ್ನು ಕ್ಷಣಮಾತ್ರದಲ್ಲಿ ಹಾಗು ಏಕಕಾಲದಲ್ಲಿ ಜಗತ್ತಿನೆಲ್ಲೆಡೆಯ ಅಸಂಖ್ಯಾತ ಮಂದಿಗೆ ತಲಪಿಸುವುದು ಈ ಆಧುನಿಕ ಜ್ಞಾನ ಸಂವಹನ ಮಾಧ್ಯಮದ ವೈಶಿಷ್ಟ್ಯತೆ.

ಬಂದಿಖಾನೆಯಲ್ಲಿ ಆರಾಳು ಎತ್ತರದ ಆವರಣಗೋಡೆ ಇರುವುದೇ ಕೈದಿಗಳನ್ನು ಬಾಹ್ಯ ಪ್ರಪಂಚದ ಜ್ಞಾನ - ವರ್ತಮಾನಗಳಿಂದ ಬೇರ್ಪಡಿಸುವುದಕ್ಕಾಗಿ ಎಂದು ಬಂದಿಖಾನೆ ಆಡಳಿತ ವರ್ತಿಸುತ್ತಿದ್ದ ಕಾಲವೊಂದಿತ್ತು. ಅದು ಸ್ವಾತಂತ್ರ್ಯಪೂರ್ವ ಕಾಲ.

'೧೯೪೨ ರಲ್ಲಿ ಅಹಮ್ಮದ್ ಕೋಟೆಯ ಸೆರೆಮನೆಯಲ್ಲಿದ್ದ ಪಂಡಿತ ನೆಹರೂ ಅವರು, ಈ ಬಾಹ್ಯ ಪ್ರಪಂಚದ ವಾರ್ತೆಯೆಂಬುದು ಸಚೇತನವಾಗಿ, ಸಜೀವವಾಗಿ, ಸಾವಿಗೆ ತುತ್ತಾಗಿರುವ ಒಂದು ಕನಸಿನ ಕಲ್ಪನೆಯಂತಿದೆ ಎಂದು ತಮ್ಮ 'ಡಿಸ್ಕವರಿ ಆಫ್ ಇಂಡಿಯಾ' ಗ್ರಂಥದ 'ಅಹಮ್ಮದ್ ನಗರ ಕೋಟೆ' ಎಂಬ ಅಧ್ಯಾಯದಲ್ಲಿ

ಹೇಳಿಕೊಂಡಿದ್ದಾರೆ. 'ಮೂರು ವಾರಗಳು ಪ್ರಪಂಚದ ಯಾವ ಸಮಾಚಾರವೂ ಇಲ್ಲದೆ ಈ ಸೆರೆಮನೆಯಲ್ಲಿ ದಿನ ಕಳೆದುಹೋದವು. ಭೇಟಿಗಳು, ಕಾಗದ ಪತ್ರಗಳು, ವೃತ್ತ ಪತ್ರಿಕೆಗಳು, ರೇಡಿಯೋದ ವಾರ್ತೆ - ಈ ಯಾವುದರ ಸಂಬಂಧವೂ ಇಲ್ಲದೆ, ಹೊರ ಜಗತ್ತಿನಿಂದ ನಾವು ಸಂಪೂರ್ಣ ಬೇರ್ಪಟ್ಟೆವು ಎಂದು ಆ ಕಾಲದ (೧೯೪೨ ರ) ಬಂದಿಖಾನೆಯ ಚಿತ್ರಣವನ್ನು ನೆಹರೂ ಅವರು ಮೇಲೆ ಉಲ್ಲೇಖಿತ ಗ್ರಂಥದಲ್ಲೇ ಕಟ್ಟಿಕೊಟ್ಟಿದ್ದಾರೆ.[೨೫]

ಆದರೆ ಸ್ವಾತಂತ್ರ್ಯಾನಂತರದ ದಿನಗಳಲ್ಲಿ ನಮ್ಮ ಬಂದಿಖಾನೆಗಳ ಪರಿಸ್ಥಿತಿ ಈ ನಿಟ್ಟಿನಲ್ಲಿ ಸಾಕಷ್ಟು ಸುಧಾರಿಸಿದೆ. ಬಂದಿಖಾನೆಯೊಳಗೆ ಆಧುನಿಕ ಜ್ಞಾನಸಂವಹನ ಮಾಧ್ಯಮಗಳು ಪ್ರವೇಶ ಪಡೆದ ನಂತರವಂತೂ ಕೈದಿಗಳ ಮನಸ್ಥಿತಿಯಲ್ಲಿ ಮಹತ್ವದ ಬದಲಾವಣೆಗಳಾದವು. ರಾಜ್ಯದ ಬಂದಿಖಾನೆಗಳನ್ನೊಳಗೊಂಡಂತೆ, ಭಾರತದ ಬಂದಿಖಾನೆಯೊಳಗೆ ಮೊದಲು ಪ್ರವೇಶ ಪಡೆದ ಮಾಧ್ಯಮವೆಂದರೆ ರೇಡಿಯೋ, ನಂತರ ದೂರದರ್ಶನ, ಇತ್ತೀಚಿಗೆ ಕಂಪ್ಯೂಟರ್ ಮಾಧ್ಯಮ.

ಅಖಿಲ ಭಾರತ ಬಂದಿಖಾನೆ ಕೈಪಿಡಿ ಸಮಿತಿ (೧೯೫೭ - ೫೯) ಯ ಶಿಫಾರಸುಗಳಲ್ಲಿ 'ಕೈದಿಗಳಿಗೆ ವ್ಯಾಪ್ತಿ ಹಾಗೂ ವೈವಿಧ್ಯಗಳೆರಡರಲ್ಲೂ ಸಾಕಷ್ಟು ವಿಪುಲವಾದ ಜ್ಞಾನಪೂರಕವಾದ ಮನೋರಂಜಕ ಹಾಗೂ ಸಾಂಸ್ಕೃತಿಕ ಚಟುವಟಿಕೆಗಳನ್ನು ಒದಗಿಸುವುದರ ಜತೆಗೆ ಚಲನಚಿತ್ರ ಸಂಗ್ರಹಾಲಯ ಸೇವೆ, ಬಾನುಲಿ, ಧ್ವನಿಮುದ್ರಿತ ಸಂಗೀತ, ಸಮೂಹಗಾನ, ಜಾನಪದ ನೃತ್ಯ ಇತ್ಯಾದಿಗಳ ವ್ಯವಸ್ಥೆಗಳನ್ನು ಬಂದಿಖಾನೆ ಆಡಳಿತ ಒದಗಿಸತಕ್ಕದ್ದು' ಎಂಬ ಶಿಫಾರಸು ತುಂಬ ಪ್ರಮುಖವಾದುದು.

ಕೇಂದ್ರ ಸರಕಾರ ನೇಮಿತ ಭಾರತೀಯ ಬಂದಿಖಾನೆ ಸುಧಾರಣಾ ಸಮಿತಿ, ೧೯೮೦ - ೮೩ (ಮುಲ್ಲಾ ಸಮಿತಿ) ಕೂಡಾ ಬಂದಿಖಾನೆಗಳಲ್ಲಿ ಆಧುನಿಕ ಜ್ಞಾನ ಸಂವಹನಾ ಮಾಧ್ಯಮದ ಅಗತ್ಯ ಹಾಗೂ ಅದನ್ನು ತಕ್ಷಣ ಅಳವಡಿಸುವ ಬಗ್ಗೆ ಶಿಫಾರಸು ಮಾಡಿದೆ. ಕೇಂದ್ರ ಸರಕಾರದ ಗೃಹಸಚಿವಾಲಯ ಈ ಎಲ್ಲ ಶಿಫಾರಸುಗಳನ್ನು ಗಮನದಲ್ಲಿರಿಸಿಕೊಂಡು, ಇದೀಗ ಪಂಚವಾರ್ಷಿಕ ಯೋಜನೆಯಡಿ ಭಾರತೀಯ ಬಂದಿಖಾನೆಗಳಿಗೆ 'ಬಂದಿಖಾನೆ ಆಡಳಿತ ಆಧುನೀಕರಣ ಯೋಜನೆ' ಗೆ ಧನಸಹಾಯ ನೀಡುವಾಗ, ಎಲ್ಲ ಬಂದಿಖಾನೆಗಳಲ್ಲೂ ಆಧುನಿಕ ಜ್ಞಾನಸಂವಹನಾ ಮಾಧ್ಯಮಗಳನ್ನು ಅಳವಡಿಸತಕ್ಕದ್ದು ಎಂದು ಷರತ್ತು ಒಡ್ಡಿದೆ. ಈ ಎಲ್ಲ ಪ್ರಯತ್ನಗಳ ಫಲವಾಗಿ ರಾಜ್ಯದ ಬಂದಿಖಾನೆಗಳಲ್ಲಿ ರೇಡಿಯೋ, ಟು ಇನ್ ಒನ್ (ಸ್ಪೀಕರ್ ಅಟ್ಯಾಚ್ಡ್), ಪಬ್ಲಿಕ್ ಅಡ್ರೆಸಿಂಗ್ ಸಿಸ್ಟಮ್,ದೂರದರ್ಶನ, ಕಂಪ್ಯೂಟರ್‌ಗಳು ತಳವೂರಲು ಸಾಧ್ಯವಾಯಿತು.

### ೨.೧ ರೇಡಿಯೋ

ಈ ಮಾಧ್ಯಮ ಕೇವಲ ಧ್ವನಿಯಿಂದಲೆ ಬಹುಜನರ ಮನಸ್ಸನ್ನು ಸೂರೆಗೊಳ್ಳುವ ಶ್ರವ್ಯ ಮಾಧ್ಯಮ. ಈ ಶ್ರವ್ಯ ಮಾಧ್ಯಮ ಭಾರತಕ್ಕೆ ತಂತ್ರಜ್ಞಾನ ದೃಷ್ಟಿಯಿಂದ ಹೊಸತು ವಿನಾ ಈ ರೀತಿಯ ಶ್ರವ್ಯ ಸಂವಹನ ಭಾರತೀಯರಿಗೇನೂ ಹೊಸತಲ್ಲ. ಭಾಗವತ, ರಾಮಾಯಣ, ಮಹಾಭಾರತ, ಪುರಾಣವಾಚನದಂತ ಮೌಖಿಕ ಪರಂಪರೆಯ ಶ್ರವ್ಯ ಸಂವಹನ ಪೂರ್ವಕಾಲದಲ್ಲೇ ಚಾಲ್ತಿಯಲ್ಲಿತ್ತು. ಈ ರೀತಿಯ ಶ್ರವ್ಯ ಸಂವಹನದ

ರೂಢಿಯಲ್ಲಿದ್ದ ಭಾರತೀಯ ಶ್ರೋತೃಗಳು, ಧ್ವನಿಯೇ ಜೀವಾಳವಾದ ರೇಡಿಯೋ ಮಾಧ್ಯಮವನ್ನು ಮುಕ್ತವಾಗಿ ಸ್ವಾಗತಿಸಿದರು.

ಉತ್ತಮ ಭಾಷೆ, ಧ್ವನಿಯನ್ನೇ ಹೃದಯವಾಗಿಟ್ಟುಕೊಂಡು, ಜ್ಞಾನದ ಜತೆ ಮನರಂಜನೆಯನ್ನೂ ಬಿತ್ತರಿಸುವ ಮೂಲಕ ಸಾಮಾಜಿಕ ಪರಿವರ್ತನೆಗೆ ಕಾರಣವಾಗಬಲ್ಲ ಈ ಮಾಧ್ಯಮ, ಕೈದಿಗಳ ಮನಪರಿವರ್ತನೆಗೂ ಸೂಕ್ತ ಜ್ಞಾನ ಸಂವಹನ ಮಾಧ್ಯಮವಾಗಬಲ್ಲದು ಎಂದು ಗುರುತಿಸಿದ ರಾಜ್ಯ ಬಂದಿಖಾನೆ ಆಡಳಿತ, ೬೦ ರ ದಶಕದಲ್ಲೇ ಈ ಮಾಧ್ಯಮವನ್ನು ಎಲ್ಲ ಬಂದಿಖಾನೆಗಳೊಳಗೂ ಬರಮಾಡಿಕೊಂಡಿತು. ಅನಕ್ಷರಸ್ಥ ಕೈದಿಗಳನ್ನು ತಲಪಬಲ್ಲ ಈ ಶ್ರವ್ಯ ಮಾಧ್ಯಮ ಆ ಕಾಲದ ಮಾಂತ್ರಿಕ ಮಾಧ್ಯಮವೆನಿಸಿತ್ತು.

ರಾಜ್ಯದ ಎಲ್ಲಾ ಕೇಂದ್ರ ಬಂದಿಖಾನೆಯಗಳಲ್ಲೂ ಬಾನುಲಿ ವ್ಯವಸ್ಥೆಗಾಗಿ ತಲಾ ಒಂದೊಂದು ರೇಡಿಯೋ ಹಾಗೂ ಆಧುನಿಕ ಮಾದರಿಯ ಟು-ಇನ್-ಒನ್ (ರೇಡಿಯೋ, ರೆಕಾರ್ಡರ್ ಮತ್ತು ಪ್ಲೇಯರ್) ಆಡಿಯೋ ಸಿಸ್ಟಮ್ ಇದ್ದು ಎಲ್ಲಾ ಕೈದಿಗಳಿಗೂ ಪರಿಣಾಮಕಾರಿಯಾಗಿ ಅದು ತಲುಪುವಂತೆ, ಪ್ರತೀ ಬ್ಯಾರಕ್ಕಿಗೂ ಕೇಳಿಸುವಂತೆ ಧ್ವನಿವರ್ಧಕ ಹಾಗೂ 'ಪಬ್ಲಿಕ್ ಅಡ್ರೆಸಿಂಗ್ ಸಿಸ್ಟಮ್'ನ್ನು ಅಳವಡಿಸಲಾಗಿದೆ.

ಪ್ರತೀದಿನ ಬಾನುಲಿ ಪ್ರಸಾರ ಆರಂಭವಾದೊಡನೆ, ರೇಡಿಯೋ - 'ಪಬ್ಲಿಕ್ ಅಡ್ರೆಸಿಂಗ್ ಸಿಸ್ಟಮ್ ' ಅಥವ ಧ್ವನಿವರ್ಧಕದ ಮೂಲಕ ಆಕಾಶವಾಣಿ ಸೌಲಭ್ಯವನ್ನು ಒಂದು ನಿರ್ದಿಷ್ಟ ಸಮಯದ ವರೆಗೆ (ಪ್ರತಿ ಬಂದಿಖಾನೆಯ ಅಧೀಕ್ಷಕರ ನಿರ್ಧಾರದಂತೆ) ಒದಗಿಸಲಾಗುತ್ತದೆ. ನಂತರ ದೇವರ ನಾಮ, ವಿಶೇಷ ಆಹ್ವಾನಿತರ ಧ್ವನಿಮುದ್ರಿತ ಹಾಡು, ಉಪನ್ಯಾಸ, ಭಾಷಣಗಳ ಪ್ರಸಾರವನ್ನು ಕೈದಿಗಳ ದಿನನಿತ್ಯದ ಕೆಲಸ ಕಾರ್ಯಕ್ರಮವನ್ನು ಅವಲಂಬಿಸಿ ಪ್ರಸಾರ ಮಾಡಲಾಗುತ್ತದೆ. 'ಟು ಇನ್ ಒನ್' ಪರಿಕರದ ಸೌಲಭ್ಯವಿರುವದರಿಂದ ಕೈದಿಗಳ ಬಿಡುವಿನ ವೇಳೆ ರೇಡಿಯೋ ಕಾರ್ಯಕ್ರಮಗಳ ಜತೆ ಅನೇಕ ಧ್ವನಿಮುದ್ರಿತ ಜ್ಞಾನಭರಿತ ಉಪನ್ಯಾಸಗಳನ್ನು ಬಿತ್ತರಿಸಲಾಗುತ್ತದೆ. ಕೆಲವು ಬಂದಿಖಾನೆಗಳಲ್ಲಿ ಕೈದಿಗಳ ಮನವಿಯ ಮೇರೆಗೆ ಆಕಾಶವಾಣಿಯ ಅನೇಕ ವಿಶೇಷ ಕಾರ್ಯಕ್ರಮಗಳನ್ನು ಮುದ್ರಿಸಿಕೊಂಡು ಅವರಿಗೆ ಮರುಪ್ರಸಾರ ಮಾಡಲಾಗುತ್ತದೆ. ನೀತಿ ಪ್ರಧಾನವಾದ ಹಾಡು - ಭಾಷಣಗಳ ಜತೆಗೆ ಜ್ಞಾನಪ್ರಧಾನವಾದ ವಿಷಯಗಳನ್ನೂ ಧ್ವನಿಮುದ್ರಣದ ಮೂಲಕ ಪಬ್ಲಿಕ್ ಅಡ್ರೆಸಿಂಗ್ ಸಿಸ್ಟಮ್ ನಲ್ಲಿ ಒದಗಿಸುವ ವ್ಯವಸ್ಥೆಯಿಂದ ಬಂದಿಖಾನೆಗಳಲ್ಲಿ ಶ್ರವ್ಯ ಸಂವಹನಾ ಮಾಧ್ಯಮ ಬಹಳ ಪರಿಣಾಮಕಾರಿ ಎಂಬುದನ್ನು ಸಾಬೀತು ಪಡಿಸಿದೆ.

ಕರ್ನಾಟಕ ಬಂದಿಖಾನೆ ಕೈಪಿಡಿ, ೧೯೭೮ ರಲ್ಲಿ ರೇಡಿಯೋ, ಸಂಗೀತ, ಧ್ವನಿ ಮುದ್ರಿತ ವಿಶೇಷ ಉಪನ್ಯಾಸಗಳ ಪ್ರಸಾರ ಇವೆಲ್ಲವೂ ಪ್ರತಿದಿನ ರಾತ್ರಿ ೭.೪೫ ರಿಂದ ೯.೦೦ ರ ವರೆಗೆ ಎಂದು ಸೂಚಿಸಲಾಗಿದೆ. ಆದರೆ ರಜಾದಿನಗಳಲ್ಲಿ (ಭಾನುವಾರ ಮತ್ತು ಬಂದಿಖಾನೆಯ ಆಡಳಿತ ವರ್ಗಕ್ಕೆ ಇತರ ರಜಾವಿದ್ದಾಗ) ಮಧ್ಯಾಹ್ನ ೧೨.೩೦ ರಿಂದ ಸಾಯಂಕಾಲ ೫ ಗಂಟೆಯ ವರೆಗೆ ಧ್ವನಿಮುದ್ರಿತ ಅಥವ ನೇರವಾಗಿ ನೈತಿಕ, ಧಾರ್ಮಿಕ, ಶೈಕ್ಷಣಿಕ ಉಪನ್ಯಾಸಗಳು, ಸಮೂಹಸಂಗೀತ, ರೇಡಿಯೋ ಪ್ರಸಾರ ಅಥವ ಇತರ ಜ್ಞಾನ ಸಂವಹನಾ ಮಾಧ್ಯಮಗಳು ಹಾಗೂ ಸಾಯಂಕಾಲ

೬.೪೫ ರಿಂದ ರಾತ್ರಿ ೯.೩೦ ರ ವರೆಗೆ ಮತ್ತೆ ರೇಡಿಯೋ ಅಥವ ಇನ್ನಿತರ ಜ್ಞಾನ ಸಂವಹನಾ ಮಾಧ್ಯಮಗಳ ಬಳಕೆ ಎಂದು ಕೈಪಿಡಿಯಲ್ಲಿ ಸೂಚಿಸಲ್ಪಟ್ಟಿದೆ.[೨]

ಆದರೆ ಪ್ರತಿ ಬಂದಿಖಾನೆಯಲ್ಲಿ ಕೈದಿಗಳ ಮನವಿಗಳಿಗನುಗುಣವಾಗಿ ಸ್ಪಂದಿಸಿ ಹಾಗೂ ಜ್ಞಾನ ಸಂವಹನ ಮಾಧ್ಯಮಗಳಿಂದ ಅಕ್ಷರಸ್ಥ ಹಾಗೂ ಅನಕ್ಷರಸ್ಥ ಕೈದಿಗಳ ಮನಸ್ಥಿತಿಯ ಮೇಲಾಗುವ ಅತ್ಯುತ್ತಮ ಪರಿಣಾಮವನ್ನು ಅಧೀಕ್ಷಕರು ಗಮನಿಸಿ ಪ್ರತೀ ಮುಂಜಾನೆಗೆ ರೇಡಿಯೋ ಪ್ರಸಾರ ಹಾಗೂ ಭಕ್ತಿ ಗೀತೆಗಳ ಪ್ರಸಾರವನ್ನು ಮಾಡಬಹುದೆಂದು ಇಲಾಖಾ ಮಹಾನಿರೀಕ್ಷಕರ ವಿಶೇಷ ಸೂಚನೆಯಿದೆ. ಆದರೆ ಹೆಚ್ಚಿನ ಬಂದಿಖಾನೆಗಳಲ್ಲಿ ಅಧೀಕ್ಷಕರುಗಳಿಗೆ ರೇಡಿಯೊ ಎಂದರೇ ಅಲರ್ಜಿ. ಮೈಸೂರು ಕೇಂದ್ರ ಬಂದಿಖಾನೆಯಲ್ಲಿ ರೇಡಿಯೊ ಕೆಟ್ಟು ಕೂತು ಕೆಲವು ತಿಂಗಳಾದರೂ ಅಧೀಕ್ಷಕರು ಆ ಕಡೆ ತಲೆ ಹೊರಳಿಸಿಲ್ಲ ಎಂದು ಕೈದಿಗಳು ದೂರಿದ್ದಾರೆ (ಕ್ಷೇತ್ರಕಾರ್ಯದ ವರದಿ ೩.೯.೨೦೦೨).

ಆಕಾಶವಾಣಿಯ ವೈವಿಧ್ಯಮಯ ಜ್ಞಾನಪೂರ್ಣ ಕಾರ್ಯಕ್ರಮಗಳು, ರೇಡಿಯೋದಂತಾ ಶ್ರವ್ಯ ಜ್ಞಾನಸಂವಹನ ಮಾಧ್ಯಮದ ಮೂಲಕ ಬಂದಿಖಾನೆಯೊಳಗೆ ಅಪಾರ ಶ್ರೋತೃಗಳನ್ನು ಪಡೆದುಕೊಂಡಿದೆ. ಶತಮಾನಕ್ಕಿಂತಲೂ ಬಹಳ ಹಿಂದೆಯೇ ಹುಟ್ಟಿಕೊಂಡ ಈ ತಂತ್ರಜ್ಞಾನ ಈಗಲೂ ಜನಮುಖಿಯಾಗಿರಲು ಕಾರಣ ಅದರ ಶ್ರಾವಕ ಶಕ್ತಿ ಹಾಗೂ ಸರ್ವವ್ಯಾಪಕ ಸಾಮರ್ಥ್ಯ.

**೨.೨ ದೂರದರ್ಶನ**

ಇದು ಉತ್ತಮ ಭಾಷೆ, ಧ್ವನಿಯ ಜತೆಗೆ ದೃಶ್ಯವೂ ಸಮ್ಮಿಳಿತಗೊಂಡಿರುವ ಅತ್ಯಂತ ಪ್ರಭಾವಶಾಲಿ ಆಧುನಿಕ ಜ್ಞಾನಸಂವಹನ ಮಾಧ್ಯಮ. ದೃಶ್ಯ ಸಂವಹನೆಯ ಸಾಮರ್ಥ್ಯದೊಂದಿಗೆ ಧ್ವನಿ ಸಂವಹನೆಯೂ ಇರುವ ಈ ದೃಕ್ - ಶ್ರವ್ಯ ಮಾಧ್ಯಮ ಅತ್ಯಂತ ಶ್ರೇಷ್ಠ ತಂತ್ರಜ್ಞಾನವನ್ನು ಹೊಂದಿರುವಂತಾದ್ದು. ದೂರದರ್ಶನದ ತಾಂತ್ರಿಕತೆ ೭೯ ವರ್ಷಗಳಷ್ಟು ಹಳೆಯದಾದರೂ, ಭಾರತದಲ್ಲಿ ದೂರದರ್ಶನ ಆರಂಭಗೊಂಡಿದ್ದು ೧೯೫೯ ರಲ್ಲಿ. ೧೯೭೭ ರಲ್ಲಿ ಗುಲ್ಬರ್ಗಾದಲ್ಲಿ ಮೊದಲ ಕೇಂದ್ರ ಆರಂಭವಾಗುವುದರೊಂದಿಗೆ ದೂರದರ್ಶನ ಕರ್ನಾಟಕಕ್ಕೆ ಕಾಲಿಟ್ಟಿತು. ೧೯೮೧ ರಲ್ಲಿ ಬೆಂಗಳೂರಿನಲ್ಲೂ ದೂರದರ್ಶನ ಕೇಂದ್ರವೊಂದು ನಿರ್ಮಾಣಗೊಂಡಿತು. ಇದಕ್ಕೆ ಪೂರಕವಾಗಿ ೧೯೮೮ ರಲ್ಲಿ ವ್ಯವಸ್ಥಿತ ಸ್ಟುಡಿಯೋ ಒಂದು ಸ್ಥಾಪನೆಯಾಯಿತು.

ಶ್ರವ್ಯ ಮಾಧ್ಯಮದ ಜತೆಗೆ ದೃಶ್ಯ ಮಾಧ್ಯಮವೂ ಸೇರಿರುವುದರಿಂದ ಈ ದೃಕ್ - ಶ್ರವ್ಯ ಮಾಧ್ಯಮದ ಮೂಲಕ ಕೈದಿಗಳಿಗೆ ಜ್ಞಾನ ಸಂವಹನಾ ಪ್ರಕ್ರಿಯೆ ಪರಿಣಾಮಕಾರಿಯಾಗಬಲ್ಲದು ಎಂದು ಮನಪರಿವರ್ತನೆಯ ಅಂಶವನ್ನು ಮನದಲ್ಲಿಟ್ಟುಕೊಂಡು ರಾಜ್ಯ ಬಂದಿಖಾನೆ ಇಲಾಖೆ ತೊಂಬತ್ತರ ದಶಕದಲ್ಲಿ ರಾಜ್ಯದ ಎಲ್ಲ ಕೇಂದ್ರ ಬಂದಿಖಾನೆಗಳಿಗೆ ಹಾಗೂ ಬಯಲು ಬಂದಿಖಾನೆಗೆ ದೂರದರ್ಶನದ ವ್ಯವಸ್ಥೆಯನ್ನು ಕಲ್ಪಿಸಿಕೊಟ್ಟಿತು. ಬಂದಿಖಾನೆಗಳಲ್ಲಿರುವ ಬ್ಯಾರಕ್ಸ್‌ಗಳಿಗೆ ಅನುಗುಣವಾಗಿ ಪ್ರತಿಯೊಬ್ಬ ಕೈದಿಗೂ ಈ ಮಾಧ್ಯಮದ ಸೌಲಭ್ಯ ತಲುಪುವಂತೆ ದೂರದರ್ಶಕಗಳನ್ನು ಅಳವಡಿಸಲಾಯಿತು. ಕರ್ನಾಟಕ ಬಂದಿಖಾನೆ ಕೈಪಿಡಿಯ ನಿಯಮಾನುಸಾರವಾಗಿ

ಹಾಗೂ ಆಯಾ ಬಂದಿಖಾನೆಯ ಅಧೀಕ್ಷಕರ ನಿರ್ಧಾರದಂತೆ ದೂರದರ್ಶನ ವೀಕ್ಷಣೆಗೆ ದಿನದಲ್ಲಿ ಇಂತಿಷ್ಟು ಅವಧಿಯೆಂದು ನಿಗದಿಗೊಳಿಸಲಾಗಿದೆ. ಇದು ಮನರಂಜನೆಯ ಜತೆಗೆ ಜ್ಞಾನಸಂವಹನೆಗೂ ಹೆಚ್ಚು ಒತ್ತು ಕೊಡುವುದರಿಂದ ಖಾಸಾಗಿ ಚಾನೆಲ್‌ಗಳನ್ನು ದೂರದರ್ಶಕಕ್ಕೆ (ಕೇಬಲ್ ಸಂಪರ್ಕ) ಅಳವಡಿಸಲು ಇಲಾಖೆ ನಿರ್ಧರಿಸಿತು. ಬೆಂಗಳೂರು ಕೇಂದ್ರ ಬಂದಿಖಾನೆಗೆ ಪ್ರಥಮವಾಗಿ ಈ ಚಾನೆಲ್ ಸೌಲಭ್ಯವನ್ನು ಒದಗಿಸಲಾಯಿತು. ಆದರೆ ಈ 'ಮಲ್ಟಿಚಾನೆಲ್' ಸಮಸ್ಯೆಯಿಂದಾಗಿ ಕೈದಿಗಳೊಳಗೆ ಜಗಳ ಹುಟ್ಟಿ, ಅದು ಭೀಕರ ಘರ್ಷಣೆಯಲ್ಲಿ ಕೊನೆಗೊಂಡಾಗ ಇಲಾಖೆ ಎಚ್ಚೆತ್ತು, ಎಲ್ಲ ಬಂದಿಖಾನೆಗಳ ದೂರದರ್ಶಕಕ್ಕೂ ಕೇಬಲ್ ಸಂಪರ್ಕ ಸೌಲಭ್ಯವನ್ನು ರದ್ದುಗೊಳಿಸಿತು.

ಇದೀಗ ಮತ್ತೆ (೨೦೦೦ ರಲ್ಲಿ) ಬೆಂಗಳೂರು ಕೇಂದ್ರ ಬಂದಿಖಾನೆಯಲ್ಲಿ ದೂರದರ್ಶಕಕ್ಕೆ ೬೨ ಚಾನೆಲ್‌ಗಳ ಕೇಬಲ್ ಸಂಪರ್ಕವನ್ನು ಒದಗಿಸಲಾಗಿದ್ದು, ಅಧೀಕ್ಷಕರ ಮಾರ್ಗದರ್ಶನದಂತೆ ಜ್ಞಾನಾರ್ಜನೆಗೆ ಒತ್ತುಕೊಡುವ, ಸಭ್ಯತೆಯ ಎಲ್ಲೆ ಮೀರಿದ ಚಾನೆಲ್‌ಗಳನ್ನು ಹಾಗೂ ಉತ್ತಮ ಕಾರ್ಯಕ್ರಮಗಳನ್ನು ಮಾತ್ರವೇ ಕೈದಿಗಳು ವೀಕ್ಷಿಸಲು ಕ್ರಮ ಕೈಗೊಳ್ಳಲಾಗಿದೆ. ಕೈದಿಗಳ ಮನವಿಗಳನ್ನು ಗಮನಿಸಿ ಕಾರ್ಯಕ್ರಮಗಳ ಗುಣಮಟ್ಟವನ್ನು ಹಾಗೂ ಅವು ಕೈದಿಗಳಿಗೆ ಕೊಡುವ 'ಸಂದೇಶ'ವನ್ನು ಗಮನದಲ್ಲಿಟ್ಟುಕೊಂಡು ದೂರದರ್ಶನ ವೀಕ್ಷಣೆಗೆ ಅನುವು ಮಾಡಿ ಕೊಡಲಾಗುತ್ತದೆ.

ಪ್ರತಿಯೊಂದು ಕೇಂದ್ರ ಬಂದಿಖಾನೆಗೂ ವಿಡಿಯೋ ಕ್ಯಾಸೆಟ್ ಪ್ಲೇಯರ್ ಸಾಧನವನ್ನು ಒದಗಿಸಲಾಗಿದ್ದು, ಅಧೀಕ್ಷಕರ ನಿರ್ಧಾರದಂತೆ ಉತ್ತಮ ಸಂದೇಶ ಹಾಗೂ ತಿಳುವಳಿಕೆಯನ್ನು ಕೊಡುವ ಚಲನಚಿತ್ರಗಳನ್ನು ದೂರದರ್ಶಕದಲ್ಲಿ ಪ್ರದರ್ಶಿಸಲಾಗುತ್ತದೆ. ಧಾರ್ಮಿಕ - ನೈತಿಕ ಮೌಲ್ಯಗಳನ್ನು ಎತ್ತಿಹಿಡಿಯುವುದರ ಜತೆಗೆ, ವೈಜ್ಞಾನಿಕ - ಆರೋಗ್ಯ ಜ್ಞಾನವನ್ನು ಕೊಡುವಂತ, ಸಾಮಾಜಿಕ ಸಮಸ್ಯೆಗಳ ಬಗ್ಗೆ ಅರಿವು ಮೂಡಿಸುವಂತಹ ಅನೇಕ ವಿಡಿಯೋ ಫಿಲ್ಮ್‌ಗಳನ್ನು ಕೈದಿಗಳಿಗಾಗಿ ಪ್ರದರ್ಶಿಸಲಾಗುತ್ತದೆ. ಕ್ಷೇತ್ರಕಾರ್ಯದ ವೇಳೆ, ಇತ್ತೀಚೆಗೆ ಕೈದಿಗಳಿಗಾಗಿ 'ಏಡ್ಸ್ ವಿಡಿಯೋ ಫಿಲ್ಮ್' ಪ್ರದರ್ಶನಗೊಂಡಿದ್ದರ ಮಾಹಿತಿಯನ್ನು ಕೈದಿಗಳಿಂದ ಪಡೆಯಲಾಯಿತು. ಈ ಮಾಧ್ಯಮದ ಮೂಲಕ ಅನಕ್ಷರಸ್ಥ ಕೈದಿಗಳಿತ್ತಲೂ ಜ್ಞಾನ ಸಂವಹನೆ ಸಾಧ್ಯವಿರುವುದರಿಂದ ಇದು ಬಂದಿಖಾನೆಯೊಳಗೆ ಅತ್ಯಂತ ಪರಿಣಾಮಕಾರಿ ಜ್ಞಾನ ಸಂವಹನ ಮಾಧ್ಯಮವೆನಿಸಿದೆ.

## ಕೋಷ್ಟಕ ೧೧

## ಕೇಂದ್ರ ಮತ್ತು ಬಯಲು ಬಂದಿಖಾನೆಗಳಲ್ಲಿನ ರೇಡಿಯೊ - ದೂರದರ್ಶಕಗಳ ವಿವರ

| ಕ್ರ. ಸಂ. | ಬಂದಿಖಾನೆಗಳು | ಟಿ.ವಿ. | ರೇಡಿಯೋ Two-in-one With Speaker/ Public Addressing System |
|---|---|---|---|
| ೧ | ಬಳ್ಳಾರಿ ಬಂದಿಖಾನೆ | ೧೧ ಕಪ್ಪು ಬಿಳುಪು | ರೇಡಿಯೆ ೯೬-೧, Two-in-one With Loud Speaker-೧ |
| ೨ | ಗುಲಬರ್ಗಾ ಕೇಂದ್ರ ಬಂದಿಖಾನೆ | ೧೩ ಕಪ್ಪು ಬಿಳುಪು | ರೇಡಿಯೋ-೧, Two-in-one With Amplifier-೧, Speaker-೧ |
| ೩ | ವಿಜಾಪುರ ಕೇಂದ್ರ ಬಂದಿಖಾನೆ | ೦೭ (೧ ಬಣ್ಣ, ೬ ಕಪ್ಪು ಬಿಳುಪು) | ರೇಡಿಯೋ-೧, Two-in-one With Loud Speaker-೧ |
| ೪ | ಮೈಸೂರು ಕೇಂದ್ರ ಬಂದಿಖಾನೆ | ೧೬ ಕಪ್ಪು ಬಿಳುಪು | ರೇಡಿಯೋ-೧, Two-in-one With Public Addressing System-೧ |
| ೫ | ಬೆಳಗಾಂ ಕೇಂದ್ರ ಬಂದಿಖಾನೆ | ೧೮ ಕಪ್ಪು ಬಿಳುಪು | ರೇಡಿಯೋ-೧, Two-in-one With Loud Speaker-೧ |
| ೬ | ಬೆಂಗಳೂರು ಕೇಂದ್ರ ಬಂದಿಖಾನೆ | ೮೭ (೪ ಬಣ್ಣ, ೮೩ ಕಪ್ಪು ಬಿಳುಪು) (೬೪ ಚಾನಲ್) | ರೇಡಿಯೋ-೧, Two-in-one With Public Addressing System-೧ |
| ೭ | ಬಯಲು ಬಂದಿಖಾನೆ | ೦೨ ಕಪ್ಪು ಬಿಳುಪು | ರೇಡಿಯೋ-೧, Two-in-one With Loud Speaker-೧ |

ಅಧ್ಯಯನದ ಕ್ಷೇತ್ರ ಕಾರ್ಯದಲ್ಲಿ ೬ ಬಂದಿಖಾನೆಗಳ ಹಾಗೂ ಒಂದು ಬಯಲು ಬಂದಿಖಾನೆಯ ಒಟ್ಟು ೧೩೦ ಜೀವಾವಧಿ ಕೈದಿಗಳನ್ನು (೧೨೦ ಪುರುಷರು, ೧೦ ಮಹಿಳೆಯರು) ಸಂದರ್ಶಿಸಿ ಆಧುನಿಕ ಜ್ಞಾನ ಸಂವಹನ ಮಾಧ್ಯಮಗಳಾದ ದೂರದರ್ಶನ, ಮತ್ತು ರೇಡಿಯೋ ಕಾರ್ಯಕ್ರಮಗಳಲ್ಲಿ ಅವರು ಇಷ್ಟಪಡುವ ಕಾರ್ಯಕ್ರಮಗಳ ಬಗ್ಗೆ ಮಾಹಿತಿ ಪಡೆಯಲಾಯಿತು. (ದೂರದರ್ಶನ : ನ್ಯಾಷನಲ್ ನೆಟ್‌ವರ್ಕ್ - ಬೆಂಗಳೂರು ದೂರದರ್ಶನ ಮಾತ್ರ). ಒಟ್ಟು ೧೩೦ ಕೈದಿಗಳಲ್ಲಿ ಎಲ್ಲರೂ ದೂರದರ್ಶನ, ರೇಡಿಯೋಗಳಲ್ಲಿ ಪ್ರಸಾರವಾಗುವ ಮನರಂಜನಾ ಕಾರ್ಯಕ್ರಮಗಳನ್ನು (ಚಿತ್ರಗೀತೆ, ಭಾವಗೀತೆ, ಜಾನಪದಗೀತೆ, ಭಕ್ತಿಗೀತೆ, ನಾಟಕ, ನೃತ್ಯ, ಬಯಲಾಟ, ಹಾಸ್ಯ, ಧಾರಾವಾಹಿ, ಸಿನಿಮಾ, ನೃತ್ಯ, ಶಾಸ್ತ್ರೀಯ ಸಂಗೀತ, ವಾದ್ಯ ಸಂಗೀತ ಇತ್ಯಾದಿ...) ಇಷ್ಟಪಡುವವರು. ಹಲವರು ಮನರಂಜನಾ ಪಟ್ಟಿಯಲ್ಲಿರುವ ಎಲ್ಲಾ ಪ್ರಕಾರಗಳನ್ನು ಇಷ್ಟಪಟ್ಟರೆ, ಕೆಲವರು ಕೆಲವೇ ಪ್ರಕಾರಗಳನ್ನು ಇಷ್ಟಪಡುವವರು. ಆದರೆ ಒಟ್ಟು ೧೩೦ ಮಂದಿಯೂ ಹೆಚ್ಚಾಗಿ ಮನರಂಜನಾ ಕಾರ್ಯಕ್ರಮಗಳನ್ನು ವೀಕ್ಷಿಸುವವರು ಮತ್ತು ಆಲಿಸುವವರು.

ಈ ೧೩೦ ಕೈದಿಗಳಲ್ಲಿ ಮನರಂಜನೆಯನ್ನು ಹೊರತುಪಡಿಸಿ, ಅವರು ಇಷ್ಟಪಡುವ ಇತರ ಕಾರ್ಯಕ್ರಮಗಳ ವಿವರ ಹೀಗಿದೆ (ಕೋಷ್ಟಕ ೧೨ ಗಮನಿಸಿ). ಆದರೆ ಹಲವೊಂದು ಕಾರಣಗಳಿಂದ ಇವೆಲ್ಲ ಕಾರ್ಯಕ್ರಮಗಳನ್ನು ಕೈದಿಗಳಿಂದ ಅನುಭವಿಸಲಾಗುತ್ತಿಲ್ಲ. ಆದುನಿಕ ಜ್ಞಾನ ಸಂವಹನ ಮಾಧ್ಯಮದಲ್ಲಿ ಮನರಂಜನೆಯ ಜತೆಗೆ ಕೈದಿಗಳು (೧೩೦ ಮಂದಿ) ಇಷ್ಟಪಡುವ ಇತರ ಕಾರ್ಯಕ್ರಮಗಳು ಹೀಗಿವೆ :

ಕೋಷ್ಟಕ ೧೨

## ಮನರಂಜನೆಯನ್ನು ಹೊರತುಪಡಿಸಿ ಕೈದಿಗಳು ಇಷ್ಟಪಡುವ ಇತರ ಕಾರ್ಯಕ್ರಮಗಳ ವಿವರ

| ಕ್ರ.ಸಂ. | ಕಾರ್ಯಕ್ರಮಗಳು | ದೂರದರ್ಶನ | ಶೇಕಡಾವಾರು | ಆಕಾಶವಾಣಿ | ಶೇಕಡಾವಾರು |
|---|---|---|---|---|---|
| ೧. | ಶಿಕ್ಷಣ ಮತ್ತು ವೃತ್ತಿ ಶಿಕ್ಷಣ | ೮ | ೬೭ | ೬ | ೪.೬ |
| ೨. | ಸಾಮಾಜಿಕ ಸಮಸ್ಯೆ - ಅರಿವು - ಕಾಳಜಿ | ೧೨ | ೯.೨ | ೧೨ | ೯.೨ |
| ೩. | ವೈಜ್ಞಾನಿಕ - ತಂತ್ರಜ್ಞಾನ (Pure Science & Technology) | ೦ | ೦ | ೦ | ೦ |
| ೪. | ಮಿಲಿಟರಿ - ದೇಶರಕ್ಷಣೆ - ದೇಶದ ಭದ್ರತೆ | ೩ | ೨.೦ | ೩ | ೨.೩ |
| ೫. | ರಾಜಕಾರಣಿಗಳ ಭಾಷಣ, ಸಂದರ್ಶನ | ೦ | ೦ | ೦ | ೦ |
| ೬. | ವಾರ್ತೆ | ೩೦ | ೨೩ | ೩೦ | ೨೩.೦ |
| ೭. | ಆರೋಗ್ಯ ಕಾರ್ಯಕ್ರಮ (ಆಹಾರ ಪೌಷ್ಟಿಕಾಂಶ, ವ್ಯಾಯಾಮ, ವೈದ್ಯಕೀಯ) | ೫ | ೩.೮ | ೧೦ | ೭.೭ |
| ೮. | ಕಾನೂನು - ನ್ಯಾಯ, ಅಪರಾಧ - ಶಿಕ್ಷೆ | ೨೦ | ೧೫.೪ | ೧೫ | ೧೧.೫೩ |
| ೯. | ಕೃಷಿರಂಗ, ಕೃಷಿ ಸಮಸ್ಯೆ - ಸಲಹೆ | ೨೫ | ೧೯.೦ | ೪೬ | ೩೫.೪ |
| ೧೦. | ಜ್ಯೋತಿಷ್ಯ - ಭವಿಷ್ಯ, ವಾಸ್ತು | ೮ | ೬.೬ | ೦ | ೦ |
| ೧೧. | ಮಹಿಳೆ - ಮಹಿಳಾ ಸಮಸ್ಯೆ | ೬ | ೩.೮ | ೫ | ೩.೮ |
| | ಮಹಿಳೆಗೆ ನ್ಯಾಯ - ಅನ್ಯಾಯ | *೪ | *೪ | | |
| ೧೨. | ಸಾಹಿತ್ಯ - ಸಂಬಂಧ (ಚರ್ಚೆ, ಸಂದರ್ಶನ, ಭಾಷಣ, ವಿಮರ್ಶೆ, ಕಾವ್ಯವಾಚನ ಇತ್ಯಾದಿ) | ೧ | ೦.೮ | ೧ | ೦.೮ |
| ೧೩. | ಸೌಂದರ್ಯ, ಗೃಹಾಲಂಕಾರ, ಹೊಸರುಚಿ | ೩ | ೨.೦ | ೨ | ೧.೫ |
| | | *೨ | *೨ | | |
| ೧೪. | ದೇಶ - ವಿದೇಶಗಳ ಪ್ರವಾಸಿ ಸ್ಥಳಗಳು - ಪರ್ಯಟನೆ | ೧೦ | ೭.೭ | ೦ | ೦ |
| | * ಮಹಿಳೆಯರು ಮಾತ್ರ | ೧೩೦ | ೧೦೦ | ೧೩೦ | ೧೦೦ |

ಕ್ಷೇತ್ರಕಾರ್ಯದ ವೇಳೆ ಸಂದರ್ಶನ ನಡೆಸಿ ಪಡೆದ ಮಾಹಿತಿಯಂತೆ ಕೈದಿಗಳಿಗೆ ಮನರಂಜನೆಯ ಜತೆಗೆ ಪ್ರಪಂಚದ ವರ್ತಮಾನಗಳ ಬಗ್ಗೆ ತೀವ್ರ ಸ್ಪಂದನವಿದ್ದು, ಕೃಷಿ ಮತ್ತು ಕಾನೂನು ಬಗ್ಗೆ ತಿಳಿದುಕೊಳ್ಳಲು ತೀರಾ ಆಸಕ್ತರಾಗಿದ್ದಾರೆ. ರಾಜಕಾರಣ - ರಾಜಕಾರಣಿಗಳ ಬಗ್ಗೆ ನಂಬಿಕೆ ಹಾಗೂ ಒಲವಿಲ್ಲದ ಕೈದಿಗಳಿಗೆ, ಶಿಕ್ಷಣ - ವೃತ್ತಿಶಿಕ್ಷಣ ಮತ್ತು ಸಾಮಾಜಿಕ ಕಾರ್ಯಕ್ರಮಗಳ ಬಗ್ಗೆ ಇಷ್ಟವಿದೆ. ಆದರೆ ಶಿಕ್ಷಣ ಕಾರ್ಯಕ್ರಮಗಳು ತಮ್ಮ ಅರ್ಹತೆಸುವಿಕೆಯ ಮಟ್ಟಕ್ಕಿಂತ ಎತ್ತರದಲ್ಲಿದ್ದು ತಮ್ಮಿಂದ ಆ ಎತ್ತರಕ್ಕೆ ಏರಲಾಗುತ್ತಿಲ್ಲ - ಆ ಕಾರಣ ಆ ಕಾರ್ಯಕ್ರಮಗಳ ಗೋಜಿಗೆ ಹೋಗುತ್ತಿಲ್ಲ ಎಂದು ಕೆಲವು ಕೈದಿಗಳು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಮಹಿಳೆ - ಮಹಿಳಾ ಸಮಸ್ಯೆ ಬಗ್ಗೆ ಸ್ವತಃ ಮಹಿಳಾ ಕೈದಿಗಳಿಗೆ ಆಸಕ್ತಿ ಇಲ್ಲ. ಆ ಸಮಸ್ಯೆಯ ಬಗ್ಗೆ ಇಬ್ಬರು ಪುರುಷ ಕೈದಿಗಳು ಆಸಕ್ತರಾಗಿದ್ದಾರೆ. ಈ ಕಾರ್ಯಕ್ರಮವನ್ನು ವೀಕ್ಷಿಸಿ - ಆಲಿಸುವ ಮಹಿಳಾ ಕೈದಿಗಳಿಗೆ ಸ್ತ್ರೀವಾದ - ಮಹಿಳಾ ಸಮಸ್ಯೆ ಬಗ್ಗೆ ಎಳ್ಳಷ್ಟೂ ಜ್ಞಾನವಿಲ್ಲ. ತಮ್ಮಂತೆ ಬೇರೆಯ ಮಹಿಳೆಯರಿಗೆ ಅನ್ಯಾಯ - ಸಮಸ್ಯೆ ಆಗಿದೆಯೆ?

ಆ ಸಮಸ್ಯೆಗೆ ಅವರಿಗೆ ಪರಿಹಾರ ಹೇಗೆ ಸಿಕ್ಕಿತು - ಎಂದು ತಿಳಿದುಕೊಳ್ಳುವ ಕುತೂಹಲ ಅಷ್ಟೆ. ದೇಶದ ಐಕ್ಯತೆ - ರಕ್ಷಣೆ ಬಗ್ಗೆ ತಿಳಿದುಕೊಳ್ಳಲು ಮೂರು ಕೈದಿಗಳು ಮಾತ್ರ ಆಸಕ್ತರಾಗಿದ್ದಾರೆ. ಸಾಹಿತ್ಯದ ಬಗ್ಗೆ ಒಬ್ಬ ಕೈದಿಯನ್ನು ಹೊರತು ಯಾರಿಗೂ ಆ ಕಾರ್ಯಕ್ರಮದಲ್ಲಿ ಆಸಕ್ತಿ ಇಲ್ಲ. (ಆದರೆ ಸಾಹಿತ್ಯ ಓದಲು ಆಸಕ್ತಿ ಇದೆ). ಸೌಂದರ್ಯ, ಗೃಹಾಲಂಕಾರ, ಹೊಸರುಚಿ ಇತ್ಯಾದಿ ಕಾರ್ಯಕ್ರಮಗಳ ಬಗ್ಗೆ ಮೂರು ಮಹಿಳಾ ಕೈದಿಗಳಿಗೆ ಮಾತ್ರವೇ ಆಸಕ್ತಿ. ಜ್ಯೋತಿಷ್ಯ - ಭವಿಷ್ಯ - ಆರೋಗ್ಯದ ಬಗ್ಗೆ ಕೆಲವು ಕೈದಿಗಳಿಗೆ ಆಸಕ್ತಿಯಿದ್ದರೂ, ವೈಜ್ಞಾನಿಕ - ತಂತ್ರಜ್ಞಾನ ಕಾರ್ಯಕ್ರಮಗಳ ಬಗ್ಗೆ ಯಾರಿಗೂ ಒಲವಿಲ್ಲ. ಬಂದಿಖಾನೆಯೊಳಗೆ ರೆಕ್ಕೆ ಮುರಿದ ಹಕ್ಕಿಗಳಂತಿರುವ ಕೈದಿಗಳಲ್ಲಿ ಕೆಲವು ಪುರುಷ ಕೈದಿಗಳಿಗೆ ಪ್ರಪಂಚ ಪರ್ಯಟನೆಯ ಒಲವಿದೆ, ಅವರೆಲ್ಲರೂ ದೇಶ ಮತ್ತು ಪ್ರಪಂಚ ಪರ್ಯಟನೆ, ಪ್ರವಾಸೋದ್ಯಮ ಕಾರ್ಯಕ್ರಮಗಳ ಬಗ್ಗೆ ಆಸಕ್ತರು. ಅತ್ಯಂತ ಪ್ರಭಾವಿ ಆಧುನಿಕ ಸಂವಹನ ಮಾಧ್ಯಮವೆಂದು ಗುರುತಿಸಲ್ಪಟ್ಟಿರುವ ದೂರದರ್ಶನ ಮತ್ತು ಆಕಾಶವಾಣಿ, ಕೈದಿಗಳ ಮನಪರಿವರ್ತನೆಗೆ ಅಗತ್ಯವಿರುವ ಜ್ಞಾನವನ್ನು, ಹಲವು ಮನರಂಜನಾ ಕಾರ್ಯಕ್ರಮ ಹಾಗೂ ಇತರ ಕಾರ್ಯಕ್ರಮಗಳ ಮೂಲಕ ಪರಿಣಾಮಕಾರಿಯಾಗಿ ಜ್ಞಾನಸಂವಹನೆ ಮಾಡುತ್ತಿವೆ. ರಾಜ್ಯ ಬಂದಿಖಾನೆ ಇಲಾಖೆ ಎಲ್ಲಾ ಕೇಂದ್ರ ಬಂದಿಖಾನೆಗಳಲ್ಲಿರುವ ದೂರದರ್ಶನಕ್ಕೂ ಕೇಬಲ್ ಸೌಲಭ್ಯ ನೀಡುವ ಬಗ್ಗೆ ಚಿಂತನೆ ನಡೆಸಿದೆ.

### ೨. ೩ ಕಂಪ್ಯೂಟರ್ ನೆಟ್‌ವರ್ಕ್

ಇದು ಅತ್ಯಾಧುನಿಕ ಜ್ಞಾನ ಸಂವಹನ ಮಾಧ್ಯಮ. 'ಕಂಪ್ಯೂಟರ್ ಜಾಲ' (Computer Network) ಜ್ಞಾನಸಂವಹನ ಮಾಧ್ಯಮದ ಬಳಕೆಯ ಬಗ್ಗೆ ಬಂದಿಖಾನೆ ಇಲಾಖೆಯೊಳಗೆ ಗಂಭೀರ ಚಿಂತನೆ ನಡೆದಿದೆ. ಮುಖ್ಯವಾಗಿ ಕಂಪ್ಯೂಟರ್‌ಗಳಿಗೆ ಇಂಟರ್‌ನೆಟ್ ಸೌಲಭ್ಯ ಕಲ್ಪಿಸಿ, ಕೈದಿಗಳಿಗೆ ಜ್ಞಾನ ಸಂವಹನೆ ಮಾಡುವುದರ ಬಗ್ಗೆ ಬಂದಿಖಾನೆಯೊಳಗೆ ಪ್ರಾಯೋಗಿಕ ಕಾರ್ಯಾಗಾರಗಳು ನಡೆದಿವೆಯಾದರೂ ಆ ಬಗ್ಗೆ ಬಂದಿಖಾನೆ ಇಲಾಖೆ (ಭದ್ರತೆಯ ದೃಷ್ಟಿಯಿಂದ) ಇನ್ನೂ ಸ್ಪಷ್ಟ ತೀರ್ಮಾನವನ್ನು ತೆಗೆದುಕೊಂಡಿಲ್ಲ. ಹತ್ತು ಕಂಪ್ಯೂಟರ್‌ಗಳು ಈಗಾಗಲೇ ಬೆಂಗಳೂರು ಕೇಂದ್ರ ಬಂದಿಖಾನೆಯೊಳಗೆ ಪ್ರವೇಶಿಸಿದ್ದು, ಮೊದಲ ಹಂತವಾಗಿ ಕಂಪ್ಯೂಟರ್ ಶಿಕ್ಷಣ ಆರಂಭಗೊಂಡಿದೆ. ಮುಂದೆ ಕೈದಿಗಳ ಮನವಿ ಮೇರೆಗೆ Data base ಗಳನ್ನು ಖರೀದಿಸಿ, ಕಂಪ್ಯೂಟರ್‌ಗೆ ಅಳವಡಿಸುವ ಯೋಜನೆಯೂ ಬಂದಿಖಾನೆ ಇಲಾಖೆಗಿದೆ.

ಬಂದಿಖಾನೆ ಇಲಾಖೆ ಮಾಹಿತಿ ಜಾಲ (ವೆಬ್ ಸೈಟ್ ) ವೊಂದನ್ನು ೨೫.೯.೨೦೦೦ ದಂದು ಆರಂಭಿಸಿದೆ. ವಿಳಾಸ ಹೀಗಿದೆ. W W W Karnataka- Prisons org. ಅಕ್ಷರಸ್ಥ ಕೈದಿಗಳು ಕಂಪ್ಯೂಟರ್ ಶಿಕ್ಷಣ ಆರಂಭಿಸಿದ್ದು, ಕಂಪ್ಯೂಟರ್ ನೆಟ್‌ವರ್ಕ್ ಮೂಲಕ ಜ್ಞಾನ ಪಡೆಯುವ ದಿನಕ್ಕಾಗಿ ಕಾತರದಿಂದ ಕಾಯುತ್ತಿದ್ದಾರೆ. ರಾಜ್ಯದ ಬಂದಿಖಾನೆಯಲ್ಲಿ ಕರ್ತವ್ಯದಲ್ಲಿರುವ ಶೇಕಡಾ ೯೮.೫ ರಷ್ಟು ಸಿಬ್ಬಂದಿಗಳಿಗೆ ಕಂಪ್ಯೂಟರ್ ಬಳಕೆ ಮತ್ತು ಅದರ ಉಪಯುಕ್ತತೆ, ಜ್ಞಾನ ಸಂವಹನ ಕಾರ್ಯದಲ್ಲಿ ಅದನ್ನು ಪರಿಣಾಮಕಾರಿಯಾಗಿ ಬಳಸುವ ತಂತ್ರಜ್ಞಾನದ ಬಗ್ಗೆ ಪ್ರಾಥಮಿಕ ಜ್ಞಾನವೂ ಇಲ್ಲದಿರುವುದರಿಂದ ಕೈದಿಗಳ ಆಸಕ್ತಿಗೆ ಅವರೆಷ್ಟು ಪೂರಕವಾಗಿ ಸ್ಪಂದಿಸಬಲ್ಲರು ಎಂಬುದು ಮುಖ್ಯವಾಗಿದೆ. ಇವುಗಳ ಕೈಗೆ ರಾಗಿ ಬೀಸುವ ಕಲ್ಲು ಕೊಡುವುದನ್ನು ಬಿಟ್ಟು ಕಂಪ್ಯೂಟರ್ ಕೊಡುವ ಇಲಾಖೆಯ

ಬುದ್ಧಿಗೆ ಏನೆನ್ನಬೇಕು ಎಂದು ಕೆಲವು 'ಜೈಲರ್' ಹಂತದ ಸಿಬ್ಬಂದಿಗಳು ಅಧ್ಯಯನದ ಕ್ಷೇತ್ರಕಾರ್ಯದ ವೇಳೆ ಅನಿಸಿಕೆ ವ್ಯಕ್ತಪಡಿಸಿದ್ದಾರೆ.

❏ ❏

## ಅಡಿಟಿಪ್ಪಣಿ

೧. ಜವರೇಗೌಡ, ದೇ., ೧೯೯೪. ಜ್ಞಾನಪ್ರಸರಣ ಕಾರ್ಯದಲ್ಲಿ ಗ್ರಂಥಾಲಯಗಳ ಪಾತ್ರ, ಪುಟ. ೬ : ರಜತ ದೀಪ್ತಿ, ಪ್ರ.ಸಂ., ಕೆ.ಎಸ್.ದೇಶಪಾಂಡೆ. ಬೆಂಗಳೂರು, ಸಾರ್ವಜನಿಕ ಗ್ರಂಥಾಲಯ ಇಲಾಖೆ.

೨. ರಾಮಕೃಷ್ಣ, ಜಿ., ೧೯೮೪. ಭಗತ್‌ಸಿಂಗ್. ಬೆಂಗಳೂರು, ಮಾ-ಲೆ ಪ್ರಕಾಶ. ಪುಟ ೧೩೩.

೩. ಕುವೆಂಪು, ೧೯೯೪. 'ಬಾ ಪಿಯೂಷ ಪಾನಗೈ !' ಪುಟ ೨ : ರಜತ ದೀಪ್ತಿ, ಪ್ರ.ಸಂ., ಕೆ.ಎಸ್.ದೇಶಪಾಂಡೆ. ಬೆಂಗಳೂರು, ಸಾರ್ವಜನಿಕ ಗ್ರಂಥಾಲಯ ಇಲಾಖೆ.

೪. Mulla A.N., Chairman, 1983. Report of the All India Committee on Jail Reforms 1980-83, Vol. 1. New Delhi, Ministry of Home Affairs. Pp. 10.

೫. Nehru, Jawarhalal, 1985 (1934). An autobiography. New Delhi, OUP. Pp. 221.

೬. ಓಂಕಾರ್ ಶರದ್, ೨೦೦೦. ಲೋಹಿಯಾ, ಅನು : ಹಸನ್ ನಯೀಂ ಸುರಕೋಡ. ಬಳ್ಳಾರಿ, ಲೋಹಿಯಾ ಪ್ರಕಾಶನ. ಪುಟ ೯೬.

೭. ತೆಂಡುಲ್ಕರ್, ಡಿ.ಜಿ., ೧೯೭೪. ಮಹಾತ್ಮ, ಅನು : ಎಚ್.ತಿಪ್ಪೇರುದ್ರಸ್ವಾಮಿ. ಮೈಸೂರು, ಮೈಸೂರು ವಿಶ್ವವಿದ್ಯಾಲಯ. ಪುಟ ೧೫೬-೧೫೯.

೮. ಮಾರನ ಬಸರಿ, ಆರ್.ವಿ., ೧೯೯೪. ನಗರ ಕೇಂದ್ರ ಗ್ರಂಥಾಲಯ, ಬಿಜಾಪುರ, ಪುಟ ೫೦೨ : ರಜತ ದೀಪ್ತಿ, ಪ್ರ.ಸಂ., ಕೆ.ಎಸ್.ದೇಶಪಾಂಡೆ. ಬೆಂಗಳೂರು, ಸಾರ್ವಜನಿಕ ಗ್ರಂಥಾಲಯ ಇಲಾಖೆ.

೯. ನಗರಿ ಬಾಬಯ್ಯ, ೧೯೮೭. ಕಗ್ಗತ್ತಲ ಜಗತ್ತಲ್ಲಿ ೯೦ ದಿನ. ಬೆಂಗಳೂರು, ಪ್ರಿಯದರ್ಶಿನಿ ಪ್ರಕಾಶನ. ಪುಟ ೫೧.

೧೦. ದಂಡವತೆ, ಮಧು, ೧೯೮೩. ಮಾರ್ಕ್ಸ್ ಮತ್ತು ಗಾಂಧಿ, ಅನು : ಕೆ.ವಿ. ಸುಬ್ಬಣ್ಣ ಮತ್ತು ಕೆ.ವಿ. ಅಕ್ಷರ. ಬೆಂಗಳೂರು, ಜನ ಪ್ರಕಾಶನ. ಪುಟ ೨.

೧೧. ಪ್ರಜಾವಾಣಿ : ೨೦೦೦ ಡಿಸೆಂಬರ್ ೫ (ಸುದ್ದಿ)

೧೨. ಕನ್ನಡ ಪ್ರಭ : ೨೦೦೦ ಡಿಸೆಂಬರ್ ೫ (ಸುದ್ದಿ)

೧೩. ನಗರಿ ಬಾಬಯ್ಯ, ೧೯೮೭. ಕಗ್ಗತ್ತಲ ಜಗತ್ತಲ್ಲಿ ೯೦ ದಿನ. ಬೆಂಗಳೂರು, ಪ್ರಿಯದರ್ಶಿನಿ ಪ್ರಕಾಶನ. ಪುಟ ೫೧೦.

೧೪. ಓಂಕಾರ್ ಶರದ್, ೨೦೦೦. ಲೋಹಿಯಾ, ಅನು : ಹಸನ್ ನಯೀಂ ಸುರಕೋಡ್. ಬಳ್ಳಾರಿ, ಲೋಹಿಯಾ ಪ್ರಕಾಶನ. ಪುಟ ೨೦೨.

೧೫. ಕರ್ನಾಟಕ ಸರಕಾರ, ರಾಜ್ಯ ಬಂದಿಖಾನೆ ಇಲಾಖೆ, ೧೯೯೬. ಕರ್ನಾಟಕ ಕಾರಾಗೃಹ ಕೈಪಿಡಿ ೧೯೭೮ ಸಂಪುಟ ೧-೨. ಬೆಂಗಳೂರು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ. ಪುಟ ೧೫೫.

೧೬. ನೀಲಾ, ಕೆ., ೨೦೦೧. ಬದುಕು ಬಂದಿಖಾನೆ. ಬೆಂಗಳೂರು, ಅಖಿಲ ಭಾರತ ಜನವಾದಿ ಮಹಿಳಾ ಸಂಘಟನೆ. ಪುಟ ೪೯.

೧೭. ಗೋವಿಂದರಾಜು, ಕೆ., ೨೦೦೦. ಮನವಿಲ್ಲದವರ ಮಧ್ಯೆ. ಮೈಸೂರು, ಅಭಿರುಚಿ ಪ್ರಕಾಶನ. ಪುಟ ೨೦೬.

೧೮. ನಗರಿ ಬಾಬಯ್ಯ, ೧೯೮೭. ಕಗ್ಗತ್ತಲ ಜಗತ್ತಲ್ಲಿ ೯೦ ದಿನ. ಬೆಂಗಳೂರು, ಪ್ರಿಯದರ್ಶಿನಿ ಪ್ರಕಾಶನ. ಪುಟ ೨೮.

೧೯. Mulla A.N., Chairman, 1983. Report of the All India Committee on Jail Reforms 1980-83, Vol. 1. New Delhi, Ministry of Home Affairs. Pp. 7.

೨೦. Government of Karnataka, 1988. Karnataka State Gazetter : Mysore District. Pp. 539-547.

೨೧. ಕರ್ನಾಟಕ ಸರಕಾರ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ೧೯೮೭. ಭಾರತದ ಗ್ಯಾಸೆಟಿಯರ್ ಸಂಪುಟ ೪ : ಆಡಳಿತ ಮತ್ತು ಸಮಾಜ ಕಲ್ಯಾಣ. ಬೆಂಗಳೂರು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ. ಪುಟ ೪೭೦.

೨೨. ಮಾಜಿ ಕೈದಿ (ಬಾಲಾಪರಾಧಿ)ಯಾಗಿದ್ದು ಇದೀಗ ವಿಜಾಪುರದ ಖ್ಯಾತ ಕ್ರಿಮಿನಲ್ ವಕೀಲರೆನಿಸಿಕೊಂಡಿರುವ ಮದನ ಮೋಹನ (ಹೆಸರು ಬದಲಿಸಿದೆ) ಅವರ ಜತೆ ೮.೪.೨೦೦೧ ರಂದು ನಡೆಸಿದ ಮಾತುಕತೆಯ ಮಾಹಿತಿ.

೨೩. ಕ್ಷೇತ್ರಕಾರ್ಯದ ಸಂದರ್ಭ ಕೈದಿಗಳಿಂದ ಪಡೆದ ಮಾಹಿತಿ.

೨೪. ೩೧.೧೨.೨೦೦೦ ರಂದು ರಾಜ್ಯ ಬಂದಿಖಾನೆ ಇಲಾಖೆಯ ಮಹಾನಿರೀಕ್ಷಕರಾದ ಎಲ್.ರೇವಣಸಿದ್ಧಯ್ಯ ಅವರ ಜತೆ ನಡೆಸಿದ ಮಾತುಕತೆಯ ಮಾಹಿತಿ.

೨೫. ನೆಹರೂ, ಜವಾಹರಲಾಲ್, ೧೯೪೭. ಭಾರತ ದರ್ಶನ ಅನು: ಸಂ ವಾ ಕೃಷ್ಣಮೂರ್ತಿರಾವ್, ಮೈಸೂರು, ಕಾವ್ಯಾಲಯ. ಪುಟ ೧-೨

೨೬. ಕರ್ನಾಟಕ ಸರಕಾರ, ರಾಜ್ಯ ಬಂದಿಖಾನೆ ಇಲಾಖೆ, ೧೯೯೬. ಕರ್ನಾಟಕ ಕಾರಾಗೃಹ ಕೈಪಿಡಿ, ೧೯೭೮. ಬೆಂಗಳೂರು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ. ಪುಟ ೧೩೮-೧೩೯.

ಅಧ್ಯಾಯ ೬

# ಕೈದಿಗಳ ಮನಪರಿವರ್ತನೆಯಲ್ಲಿ ಬಂದಿಖಾನೆ ಸುಧಾರಣಾ ಸಮಿತಿಗಳ ಪಾಲುದಾರಿಕೆ

೬

# ಕೈದಿಗಳ ಮನಪರಿವರ್ತನೆಯಲ್ಲಿ ಬಂದಿಖಾನೆ ಸುಧಾರಣಾ ಸಮಿತಿಗಳ ಪಾಲುದಾರಿಕೆ

ಭಾರತದಲ್ಲಿ ಕಂಪನಿ ಸರಕಾರದ ಆಡಳಿತ ಆರಂಭಗೊಳ್ಳುವುದರೊಂದಿಗೆ ಸೆರೆಮನೆಗಳ ಆಡಳಿತವೂ ಒಂದು ಸ್ಪಷ್ಟರೂಪ ತಳೆಯತೊಡಗಿತ್ತು. ಅಲ್ಲಿ ಆಂಗ್ಲರ ತವರೂರು ಇಂಗ್ಲೆಂಡಿನಲ್ಲಿ ೧೮ನೆಯ ಶತಮಾನದ ಅಂತ್ಯ ಹಾಗೂ ೧೯ನೆಯ ಶತಮಾನದ ಆದಿಯಲ್ಲಿ ಜಾನ್ ಹಾವರ್ಡ್ ಮತ್ತು ಶ್ರೀಮತಿ ಎಲಿಜಬೆತ್ ಫ್ರಾಯಂ ಅವರು ಬ್ರಿಟಿಷ್ ಸೆರೆಮನೆಗಳ ಹೀನಸ್ಥಿತಿಯ ಬಗ್ಗೆ ಉಗ್ರ ಹೋರಾಟವನ್ನು ಆರಂಭಿಸಿ, ಸೆರೆಮನೆಗಳ ಸ್ಥಿತಿಗತಿಗಳನ್ನು ಸುಧಾರಿಸಲು ದೊಡ್ಡ ಆಂದೋಲನವನ್ನೇ ಆರಂಭಿಸಿದ್ದು, ಭಾರತದಲ್ಲೂ ಅದು ಪ್ರತಿಧ್ವನಿಸುವಂತಾಯ್ತು. ಇಂಗ್ಲೆಂಡಿನಲ್ಲಿಯೇ ಆಗ ಸೆರೆಮನೆಗಳ ಸ್ಥಿತಿ ಅಷ್ಟೊಂದು ಹೀನ ಮಟ್ಟದಲ್ಲಿರಬೇಕಾದರೆ, ಭಾರತದ ಸೆರೆಮನೆಗಳ ಅಂದಿನ ಸ್ಥಿತಿಗತಿಗಳು ಹೇಗಿದ್ದಿರಬಹುದು ಎಂಬುದನ್ನು ನಾವು ಕಲ್ಪಿಸಿಕೊಳ್ಳಬಹುದು.

ಭಾರತದಲ್ಲಿ ಕಂಪನಿ ಸರಕಾರದ ಅಧಿಪತ್ಯದ ಆದಿಯಲ್ಲಿ ಅಪರಾಧ ಸಂಹಿತೆಯಡಿ ಅಪರಾಧಿಗೆ ಸೆರೆಮನೆವಾಸದ ಶಿಕ್ಷೆ ಜಾರಿಯಾದೊಡನೆ ಆತನನ್ನು ಸಮಾಜದ ಮುಖ್ಯವಾಹಿನಿಯಿಂದ ಬೇರ್ಪಡಿಸಿ ಸೆರೆಮನೆಗೆ ತಳ್ಳಲಾಗುತ್ತಿತ್ತು. 'ಸೆರೆಮನೆವಾಸ' ಎಂಬುದೇ ಒಂದು ಶಿಕ್ಷೆಯಾಗಿರಬೇಕಾದರೆ 'ಸೆರೆಮನೆ' ಎಂಬ ವ್ಯವಸ್ಥೆ ಎಷ್ಟು ಘೋರ - ಕ್ರೂರ ವ್ಯವಸ್ಥೆಯಾಗಿರಬಹುದು - ಎಷ್ಟು ಯಾತನಾಮಯವಾಗಿರಬಹುದು? ಅದು ರೆಕ್ಕೆ ಕತ್ತರಿಸಿದ ಹಕ್ಕಿಯದ್ದೇ ಸ್ಥಿತಿ ಎಂಬುದು ಸ್ಪಷ್ಟವಾಗುತ್ತದೆ.

ಇಂದಿನ ನಮ್ಮ ಬಂದಿಖಾನೆ ಆಡಳಿತದಲ್ಲೂ ಬ್ರಿಟಿಷ್ ಕಾಲದ ಬಂದಿಖಾನೆ ಆಡಳಿತದ 'ಪಳೆಯುಳಿಕೆ'ಗಳು ಗೋಚರವಾಗುತ್ತಿದ್ದರೂ, ಬದಲಾಗುತ್ತಿರುವ ಸಾಮಾಜಿಕ ಪರಿಸ್ಥಿತಿ - ಮೌಲ್ಯಕ್ಕನುಗುಣವಾಗಿ ಇಂದಿನ ಬಂದಿಖಾನೆ ಹಾಗೂ ಬಂದಿಖಾನೆ ಆಡಳಿತ - ಬಂದಿಖಾನೆ ವಾಸದ ಶಿಕ್ಷೆಯಲ್ಲಿ ಮಹತ್ತರ ಬದಲಾವಣೆಗಳಾಗಿವೆ. ಈ ಬದಲಾವಣೆಗಳ ಹಿಂದಿರುವ ಶಕ್ತಿಗಳೆಂದರೆ ಇಂದಿನ ಸಾಮಾಜಿಕ ಪರಿಸರ - ಪರಿಸ್ಥಿತಿ - ಬೆಳವಣಿಗೆಯ ಬಗ್ಗೆ

ಸಂಪೂರ್ಣ ಅರಿವಿರುವ, ಕಟ್ಟೆಚ್ಚರದ ಕಣ್ಣಿಟ್ಟಿರುವ ಜೈಲು ಸುಧಾರಣಾ ಸಮಿತಿಗಳು. ಈ ಜೈಲು ಸುಧಾರಣಾ ಸಮಿತಿಗಳು ಸ್ವಾತಂತ್ರ್ಯಾನಂತರದ ಆಲೋಚನಾ ಕೂಸುಗಳಲ್ಲ. ಅಥವ ಬ್ರಿಟಿಷ್ ಕಾಲದಲ್ಲಿ ಜೈಲು ಸುಧಾರಣಾ ಸಮಿತಿಗಳು ಇರಲಿಲ್ಲವೆಂದಲ್ಲ. ಕಂಪನಿ ಸರಕಾರದ ಮುಖ್ಯಸ್ಥಿಕೆ ವಹಿಸಿದ್ದ ಲಾರ್ಡ್ ವಿಲಿಯಂ ಬೆಂಟಿಂಕನ ಕಾಲದಲ್ಲೇ ಬಂದಿಖಾನೆಗಳ ಸುಧಾರಣೆಯ ಬಗ್ಗೆ ಹೊಸ ಗಾಳಿ ಬೀಸಿ ಬಂದಿತ್ತು. ಅದು ಪಾಶ್ಚಾತ್ಯ ದೇಶಗಳಿಂದ. ಕಂಪನಿ ಸರಕಾರ ಈ 'ಹೊಸಗಾಳಿ'ಗೆ ಸ್ಪಂದಿಸಬೇಕೆನ್ನುವಷ್ಟರಲ್ಲಿ, ಸರಕಾರದ ಮುಖ್ಯಸ್ಥ ಲಾರ್ಡ್ ವಿಲಿಯಂ ಬೆಂಟಿಂಕನಿಗೆ, ಸಮಯೋಚಿತ ಸಲಹೆಗಳನ್ನು ಹಾಗೂ ನ್ಯಾಯ ಸಂಬಂಧಿ ವಿಚಾರಗಳ ಬಗ್ಗೆ ಎಚ್ಚರಿಕೆ ನೀಡುತ್ತಿದ್ದ ಲಾರ್ಡ್ ಮೆಕಾಲೆಯು ಭಾರತೀಯ ಸೆರೆಮನೆಗಳ ಅಮಾನವೀಯ ದುಸ್ಥಿತಿಯ ಸ್ಪಷ್ಟ ಚಿತ್ರಣವನ್ನು ಸರಕಾರದ ಮುಂದಿಟ್ಟಿದ್ದ. ಮೊಟ್ಟ ಮೊದಲ ಬಾರಿಗೆ ತಾನು ಕಂಡ ಸೆರೆಮನೆಗಳ ಭೀಕರ ಚಿತ್ರಣವನ್ನು ಆತ ಯಥಾವತ್ತಾಗಿ ಕಂಪನಿ ಸರಕಾರದ ಮುಂದಿಟ್ಟಾಗ ಭಾರತೀಯರನ್ನು ಗುಲಾಮರಿಗಿಂತಲೂ ಕಡೆಯಾಗಿ ನೋಡುತ್ತಿದ್ದ ಆ ಸರಕಾರದ ಅಂತಃಕರಣವೂ ಕರಗಿತ್ತಲ್ಲದೆ ಅದು ತಲ್ಲಣಗೊಂಡಿತ್ತು.

೧೮೩೫ರ ಡಿಸೆಂಬರ್ ೨೧ರಂದು ಲಾರ್ಡ್ ಮೆಕಾಲೆ ಭಾರತೀಯ ಬಂದಿಖಾನೆಗಳ ಕರುಣಾಜನಕ ಸ್ಥಿತಿಯನ್ನು ಸರಕಾರದ ಮುಖ್ಯಸ್ಥನಿಗೆ ವಿವರಿಸುತ್ತ 'ಯಾವುದೇ ಉತ್ತಮ ಅಪರಾಧ ಸಂಹಿತೆ ನಮ್ಮ ಸಮುದಾಯಕ್ಕೆ ಪರಿಣಾಮಕಾರಿಯಾಗಿ ಉಪಯುಕ್ತವಾಗಬೇಕಾದರೆ ವಿಧಿಸಿರುವ ಶಿಕ್ಷೆಯನ್ನು ಅತ್ಯುತ್ತಮ ರೀತಿಯಲ್ಲಿ ಕಾರ್ಯಗತಗೊಳಿಸಲು ನುರಿತ ಕಾರ್ಯತಂಡ ಹಾಗೂ ವ್ಯವಸ್ಥೆ ಇರತಕ್ಕದ್ದು' [೧] ಎಂದು ಕಂಪನಿ ಸರಕಾರವನ್ನು ಬಂದಿಖಾನೆ ಆಡಳಿತ ಸುಧಾರಣೆಯ ಅನಿವಾರ್ಯತೆ - ಅಗತ್ಯತೆಯ ಬಗ್ಗೆ ಎಚ್ಚರಿಸಿದ್ದ.

ಆತ ೧೮೩೫ರಲ್ಲಿ ಕಲ್ಕತ್ತದ ಆಲಿಪುರ ಜೈಲೊಂದರ ಸ್ಥಿತಿಯನ್ನೆ ಕಂಡು ಮಮ್ಮಲ ಮರುಗಿ 'ಇದು ಮಾನವತೆಗೊಂದು ಆಘಾತ' ಮತ್ತು 'ನಮ್ಮ ಸರಕಾರಕ್ಕೆ ತರುವ ಅಗೌರವ' ಎಂದು ಉದ್ಗರಿಸಿದನಲ್ಲದೆ, ಸಾವಿರಾರು ಮಂದಿ ಅತ್ಯಂತ ದಾರುಣ ಹಾಗೂ ಹೀನ ಸ್ಥಿತಿಯಲ್ಲಿರುವ ಅಸಹಾಯಕ ಕೈದಿಗಳನ್ನು, ನಾಲ್ಕು ಗೋಡೆಗಳ ಮಧ್ಯೆ ಯಾವುದೇ ಮೂಲಭೂತ ವ್ಯವಸ್ಥೆಗಳಿಲ್ಲದೆ ಒತ್ತಿಟ್ಟಿರುವ ರೀತಿ ಹಾಗೂ ಆ ಭೀಕರ ಲೋಕಕ್ಕೆ ಯಾರೂ ನಿರ್ಭಿತರಾಗಿ ಪ್ರವೇಶಿಸಲಾಗದಂತಹ ಪರಿಸ್ಥಿತಿಯನ್ನು ಕಂಡು ಬೆಚ್ಚಿದ್ದ. ಈ ಸೆರೆಮನೆಯ ಸ್ಥಿತಿಯನ್ನೂ ವಿಲಿಯಂ ಬೆಂಟಿಂಕನಿಗೆ ಮನವರಿಕೆ ಮಾಡಿಕೊಟ್ಟು ತಕ್ಷಣವೇ ದೇಶದ ಎಲ್ಲ ಬಂದಿಖಾನೆಗಳ ಸ್ಥಿತಿ-ಗತಿಗಳ ಅಧ್ಯಯನ ನಡೆಸಲು, ಹಾಗೂ ಬಂದಿಖಾನೆಗಳ ಆಡಳಿತವನ್ನು ಸುಧಾರಿಸುವದರ ಜತೆಗೆ, ಅಲ್ಲಿ ಶಿಸ್ತನ್ನೂ ಮೂಡಿಸುವ ಬಗ್ಗೆ ಸಲಹೆ - ಶಿಫಾರಸನ್ನು ಪಡೆಯಲು ಸಮಿತಿಯೊಂದನ್ನು ನೇಮಕ ಮಾಡಬೇಕೆಂದು ಬೆಂಟಿಂಕನನ್ನು ಸಲಹೆಯ ರೂಪದಲ್ಲಿ ಒತ್ತಾಯಿಸಿದ್ದ.

ಲಾರ್ಡ್ ಮೆಕಾಲೆಯ ಸಲಹೆಯಂತೆ ಲಾರ್ಡ್ ಬೆಂಟಿಂಕ್‌ನು ಬಂದಿಖಾನೆ ಶಿಸ್ತು ಸಮಿತಿ, ೧೮೩೬ (Prison Discipline Committee ೧೮೩೬ರನ್ನು) ನ್ನು ಜನವರಿ ೨, ೧೮೩೬ ರಂದು ನೇಮಕಮಾಡಿದ. ಭಾರತದ ಇತಿಹಾಸದಲ್ಲೇ ಇದು ಪ್ರಥಮ ಬಂದಿಖಾನೆ ಸುಧಾರಣಾ ಸಮಿತಿ. ಈ ಸಮಿತಿಯ ನೇರ ಉದ್ದೇಶ ಕೈದಿಗಳ ಮನಪರಿವರ್ತನೆ ಅಲ್ಲದಿದ್ದರೂ ಬಂದಿಖಾನೆಗಳ ಆಡಳಿತವನ್ನು ಸುಧಾರಿಸಿ, ಕೈದಿ - ಸಿಬ್ಬಂದಿಗಳಲ್ಲಿ ಶಿಸ್ತು

ಪರಿಪಾಲನೆ ಮಾಡುವ ಉದ್ದೇಶವಿದ್ದುದರಿಂದ ಹಾಗೂ ಅದರ ಪರೋಕ್ಷವಾದ ಉದ್ದೇಶ ಮನಪರಿವರ್ತನೆಯೇ ಆಗಿರುವುದರಿಂದ ಕೈದಿಗಳ ಮನಪರಿವರ್ತನೆಯಲ್ಲೂ ಈ ಸಮಿತಿಯ ಪಾಲುದಾರಿಕೆ ಸ್ಪಷ್ಟವಾಗಿದೆ.

## ೧.೧ ೧೮೩೬ರ ಬಂದಿಖಾನೆ ಶಿಸ್ತು ಸಮಿತಿ

ಲಾರ್ಡ್ ಮೆಕಾಲೆಯನ್ನೊಳಗೊಂಡಂತೆ ಹಲವು ರಾಷ್ಟ್ರನಾಯಕರು, ನ್ಯಾಯಶಾಸ್ತ್ರಜ್ಞರು ಈ ಸಮಿತಿಯ ಸದಸ್ಯರು. ದೇಶದಾದ್ಯಂತ ಸಂಚರಿಸಿ ಸೆರೆಮನೆ ಪರಿಸ್ಥಿತಿಯ ಅಧ್ಯಯನ ನಡೆಸಿದ ಈ ಸಮಿತಿ, ೧೮೩೮ರಲ್ಲಿ ಕಂಪನಿ ಸರಕಾರಕ್ಕೆ ತನ್ನ ವರದಿ - ಶಿಫಾರಸುಗಳನ್ನು ಸಲ್ಲಿಸುವಾಗ ವಿಲಿಯಂ ಬೆಂಟಿಂಕನ ಸ್ಥಾನವನ್ನು ಗವರ್ನರ್ ಜನರಲ್ ಲಾರ್ಡ್ ಆಕ್‌ಲ್ಯಾಂಡ್ ವಹಿಸಿಕೊಂಡಾಗಿತ್ತು. ಲಾರ್ಡ್ ಆಕ್‌ಲ್ಯಾಂಡ್ ಕೂಡಾ ಭಾರತೀಯ ಸೆರೆಮನೆಗಳ ಸ್ಥಿತಿಗತಿಯ ಬಗ್ಗೆ ತಿಳಿದು ತಲ್ಲಣಗೊಂಡ ಸ್ಥಿತಿಯಲ್ಲಿದ್ದಾಗಲೆ ಮೊದಲ ಸಮಿತಿ ತನ್ನ ವರದಿ - ಶಿಫಾರಸನ್ನು ಸರಕಾರಕ್ಕೆ ಸಲ್ಲಿಸಿತ್ತು. ಆ ವರದಿಯನ್ನು ಕಂಡು ಇಡೀಯ ಕಂಪನಿ ಸರಕಾರವೇ ತಲ್ಲಣಗೊಂಡಿತ್ತು.

ಆ ಬಂದಿಖಾನೆ ಶಿಸ್ತು ಸಮಿತಿ, ಭಾರತೀಯ ಬಂದಿಖಾನೆಗಳೊಳಗಿರುವ ವಿಪರೀತ ಭ್ರಷ್ಟಾಚಾರ, ಅಶಿಸ್ತು, ಕೈದಿಗಳನ್ನು ಸಾರ್ವಜನಿಕ ರಸ್ತೆಯಲ್ಲಿ ಅತ್ಯಂತ ಹೀನಾಯವಾಗಿ ದುಡಿಸಿಕೊಳ್ಳುತ್ತಿದ್ದ ಬಗ್ಗೆ, ಮನುಷ್ಯರಂತೆ ನಡೆಸಿಕೊಳ್ಳದೆ ಪ್ರಾಣಿಗಳಂತೆ ಕ್ರೌರ್ಯದಿಂದ ನಡೆಸಿಕೊಳ್ಳುತ್ತಿದ್ದ ಪರಿ... . ಇವೆಲ್ಲವನ್ನು ಸಮಿತಿ ತನ್ನ ವರದಿಯಲ್ಲಿ ಸ್ಪಷ್ಟವಾಗಿ ವಿವರಿಸಿತ್ತು. ಕೈದಿಗಳು ಈ ಹೀನ ವ್ಯವಸ್ಥೆಯಿಂದ ಕಂಗೆಟ್ಟು ರೋಸಿ, ತಮ್ಮ ಮನಸ್ಥಿತಿಯನ್ನು ಅಸಹಜವಾಗಿರಿಸಿಕೊಂಡು ತಾವೂ ಕ್ರೌರ್ಯದ ಪರಕಾಷ್ಠೆಯನ್ನು ತಲಪಿರುವ ಬಗ್ಗೆ ಸಮಿತಿ ತನ್ನ ವರದಿಯಲ್ಲಿ ಎತ್ತಿ ತೋರಿಸಿತಲ್ಲದೆ, ಕೈದಿಗಳ ಕೆಟ್ಟಿರುವ ಮನಸ್ಥಿತಿಯಿಂದ ಸೆರೆಮನೆಯೊಳಗಿನ ಪರಿಸ್ಥಿತಿ ಮತ್ತಷ್ಟು ಕೆಡಬಹುದಲ್ಲದೆ - ಸುಧಾರಿಸಲಾರದೆಂಬ ಭೀತಿಯಿಂದ ಸಮಿತಿಯು ಕೈದಿಗಳ ಗುಣನಡತೆಗೆ ತಕ್ಕಂತೆ ಅವರಿಗೆ ಧಾರ್ಮಿಕ, ನೈತಿಕ ಬೋಧನೆಗಳನ್ನು ನೀಡುವುದಲ್ಲದೆ, ಜತೆಗೆ ಸಾಂಪ್ರದಾಯಿಕ ಶಿಕ್ಷಣವನ್ನು ಹಾಗು ಮನಪರಿವರ್ತನೆಗೆ ಸಾಧ್ಯವಾಗುವಂತಹ ಹಲವಾರು ಪ್ರೋತ್ಸಾಹಕ ಕಾರ್ಯಕ್ರಮಗಳನ್ನು ಕೈಗೊಳ್ಳುವಂತೆ ಶಿಫಾರಸು ಮಾಡಿತ್ತು.

ಈ ಸಮಿತಿ ಪ್ರತೀ ಪ್ರಾಂತ್ಯದಲ್ಲೂ ಸಾಕಷ್ಟು ಸ್ಥಳಾವಕಾಶವಿರುವಂತಹ ಕೇಂದ್ರ ಬಂದಿಖಾನೆಗಳನ್ನು ನಿರ್ಮಿಸಬೇಕೆಂಬ ಸಲಹೆಯನ್ನು ನೀಡಿತಲ್ಲದೆ, ಕೈದಿಗಳನ್ನು ಕಿತ್ತು ತಿನ್ನುವ ಭೀಕರ ಏಕತಾನತೆಯ ಬದುಕು - ದೈಹಿಕ ಹಿಂಸೆಗಳನ್ನು ನೀಡುವಂತಹ ಕಠಿಣ, ಸದುದ್ದೇಶರಹಿತ ದುಡಿಮೆಗಳಿಂದ ರಕ್ಷಿಸಲು ಬಂದಿಖಾನೆಗಳೊಳಗೆ ಎಲ್ಲ ಕೈದಿಗಳಿಗೂ ಔದ್ಯೋಗಿಕ ಅವಕಾಶಗಳನ್ನು ನೀಡಬಲ್ಲ ಉದ್ಯಮಗಳನ್ನು ನಿರ್ಮಿಸುವುದು ಹಾಗೂ ಅರ್ಥಪೂರ್ಣವಾದ ಹಾಗೂ ಅವರ ಮನಸ್ಸಿಗೆ ಉಲ್ಲಾಸ ಮತ್ತು ಪುನರ್ವಸತಿ ನೀಡುವಂತಾ ಸದಭಿರುಚಿಯ ಉದ್ಯಮಗಳಲ್ಲಿ ತೊಡಗಿಸುವುದು; ಜತೆಗೆ ಹೀಗೆ ಶ್ರಮವಹಿಸಿ ದುಡಿಯುವುದರಿಂದ ಶಿಕ್ಷೆಯ ಅವಧಿ ಕಡಿಮೆಯಾಗುವಂತಹ ಪ್ರೋತ್ಸಾಹಕರವಾದ ದುಡಿಮೆಯ ವಾತಾವರಣವನ್ನು ನಿರ್ಮಾಣ ಮಾಡಬೇಕೆಂದು ಸಮಿತಿಯು ಸಲಹೆ ನೀಡಿತ್ತು.

ಈ ಸಮಿತಿಯ ಶಿಫಾರಸು ಮತ್ತು ಸಲಹೆಗಳ ಆಶಯ ಒಳ್ಳೆಯದಾಗಿದ್ದರೂ ಕೆಲವೊಂದು ರಾಜಕೀಯ ಕಾರಣಗಳಿಂದಾಗಿ ಕೈದಿಗಳ ಮನಪರಿವರ್ತನೆಗೆ ಪೂರಕವಾಗಬೇಕಾದ ಶಿಫಾರಸುಗಳನ್ನು ಸಂಪೂರ್ಣವಾಗಿ ಕಾರ್ಯಗತಗೊಳಿಸದೆ, ಬಂದಿಖಾನೆಗಳ ಸಿಬ್ಬಂದಿ ಹಾಗೂ ಕೈದಿಗಳಲ್ಲಿ ಶಿಸ್ತು ಮೂಡಿಸುವಂತಹ ಹಾಗೂ ಆ ಮೂಲಕ ಆಡಳಿತವನ್ನು ಸುಧಾರಿಸುವಂತಾ ಶಿಫಾರಸುಗಳನ್ನು ಮಾತ್ರವೇ ಕಂಪನಿ ಸರಕಾರ ಜಾರಿಗೆ ತಂದಿತ್ತು.

## ೧.೨ ೧೮೬೪ರ ಬಂದಿಖಾನೆ ಆಡಳಿತ ಹಾಗೂ ಶಿಸ್ತು ವಿಚಾರಣಾ ಆಯೋಗ (Commission of Enquiry in to Jail Management and Discepline)

ಲಾರ್ಡ್ ವಿಲಿಯಂ ಬೆಂಟಿಂಕನ ಕಾಲದಲ್ಲಿ ನೇಮಕಗೊಂಡ ಬಂದಿಖಾನೆ ಶಿಸ್ತು ಸಮಿತಿ (೧೮೩೬ - ೩೮) ಯ ನಂತರ, ೧೮೬೪ರಲ್ಲಿ ಸರ್ ಜಾನ್‌ಲಾರೆನ್ಸ್ ಭಾರತೀಯ ಬಂದಿಖಾನೆಗಳ ಸ್ಥಿತಿ -ಗತಿಗಳನ್ನು ಪರಿಶೀಲಿಸಿ, ಅಲ್ಲಿನ ಪರಿಸ್ಥಿತಿಯನ್ನು ಕಂಪನಿ ಸರಕಾರದ ಮುಖ್ಯಸ್ಥ ಲಾರ್ಡ್ ಡಾಲ್‌ಹೌಸಿಯ ಗಮನಕ್ಕೆ ಬಂದಾಗ ಆತ ತಕ್ಷಣವೇ ಪರಿಸ್ಥಿತಿಯ ಗಂಭೀರತೆಯನ್ನು ಅರ್ಥೈಸಿಕೊಂಡು ಅದೇ ವರ್ಷ, ಬಂದಿಖಾನೆ ಆಡಳಿತ ಮತ್ತು ಶಿಸ್ತು ವಿಚಾರಣಾ ಆಯೋಗವೊಂದನ್ನು ನೇಮಿಸಿದ. ಈ ಸಮಿತಿಯ ನೇಮಕದ ಪ್ರಮುಖ ಉದ್ದೇಶ ಬಂದಿಖಾನೆಯ ಆಡಳಿತ ಮತ್ತು ಶಿಸ್ತಲ್ಲಿ ಮಹತ್ತರ ಸುಧಾರಣೆಯನ್ನು ತರುವುದಾಗಿತ್ತೇ ವಿನಾ ಕೈದಿಗಳ ಮನಪರಿವರ್ತನೆಯ ನೇರ ಉದ್ದೇಶ ಅತ್ಯಲ್ಪವಾಗಿತ್ತು. ಸಮಿತಿಯು ಭಾರತೀಯ ಬಂದಿಖಾನೆಗಳ ಆಡಳಿತ ಮತ್ತು ಶಿಸ್ತಿನ ಪರಿಸ್ಥಿತಿಯನ್ನು ಸೂಕ್ಷ್ಮವಾಗಿ ಅವಲೋಕಿಸಿ ನೀಡಿದ ವರದಿ ಹಾಗೂ ಮಾಡಿರುವ ಸಲಹೆ - ಶಿಫಾರಸುಗಳು, ಬೆಂಟಿಂಕನ ಕಾಲದ (೧೮೩೬ರ) ಸಮಿತಿ ನೀಡಿದ್ದ ಸಲಹೆ - ಶಿಫಾರಸುಗಳ ಪರಿಷ್ಕೃತ ರೂಪವೇ ಆಗಿತ್ತು.

ಬಂದಿಖಾನೆಯಲ್ಲಿ ಶಿಸ್ತು ಕಾಪಾಡುವ ಮೂಲಕ ಕೈದಿಗಳಲ್ಲಿ ಶಿಸ್ತು ಮೂಡಿಸುವ ಬಗ್ಗೆ ಹೆಚ್ಚಿನ ಆಸ್ಥೆ ವಹಿಸಿದ್ದ ಈ ಸಮಿತಿ, ಕೈದಿಗಳಿಗೆ ವಸತಿ, ಆಹಾರ, ಬಟ್ಟೆ, ಹಾಸಿಗೆ, ವೈದ್ಯಕೀಯ ಸೌಲಭ್ಯವನ್ನು ಸುಧಾರಿಸಬೇಕೆಂದು ಶಿಫಾರಸು ಮಾಡಿತು. ಪುರುಷ ಕೈದಿಗಳಿಂದ ಮಹಿಳಾ ಕೈದಿಗಳನ್ನು ಹಾಗೂ ವಯಸ್ಕ ಕೈದಿಗಳಿಂದ ಬಾಲಾಪರಾಧಿಗಳನ್ನು ಪ್ರತ್ಯೇಕಿಸಬೇಕೆಂಬ ಸಲಹೆ ನೀಡಿತಲ್ಲದೆ, ಬಂದಿಖಾನೆಗಳಲ್ಲಿ ಶಿಸ್ತು ಕಾಪಾಡುವುದಕ್ಕಾಗಿ ಶಿಸ್ತು ಉಲ್ಲಂಘಿಸುವ ಕೈದಿಗಳನ್ನು ಪ್ರತ್ಯೇಕವಾದ ಚಿಕ್ಕ ಕೊಠಡಿಯಲ್ಲಿ ಏಕಾಂತದಲ್ಲಿ ಬಂಧನ (Solitarty Confinement) ದಲ್ಲಿಡುವುದು, ಆಹಾರದಲ್ಲಿ ಕೊರತೆ ಮಾಡುವುದು, ಚಾಟಿಯೇಟು ಮತ್ತು ಕಠಿಣ ದುಡಿಮೆಯನ್ನು ನೀಡಬೇಕೆಂದು ಈ ಸಮಿತಿ ಶಿಫಾರಸು ಮಾಡಿತು.

ಈ ಎರಡೂ ಸಮಿತಿ (೧೮೩೬ರ ಮತ್ತು ೧೮೬೪ರ)ಗಳ ಬಂದಿಖಾನೆ ಸುಧಾರಣಾ ವರದಿ ಸಮಾಜಶಾಸ್ತ್ರೀಯ ಆಲೋಚನಾ ಕ್ರಮದಲ್ಲಿರದೆ, ಕೇವಲ ಕಂಪನಿ ಸರಕಾರದ ಆಡಳಿತದ ವರ್ಚಸ್ಸಿಗೆ ಯಾವುದೇ ದಕ್ಕೆ, ಸಮಸ್ಯೆ ಬಾರದಂತೆ ಮುಂಜಾಗ್ರತೆ ವಹಿಸಿ ಬಂದಿಖಾನೆಯ ಆಡಳಿತ ಮತ್ತು ಶಿಸ್ತಿನಲ್ಲಿ ಕಟ್ಟುನಿಟ್ಟಿನ ಬದಲಾವಣೆಗಳನ್ನು ಮಾಡುವಂತೆ ಹಲವು ಶಿಫಾರಸುಗಳನ್ನು ಮಾಡಿತೇ ವಿನಾ ಅದು ಕೈದಿಗಳ ಕ್ಷೇಮ ಹಾಗೂ ಮನಪರಿವರ್ತನೆಗೆ ಅಷ್ಟೊಂದು ನೇರ ಪರಿಣಾಮ ಬೀರುವುದಾಗಿರಲಿಲ್ಲ.

ಆದರೆ ಲಾರ್ಡ್ ಮೆಕಾಲೆ ಕಂಡಿದ್ದ ಭಾರತೀಯ ಬಂದಿಖಾನೆಗಳ 'ಭೀಕರ ಚಿತ್ರಣ'ದಲ್ಲಿ ಸಾಕಷ್ಟು ಬದಲಾವಣೆಗಳು ಕಂಡು ಬಂದು, ಕೈದಿಗಳು ಕನಿಷ್ಠ ಮನುಷ್ಯರಂತೆ ಜೀವಿಸುವಂತಾಗಲು ಈ ಸಮಿತಿಗಳು ಕಾರಣವಾದವೆ ವಿನಾ ಅವರನ್ನು ಅಪರಾಧಿ ಮನೋಭಾವದಿಂದ ಮುಕ್ತಗೊಳಿಸಬೇಕೆನ್ನುವ ಹಾಗೂ ಸಮಾಜದಲ್ಲಿ ಮತ್ತೆ ಉತ್ತಮ ಪ್ರಜೆಗಳಾಗಿ ಬದುಕುವಂತೆ ಅವರ ವ್ಯಕ್ತಿತ್ವವನ್ನು ರೂಪಿಸಬೇಕೆಂಬ ಯೋಜನೆಯೊಂದು ಈ ಸಮಿತಿಗಳಿಂದ ಸಾಧ್ಯವಾಗಲಿಲ್ಲ. ಕಂಪನಿ ಸರಕಾರ ಈ ನಿಟ್ಟಿನಲ್ಲಿ ಮತ್ತಷ್ಟು ಅಧ್ಯಯನ ನಡೆಸುವ ಸಲುವಾಗಿ ೧೮೭೭ರಲ್ಲಿ ತಜ್ಞರ ಸಮಾವೇಶವೊಂದನ್ನು ಸಂಘಟಿಸಿತು.

## ೧.೩ ೧೮೭೭ರ ತಜ್ಞರ ಸಮಾವೇಶ

೧೮೭೭ರ ಹೊತ್ತಿಗೆ ದೇಶದಲ್ಲಿ ಒಟ್ಟು ೫ ಬಂದಿಖಾನೆ ಕಾಯಿದೆಗಳಿದ್ದವು. ವಿವಿಧ ರಾಜ್ಯಗಳು, ಪ್ರಾಂತ್ಯಗಳು ತಮ್ಮ ಬಂದಿಖಾನೆಗಳ ಆಡಳಿತವನ್ನು ಈ ಕಾಯಿದೆಗಳಿಂದಲೇ ನಡೆಸುತ್ತಿದ್ದವು.

೧. ಮುಂಬೈ ಪ್ರಾಂತ್ಯದೊಳಗಿನ ಬಂದಿಖಾನೆಗಳ ಆಡಳಿತ ನಿಯಂತ್ರಣ ಕಾಯಿದೆ ೧೮೫೬. (An act for the better control of the jails within the presidency of Bombay, 1956)

೨. ಮುಂಬೈ ನಗರ ಹಾಗೂ ಮುಂಬೈ ಪ್ರಾಂತ್ಯದೊಳಗಿನ ಬಂದಿಖಾನೆಗಳನ್ನು ನಿಯಂತ್ರಿಸುವ ಹಾಗೂ ಶಿಸ್ತನ್ನು ವಿಧಿಸುವ ಕಾಯಿದೆ, ೧೮೬೪ (An act for the regulation of jails in the city and presidency of Bombay and enforcement of discipline therein, 1964)

೩. ಬಂಗಾಳದ ಬಂದಿಖಾನೆಗಳ ನಿಯಂತ್ರಣ ಹಾಗೂ ಶಿಸ್ತನ್ನು ವಿಧಿಸುವ ಕಾಯಿದೆ, ೧೮೬೪ (An act for the regulation of jails and enforcement of discipline therein, Bengal-1864),

೪. ಮದ್ರಾಸ್ ಬಂದಿಖಾನೆಗಳ ಕಾಯಿದೆ, ೧೮೬೯ (Madras jails act, 1869)

೫. ಬಂದಿಖಾನೆಗಳ ಕಾಯಿದೆ, ೧೮೭೦ (Prisons act, 1870)

೧೮೭೦ರ 'ಬಂದಿಖಾನೆಗಳ ಕಾಯಿದೆ'ಯನ್ನು ಮಾತ್ರ ರಚಿಸಿದವರು, ಗವರ್ನರ್ ಜನರಲ್ ಇನ್ ಕೌನ್ಸಿಲ್ ಆಗಿದ್ದರೆ, ಉಳಿದ ೪ ಕಾಯಿದೆಗಳನ್ನು ರಚಿಸಿದವರು ಆಯಾ ಪ್ರಾಂತ್ಯದ ಗವರ್ನರ್ ಇನ್ ಕೌನ್ಸಿಲ್. ಈ ಎಲ್ಲ ಕಾಯಿದೆಗಳು ಆಯಾ ಪ್ರಾಂತ್ಯದ ಬಂದಿಖಾನೆಗಳ ಆಡಳಿತಕ್ಕೆ ಪೂರಕವಾಗಿದ್ದು, ಅತ್ಯುತ್ತಮ ಆಡಳಿತ ನಿಯಮಗಳನ್ನು ಒಳಗೊಂಡಿದ್ದರೂ, ದೇಶದ ಎಲ್ಲ ಬಂದಿಖಾನೆಗಳಲ್ಲೂ ಸಮಾನವಾದ ನಿಯಮ ಹಾಗೂ ಆಡಳಿತದಲ್ಲಿ ಏಕರೂಪತೆ ಸಾಧಿಸಲು ಇದರಿಂದ ಸಾಧ್ಯವಾಗಲಿಲ್ಲ.

ದೇಶದ ಬಂದಿಖಾನೆಗಳ ಆಡಳಿತ ನಿಯಮ, ಶಿಕ್ಷಾ ಅವಧಿಯಲ್ಲಿ ಏಕರೂಪತೆ ಸಾಧಿಸಬೇಕೆನ್ನುವ ಕಾರಣದಿಂದ '೧೮೭೭ರ ತಜ್ಞರ ಸಮಾವೇಶ'ದಲ್ಲಿ ಈ ವಿಷಯವನ್ನು ಪ್ರಮುಖವಾಗಿ ಪ್ರಸ್ತಾಪಿಸಲಾಯಿತು. ಎಲ್ಲ ರಾಜ್ಯಗಳಿಗೂ

ಸಮಾನವಾಗಿ ಅನ್ವಯಿಸುವಂತಹ ದೇಶಕ್ಕೊಂದು ಅಧಿನಿಯಮವನ್ನು (Enactment) ರೂಪಿಸಲು ಕರಡು ಪ್ರತಿಯೊಂದನ್ನು ಸಮಾವೇಶದಲ್ಲಿ ಸಿದ್ಧಪಡಿಸಲಾಯಿತು. ಆದರೆ ಆ ಸಂದರ್ಭದಲ್ಲಿ ದೇಶದಲ್ಲಿ ರಾಜಕೀಯ ಅರಾಜಕತೆ ಏಳಲಾಗಿ ಆ ಸಮಾವೇಶದ ನಿರ್ಣಯ ಹಾಗೂ ಅಧಿನಿಯಮದ ಕರಡು ಪ್ರತಿ ಹಾಗೆಯೇ ಮೂಲೆಸೇರಿತು.

## ೧.೪ ೧೮೮೮ರ ನಾಲ್ಕನೇ ಬಂದಿಖಾನೆ ಆಯೋಗ

೧೮೮೮ರಲ್ಲಿ ನಾಲ್ಕನೇ ಬಂದಿಖಾನೆ ಆಯೋಗವೊಂದು ಲಾರ್ಡ್ ಡರ್ಫಿನ್ ಕಾಲಾವಧಿಯಲ್ಲಿ ನೇಮಕಗೊಂಡಿತು. ಅದುವರೆಗೂ ಕಂಪನಿ ಸರಕಾರ ಬಂದಿಖಾನೆಗಳ ಆಡಳಿತದಲ್ಲಿ ಅದರಲ್ಲೂ ಬಂದಿಖಾನೆಗಳ ಆರ್ಥಿಕತೆ, ನೈರ್ಮಲ್ಯ, ಶಿಸ್ತಿನ ವಿಚಾರದಲ್ಲಿ ತೀವ್ರ ಸುಧಾರಣೆ ತರಬೇಕೆಂದು ೧೮೩೬, ೧೮೬೪, ೧೮೭೭ರಲ್ಲಿ ಸಮಿತಿ ಆಯೋಗವೊಂದನ್ನು ನೇಮಿಸಿ, ತಜ್ಞರ ಸಮಾವೇಶವೊಂದನ್ನು ನಡೆಸಿದ್ದರೂ, ದೇಶದೆಡೆಯ ಬಂದಿಖಾನೆಗಳ ಆಡಳಿತದಲ್ಲಿ ಏಕರೂಪತೆಯೆಂಬುದನ್ನು ಸಾಧಿಸಲಾಗಿರಲಿಲ್ಲ. ಇದನ್ನು ಬಹಳ ದೊಡ್ಡ ಕೊರತೆಯೆಂದು ಭಾವಿಸಿದ ಸರಕಾರ ಈ ಕೊರತೆಯನ್ನು ನೀಗಿಸಲೆಂದು ೧೮೮೮ರಲ್ಲಿ ಬಂದಿಖಾನೆ ಆಯೋಗವೊಂದನ್ನು ರಚಿಸಿತು. ಈ ಆಯೋಗ ದೇಶದ ಎಲ್ಲ ಪ್ರಾಂತ್ಯಗಳನ್ನು ಸಂದರ್ಶಿಸಿ, ಆಡಳಿತಕ್ಕೆ ಸಂಬಂಧಿಸಿದ ಸಮಸ್ತ ಸಮಸ್ಯೆಗಳ ಪರಿಶೀಲನೆ ನಡೆಸಿ ದೇಶದ ಎಲ್ಲ ಬಂದಿಖಾನೆಗಳಲ್ಲೂ ಏಕರೂಪದ ಆಡಳಿತವನ್ನು ನಡೆಸುವಂತೆ, ದೇಶಕ್ಕೊಂದೆ ಬಂದಿಖಾನೆಗಳ ಕಾಯಿದೆ (Prisons act) ರಚಿಸಬೇಕೆಂದು ಶಿಫಾರಸು ನೀಡಿತು. ಈ ಆಯೋಗದ ಶಿಫಾರಸಿನನ್ವಯ ಆಯೋಗದ ಸಹಕಾರದಿಂದಲೇ ಕಂಪನಿ ಸರಕಾರ ಕ್ರೋಡೀಕೃತ ಬಂದಿಖಾನೆ ಮಸೂದೆ (Consolidated Prisons bill) ಯೊಂದನ್ನು ಸಿದ್ಧಗೊಳಿಸಿತು. ಈ ಆಯೋಗವು ವಿಶೇಷವಾಗಿ ಮಂಡಿಸಿದ್ದ ಅಪರಾಧ ಮತ್ತು ಶಿಕ್ಷೆಯ ಬಗ್ಗೆಯ ವರದಿ ಮತ್ತು ಮತ್ತು ಶಿಫಾರಸುಗಳು, ೧೮೯೨ರಲ್ಲಿ ಕಲ್ಕತ್ತದಲ್ಲಿ ಸಮಾವೇಶಗೊಂಡ ಎಲ್ಲ ಪ್ರಾಂತ್ಯದ ಬಂದಿಖಾನೆ ಆಡಳಿತ ತಜ್ಞರಿಂದ ಪರಿಶೀಲಿಸಲ್ಪಟ್ಟಿತು. ತಜ್ಞರು, ೧೮೮೮ರ ಆಯೋಗದ 'ಕರಡು ಬಂದಿಖಾನೆ ಮಸೂದೆ'ಯಲ್ಲಿ ಬಂದಿಖಾನೆ ಮತ್ತು ಕೈದಿಗಳ ಸುಧಾರಣೆಗೆ ಸಂಬಂಧಪಟ್ಟಂತೆ ತಮ್ಮದೇ ಆದ ಕೆಲವು ನಿರ್ಣಯ - ಶಿಫಾರಸುಗಳನ್ನೂ ಅಳವಡಿಸಿದರು. ಅವುಗಳಲ್ಲಿ ಮುಖ್ಯವಾದವು: ಶಿಸ್ತು - ನಿಯಮಗಳನ್ನು ಉಲ್ಲಂಘಿಸುವ ಕೈದಿಗಳಿಗೆ ಸೆಣಬಿನ ಬಟ್ಟೆ ನೀಡುವುದು, ಕಾಲು-ಕೈಗಳಿಗೆ ಬೇಡಿ-ಕೋಳ ತೊಡಿಸುವುದು. ಆಹಾರದಲ್ಲಿ ಕಡಿತಗೊಳಿಸುವುದು, ಏಕಾಂತ ಜೈಲುವಾಸ ವಿಧಿಸುವುದು, ಚಾಟಿ ಏಟು ನೀಡುವುದು... ಇತ್ಯಾದಿ.

೧೮೮೮ರ ಆಯೋಗದಿಂದ ರಚಿಸಲ್ಪಟ್ಟು, ೧೮೯೨ರಲ್ಲಿ ಸಮಾವೇಶಗೊಂಡ ತಜ್ಞರಿಂದ ಪರಿಷ್ಕೃತಗೊಂಡ ಮಸೂದೆ, ೧೮೯೩ರ ಮಾರ್ಚ್ ೨೫ರಂದು ಆಗಿನ ಕಂಪನಿ ಸರಕಾರದ ಸೆಕ್ರೆಟರಿ ಸಿ.ಜೆ. ಲ್ಯಾಲ್ಲ್ ಅವರ ಮೂಲಕ ದೇಶದ ಎಲ್ಲ ರಾಜ್ಯ ಹಾಗೂ ಪ್ರಾಂತೀಯ ಸರಕಾರಗಳಿಗೂ ರವಾನೆಯಾಗಿ, ಆ ಮಸೂದೆಯ ಬಗ್ಗೆ ರಾಜ್ಯ ಹಾಗೂ ಪ್ರಾಂತೀಯ ಸರಕಾರಗಳ ಪ್ರತಿಕ್ರಿಯೆಯನ್ನು ಬ್ರಿಟಿಷ್ ಸರಕಾರ ನಿರೀಕ್ಷಿಸಿತು. ಎಲ್ಲ ರಾಜ್ಯಗಳಿಂದಲೂ ಅನುಕೂಲ ಪ್ರತಿಕ್ರಿಯೆ ಬಂದೊಡನೆ ೧೮೯೪ರಲ್ಲಿ, ಬಂದಿಖಾನೆ ಕಾಯಿದೆ ೧೮೯೪ನ್ನು (೧೮೯೪ರ Prisons act) ಜಾರಿಗೊಳಿಸಲಾಯಿತು.

೧.೫ ಬಂದಿಖಾನೆ ಕಾಯಿದೆ, ೧೮೯೪

೧೮೯೪ರ ಈ ಬಂದಿಖಾನೆ ಕಾಯಿದೆಯಿಂದ ದೇಶದಲ್ಲಿರುವ ಎಲ್ಲ ಬಂದಿಖಾನೆಗಳಲ್ಲಿ ಏಕರೂಪವಾದ ಆಡಳಿತ ನಿಯಮ - ಶಿಸ್ತನ್ನು ಪಾಲಿಸಲು ಸಾಧ್ಯವಾದಂತಾಯಿತು. ಬಂದಿಖಾನೆಗಳ ಆಡಳಿತ ಸುಧಾರಣೆ ಹಾಗೂ ಕೈದಿಗಳ ಮನಪರಿವರ್ತನೆಗೆ ಸಂಬಂಧಿಸಿದ ಹಲವು ಉತ್ತಮ ಅಂಶಗಳು ಈ ಕಾಯಿದೆಯಲ್ಲಿದ್ದುದರಿಂದ ಇಂದಿಗೂ ಹಲವು ರಾಜ್ಯಗಳ ಬಂದಿಖಾನೆಗಳ ಅಧಿನಿಯಮದಲ್ಲಿ ಈ ನಿಯಮಗಳು ಅಳವಡಿಸಲ್ಪಟ್ಟಿವೆ. ಈ ಕಾಯಿದೆಯಲ್ಲಿರುವ ಉತ್ತಮ ಅಂಶಗಳೆಂದರೆ:

ವಿಕೃತ ಮನಸ್ಸಿನ ಅಪರಾಧಿಗಳ ಅಸಹಜ ಲೈಂಗಿಕ ಪ್ರವೃತ್ತಿಗಳನ್ನು ತಡೆಗಟ್ಟಲು ಬಾಲಾಪರಾಧಿಗಳನ್ನು ತರುಣ ಅಪರಾಧಿಗಳಿಂದ ಬೇರ್ಪಡಿಸುವುದು. ಹಾಗೆಯೇ ಸಿವಿಲ್ ಅಪರಾಧಿಗಳನ್ನು ಕ್ರಿಮಿನಲ್ ಅಪರಾಧಿಗಳಿಂದ ಬೇರ್ಪಡಿಸುವುದು. ಕ್ರಿಮಿನಲ್ ಕೈದಿಗಳಲ್ಲಿನ ಅಪರಾಧಿ ಮನೋಭಾವ ಬೇರೆಯವರಿಗೆ ಹರಡದಂತೆ ಎಚ್ಚರಿಕೆ ವಹಿಸುವುದು. ಬಂದಿಖಾನೆಗಳ ನಿಯಮ ಹಾಗೂ ಶಿಸ್ತನ್ನು ಉಲ್ಲಂಘಿಸುವ ಕೈದಿಗಳನ್ನು ೨೪ ಗಂಟೆಗಿಂತಲೂ ಹೆಚ್ಚು ಪ್ರತ್ಯೇಕ ಕೊಠಡಿಯಲ್ಲಿಡುವ ಸಂದರ್ಭದಲ್ಲಿ ಪ್ರತಿನಿತ್ಯವೂ ಬಂದಿಖಾನೆಯ ವೈದ್ಯಾಧಿಕಾರಿಯೊಬ್ಬ ಆ ಕೈದಿಯನ್ನು ಪರೀಕ್ಷಿಸತಕ್ಕದ್ದು. ಕೈದಿಗೆ ಎಷ್ಟೇ ಉಗ್ರ ಶಿಕ್ಷೆ ವಿಧಿಸಿರಲಿ, ಆದರ ಆತನನ್ನು ೯ ಗಂಟೆಗಿಂತ ಹೆಚ್ಚು ದುಡಿಸತಕ್ಕದಲ್ಲ. ಕೈದಿಗೆ ವಿಧಿಸಿರುವ ದುಡಿಮೆ ಆತನ ಆರೋಗ್ಯಕ್ಕೆ ಮಾರಕವೇ ಅಲ್ಲವೇ ಎಂಬುದನ್ನು ವೈದ್ಯಾಧಿಕಾರಿ ದೃಡಪಡಿಸಿಕೊಳ್ಳತಕ್ಕದ್ದು. ಕೈದಿಯ ಆರೋಗ್ಯಕ್ಕೆ ಆ ದುಡಿಮೆಯಿಂದ ಯಾವ ರೀತಿಯಿಂದಾದರೂ ದಕ್ಕೆ ಒದಗಿದ್ದಲ್ಲಿ ಅದಕ್ಕೆ ವೈದ್ಯಾಧಿಕಾರಿಯೇ ಹೊಣೆಗಾರ. ಬಂದಿಖಾನೆಯ ಅಧೀಕ್ಷಕನಿಗಿಂತ ಕೆಳವರ್ಗದ ಅಧಿಕಾರಿ ಕೈದಿಯ ದೇಹ ದಂಡಿಸುವ ಶಿಕ್ಷೆಯನ್ನು ನೀಡತಕ್ಕದಲ್ಲ. ಮಹಿಳಾ ಕೈದಿಗಳು ಮತ್ತು ಸಿವಿಲ್ ಕೈದಿಗಳಿಗೆ ಇತರ ಪುರುಷ ಕ್ರಿಮಿನಲ್ ಕೈದಿಗಳಿಗೆ ತೊಡಿಸುವಂತೆ ಕೈಗೆ ಕೋಳ, ಕಾಲಿಗೆ ಬೇಡಿ ಎಂದೂ ಹಾಕತಕ್ಕದ್ದಲ್ಲ - ಚಾಟಿ ಏಟೂ ನೀಡತಕ್ಕದ್ದಲ್ಲ. ಬಂದಿಖಾನೆಯ ಆಡಳಿತ ಸುಧಾರಣೆ, ಶಿಸ್ತು ಪಾಲನೆಗೆ ಸಹಕರಿಸಿದ ಬಂದಿಖಾನೆ ಸಿಬ್ಬಂದಿಗಳಿಗೂ ಶಿಕ್ಷೆ ವಿಧಿಸಿ ಶಿಸ್ತುಪಾಲನೆ ಮಾಡತಕ್ಕದ್ದು.

ಈ ಕಾಯಿದೆಯಲ್ಲಿ ಬಂದಿಖಾನೆಯೊಳಗಿನ ಕೈದಿಗಳ ದಾರುಣ ಪರಿಸ್ಥಿತಿಯನ್ನು ಸುಧಾರಿಸುವಂತಾ ಹಲವು ನಿಯಮಗಳಿದ್ದು ಅವು ಬಂದಿಖಾನೆ ಆಡಳಿತ ಸುಧಾರಣೆಗೆ ಹೆಚ್ಚು ಒತ್ತು ಕೊಟ್ಟಿದೆಯಲ್ಲದೆ, ಅಪರಾಧಿ ಮನೋಭಾವವುಳ್ಳ ಅಥವ ಘಾಸಿಗೊಂಡ ಮನಸ್ಥಿತಿಯನ್ನು ಸುಧಾರಿಸುವ ಯಾವುದೇ ಸುಧಾರಣಾ ಕ್ರಮಗಳು - ನಿಯಮಗಳು ಅದರಲ್ಲಿ ಇಲ್ಲದಿರುವುದು ಈ ಕಾಯಿದೆಯ ಋಣಾತ್ಮಕ ಅಂಶ. ಹಾಗೆಯೇ ಈ ಕಾಯಿದೆಯಲ್ಲಿ ಬಂದಿಖಾನೆಯೊಳಗಿನ ಅಪರಾಧಕ್ಕೆ ಮತ್ತು ಶಿಕ್ಷೆಯ ಬಗ್ಗೆಯೇ ಹೆಚ್ಚು ಒತ್ತು ಸಿಕ್ಕಿದೆಯಲ್ಲದೆ, ಆ ನಂತರದ ಪರಿಣಾಮದ ಬಗ್ಗೆ ಯೋಚನೆ ಇದರಲ್ಲಿಲ್ಲ.

೧.೬ ಭಾರತೀಯ ಬಂದಿಖಾನೆಗಳ ಸಮಿತಿ, ೧೯೧೯ - ೨೦

**(Indian jails Committee, 1999-20)**

ಬಂದಿಖಾನೆ ಕಾಯಿದೆ, ೧೮೯೪ಳನ್ನು ದೇಶದೆಲ್ಲೆಡೆಯ ಬಂದಿಖಾನೆಗಳಲ್ಲಿ ಜಾರಿಗೊಳಿಸುವ ಕ್ರಮ ಕೈಗೊಂಡರೂ, ಕಂಪನಿ ಸರಕಾರ ಕೈದಿಗಳ ಪರಿಸ್ಥಿತಿಯಲ್ಲಿ ಮತ್ತಷ್ಟು ಸುಧಾರಣೆ ತರುವ ನಿಟ್ಟಿನಲ್ಲಿ ತನ್ನ ಪ್ರಯತ್ನವನ್ನು ಮುಂದುವರಿಸಿತು. ೧೯೧೯ರಲ್ಲಿ ದೇಶದ ಬಂದಿಖಾನೆಗಳ ಆಡಳಿತ ಸಮಸ್ಯೆಯೇನು? ಕೈದಿಗಳ ಪಾಡೇನು - ಎಂದು ಅಧ್ಯಯನ ನಡೆಸಲು ಮತ್ತೊಂದು ಸಮಿತಿಯನ್ನು ರಚಿಸಿತು. ಇದು ಭಾರತೀಯ ಬಂದಿಖಾನೆಗಳ ಸಮಿತಿ, ೧೯೧೯ - ೨೦. ಈ ಸಮಿತಿ ಸಲ್ಲಿಸಿದ ವರದಿಯಂತು ದೇಶದ ಬಂದಿಖಾನೆಗಳ ಇತಿಹಾಸದಲ್ಲೇ ಒಂದು ಮಹತ್ತರವಾದ ಮೈಲಿಗಲ್ಲು. ಈ ಸಮಿತಿಯ ವರದಿಯಿಂದ ದೇಶದ ಬಂದಿಖಾನೆಗಳ ಸುಧಾರಣೆ, ಆಧುನೀಕರಣ ಮತ್ತು ಕೈದಿಗಳ ಮನಪರಿವರ್ತನಾ ಕಾರ್ಯಕ್ಕೆ ಅಡಿಪಾಯ ಹಾಕಿದಂತಾಯ್ತು. ಕೈದಿಗಳ ಮನಪರಿವರ್ತನೆಯ ಕಾರ್ಯ ಹಾಗೂ ಮರುನೆಲೆಯ ಬಗ್ಗೆ ಚಿಂತನೆ ಆರಂಭವಾಗಿದ್ದು ಈ ಸಮಿತಿಯ ಆಲೋಚನಾ ಕ್ರಮದಿಂದಲೆ.

ಬಂದಿಖಾನೆಗಳು ಅಥವ ಬಂದಿಖಾನೆ ಆಡಳಿತದ ಉದ್ದೇಶವೆಂದರೆ ಕೈದಿಗಳನ್ನು ಕೂಡಿ ಹಾಕುವ ಅಥವ ನ್ಯಾಯಾಂಗ ವಿಧಿಸಿರುವ ಶಿಕ್ಷೆಯನ್ನು ಅಮಾನವೀಯವಾಗಿ ಅನುಭವಿಸುವಂತೆ ಮಾಡುವ ತಾಣವಲ್ಲ. ಬಂದಿಖಾನೆಗಳನ್ನು ಸುಧಾರಣಾ ಗೃಹಗಳನ್ನಾಗಿ ಪರಿವರ್ತಿಸಿ, ಆಧುನೀಕೃತಗೊಳಿಸಿ ಅಲ್ಲಿ ಕೈದಿಗಳ ಮನಪರಿವರ್ತನೆ ಹಾಗೂ ಪುನರ್ವಸತಿಯನ್ನು ಸಾಧಿಸಬೇಕೆನ್ನುವ ಉದ್ದೇಶದ ಹೊಸದಾರಿಯನ್ನು ತೋರಿಸಿಕೊಟ್ಟದ್ದು - ಈ ಸಮಿತಿ.

ಕೈದಿಗಳ ಮನಪರಿವರ್ತನಾ ಕಾರ್ಯಕ್ಕೆ ಅನುವಾಗುವಂತೆ ಸ್ಪಂದಿಸಿ ಈ ಸಮಿತಿ ಮಾಡಿದ ಮಹತ್ತರವಾದ ಶಿಫಾರಸುಗಳು ಹಲವು. ಅವುಗಳಲ್ಲಿ ಮುಖ್ಯವಾದವು :

೧. ಅಪರಾಧಿ ಮನೋಭಾವವುಳ್ಳ ಕೈದಿಗಳನ್ನು ತಿದ್ದುವ ಕಾರ್ಯ ಬಂದಿಖಾನೆಯೊಳಗೆ ನಡೆಯಬೇಕಾದುದರಿಂದ ಬಂದಿಖಾನೆಗಳಿಗೆ ಸಾಕಷ್ಟು ತರಬೇತಿಗೊಂಡಿರುವ ಸಿಬ್ಬಂದಿಗಳನ್ನು ನಿಯುಕ್ತಿಗೊಳಿಸಬೇಕಲ್ಲದೆ ಹೊಸ ಸಿಬ್ಬಂದಿ, ಅಧಿಕಾರಿ ನೇಮಕಾತಿ ಸಂದರ್ಭದಲ್ಲಿ ಅರ್ಹ ಶೈಕ್ಷಣಿಕ ಮಟ್ಟವನ್ನು ನಿಗದಿ ಪಡಿಸಿ, ಸಾಕಷ್ಟು ಜವಾಬ್ದಾರಿಯಿಂದ ಆಯ್ಕೆ ಪ್ರಕ್ರಿಯೆ ನಡೆಸಬೇಕು.

೨. ಬಂದಿಖಾನೆಗಳ ಆಡಳಿತ ಮತ್ತು ಕೈದಿಗಳ ಮನಪರಿವರ್ತನಾ ಕಾರ್ಯದಲ್ಲಿ ಬಂದಿಖಾನೆಗಳ ಸಿಬ್ಬಂದಿ (ಅಧಿಕಾರಿಗಳನ್ನೊಳಗೊಂಡಂತೆ) ಹೆಚ್ಚಿನ ಪ್ರಾಮಾಣಿಕತೆ ತೋರಬೇಕಾದುದರಿಂದ ಅವರ ಬದುಕಿಗೆ ಸಾಕಷ್ಟು ಆರ್ಥಿಕ ಭದ್ರತೆ ಒದಗಿಸುವಷ್ಟು ವೇತನವನ್ನು ನೀಡಬೇಕು.

೩. ಕೈದಿಗಳಿಗೆ ಮರುನೆಲೆ ಅಥವ ಪುನರ್ವಸತಿ ಕಲ್ಪಿಸಲು ಅವಕಾಶವಾಗುವಂತೆ ಬಂದಿಖಾನೆಯೊಳಗೆ ಉದ್ಯಮಗಳನ್ನು ಸ್ಥಾಪಿಸುವುದು ಹಾಗೂ ಆ ಉದ್ಯಮಗಳಿಗೆ ಸಂಬಂಧಿಸಿದಂತೆ ಸಾಕಷ್ಟು ವೃತ್ತಿಪರ ಶಿಕ್ಷಣ ನೀಡುವಂತಹ ಸಿಬ್ಬಂದಿಗಳನ್ನು ನೇಮಕಾತಿ ಮಾಡಿಕೊಳ್ಳಬೇಕು.

೪. ಈ ಸಮಿತಿ ಕೈದಿಗಳಿನುಗುಣವಾಗಿ ಅಂದರೆ ವಿಚಾರಣಾಧೀನ ಕೈದಿ, ರೂಢಾಪರಾಧಿ (Habitual Prisoner), ಬಾಲಾಪರಾಧಿ, ತರುಣ ಕೈದಿ, ಮಹಿಳಾ ಕೈದಿ, ಸಿವಿಲ್ ಕೈದಿಗಳಿಗನುಗುಣವಾಗಿ ಪ್ರತ್ಯೇಕವಾದ ಬಂದಿಖಾನೆಗಳನ್ನು ನಿರ್ಮಿಸಬೇಕು. ಪ್ರತಿಯೊಬ್ಬ ಕೈದಿಗೂ ಬಂದಿಖಾನೆಯೊಳಗಿನ ಆವರಣದೊಳಗೆ ಕನಿಷ್ಠ ೭೫ ಚದರ ಯಾರ್ಡ್ಸ್ ಸ್ಥಳಾವಕಾಶವನ್ನು ವ್ಯವಸ್ಥೆ ಗೊಳಿಸಬೇಕು.

೫. ಬಾಲಾಪರಾಧಿಗಳನ್ನು ತರುಣ ಅಪರಾಧಿಗಳಿಂದ ಪ್ರತ್ಯೇಕಿಸಲೇ ಬೇಕು. ಹಾಗೆಯೇ ನ್ಯಾಯಾಲಯ ಅಪರಾಧಿಗೆ ಸಾದಾ ಸೆರೆಮನೆವಾಸದ ಶಿಕ್ಷೆಯನ್ನು ನೀಡುವ ಬದಲಿಗೆ, ಅಪರಾಧಿಗಳಿಗೆ ಎಚ್ಚರಿಕೆ ನೀಡುವುದು, ನಡತೆ ಸುಧಾರಣೆಗೆ ಅವಕಾಶ ನೀಡುವುದು (Probation), ದಂಡ ಹಾಕುವುದು ಇತ್ಯಾದಿ ಪರ್ಯಾಯ ಶಿಕ್ಷೆಗಳನ್ನು ಸೂಚಿಸುವುದು.

೬. ಬಂದಿಖಾನೆಗಳಲ್ಲಿ ಸಮಸ್ಯೆಗಳು ನಿರಂತರವಾಗಿರುವುದರಿಂದ, ತಜ್ಞ ಅಧಿಕಾರಿಗಳು ಈ ಬಗ್ಗೆ ಪರಸ್ಪರ ಚರ್ಚಿಸಿ ಸಮಸ್ಯೆಗಳ ಪರಿಹಾರಕ್ಕೆ ಮಾರ್ಗೋಪಾಯಗಳನ್ನು ಕಂಡು ಹಿಡಿಯಲು ಸಾಧ್ಯವಾಗುವಂತೆ, ಕನಿಷ್ಠ ಎರಡು ವರುಷಗಳಿಗೊಮ್ಮೆ ದೇಶದ ಬಂದಿಖಾನೆಗಳ ಇನ್‌ಸ್ಪೆಕ್ಟರ್ ಜನರಲ್‌ಗಳು ಸಮಾವೇಶಗೊಳ್ಳುವ ಹಾಗೆ ಕ್ರಮ ಕೈಗೊಳ್ಳುವುದು.

ಸಮಿತಿಯು ಈ ಶಿಫಾರಸುಗಳನ್ನು ಸಮಾಜಶಾಸ್ತ್ರೀಯ ನೆಲೆಯಲ್ಲಿ ಗ್ರಹಿಸಿದಾಗ ಅತ್ಯಂತ ಮಾನವೀಯವಾದುದು ಹಾಗೂ ಪ್ರಗತಿಪರವಾದುದಾದರೂ ಎರಡು ಕಾರಣಗಳಿಂದ ಇದು ದೇಶದೆಲ್ಲೆಡೆ ಪರಿಣಾಮಕಾರಿಯಾಗಿ ಜಾರಿಗೆ ಬರಲಿಲ್ಲ. **ಒಂದು ಕಾರಣ,** ೧೯೧೯ರ ಇಂಡಿಯಾ ಸರಕಾರದ ಕಾಯಿದೆಯಂತೆ (Government of India act of 1919) 'ಬಂದಿಖಾನೆ' ವಿಷಯ ಕೇಂದ್ರ ಸರಕಾರದ ಉಸ್ತುವಾರಿಯಲ್ಲಿ ಅಥವ ಹತೋಟಿಯಲ್ಲಿರುವ ವಿಷಯವಾಗಿರದೆ ಅದು ಆಯಾ ಪ್ರಾಂತ್ಯದ (State matter) ಆಡಳಿತ ವಿಷಯವಾಗಿರುವುದರಿಂದ, ಪ್ರಾಂತೀಯ ಸರಕಾರಗಳು ಬಂದಿಖಾನೆಗಳ ಸಂಪೂರ್ಣ ಜವಾಬ್ದಾರಿಯನ್ನು ಹೊತ್ತುಕೊಂಡರೂ ಇಂಡಿಯಾ ಸರಕಾರದ ಹತೋಟಿ-ನಿಯಂತ್ರಣ ತಪ್ಪಿದ ನಂತರ ಅವು ಬಂದಿಖಾನೆಗಳನ್ನು ಇತರ ಎಲ್ಲ ಅಭಿವೃದ್ಧಿ ಕ್ಷೇತ್ರಗಳಿಗಿಂತ ಕನಿಷ್ಠ ಆದ್ಯತೆಯ ಕ್ಷೇತ್ರವೆಂದು ಪರಿಗಣಿಸಿ, ಅದರ ಆಡಳಿತವನ್ನು ಸಂಪೂರ್ಣ ನಿರ್ಲಕ್ಷಿಸಿದ್ದು -ಈ ಸಮಿತಿಯ ಶಿಫಾರಸುಗಳು ದೇಶದೆಲ್ಲೆಡೆ ಸಂಪೂರ್ಣವಾಗಿ ಜಾರಿಗೆ ಬರದಿರಲು ಕಾರಣವಾಯಿತು. **ಎರಡನೇ ಕಾರಣವೆಂದರೆ,** ೧೯೧೯ - ೨೦ರ ಹೊತ್ತಿನಲ್ಲಿ ದೇಶದೆಲ್ಲೆಡೆ ಹೊತ್ತಿ ಉರಿಯತೊಡಗಿದ ಸ್ವಾತಂತ್ರ್ಯ ಹೋರಾಟದ ಜ್ವಾಲೆ ಕಂಪನಿ ಸರಕಾರಕ್ಕೆ ಇರಿಸು ಮುರಿಸು ತರುವಂತಾಗಿದ್ದು, ಒಟ್ಟಿನಲ್ಲಿ ರಾಜಕೀಯ ಪರಿಸ್ಥಿತಿ ತೀರಾ ಹದಗೆಟ್ಟಿತ್ತು. ದೇಶದೆಲ್ಲೆಡೆ ಎದ್ದ ಅರಾಜತೆಯಿಂದಾಗಿ ಭಾರತೀಯರತ್ತ ದ್ವೇಷದ ಕಂಗೆಣ್ಣನ್ನು ಬೀರಿದ್ದ ಬ್ರಿಟಿಷ್ ಸರಕಾರ, ಭಾರತೀಯ ಕೈದಿಗಳಿಂದಲೇ ತುಂಬಿ ತುಳುಕುತ್ತಿದ್ದ ಬಂದಿಖಾನೆಗಳನ್ನು ಸುಧಾರಿಸಬೇಕೆಂಬ ಸಮಿತಿಯ ಶಿಫಾರಸುಗಳನ್ನು ಗಂಭೀರವಾಗಿ ಪರಿಗಣಿಸಿ ಜಾರಿಗೊಳಿಸಬೇಕೆಂದು, ಪ್ರಾಂತೀಯ ಸರಕಾರದ ಮೇಲೆ ಅಷ್ಟೊಂದು ಒತ್ತಡ ಹೇರಲಿಲ್ಲ. ದೇಶದ ಬಂದಿಖಾನೆಗಳ ಸುಧಾರಣೆಯ ಬಗ್ಗೆ ಆಗಲೇ

ಕೂಗೆಬ್ಬಿಸಿದ್ದ ನಮ್ಮ ರಾಷ್ಟ್ರೀಯ ನಾಯಕರೂ, ಆಗಿನ ರಾಜಕೀಯ ಪರಿಸ್ಥಿತಿಯಿಂದ ಕಂಗೆಟ್ಟು ಹೋಗಿ, ತಮ್ಮ ರಾಷ್ಟ್ರ ರಕ್ಷಣೆಯೆ ತಮ್ಮ ಹೋರಾಟದ ಮೊದಲ ಆದ್ಯತಾ ವಿಷಯವೆಂದು ಪರಿಗಣಿಸಿ, ಬಂದಿಖಾನೆ ವಿಷಯವನ್ನು ಬದಿಗಿರಿಸಿದ್ದು ಕೂಡಾ ಈ ಸಮಿತಿಯ ಶಿಫಾರಸುಗಳು ಪರಿಣಾಮಕಾರಿಯಾಗಿ ಜಾರಿಯಾಗದಿರಲು ಒಂದು ಕಾರಣವಾಯಿತು. ೧೯೩೫ರ ಭಾರತ ಸರಕಾರ ಅಧಿನಿಯಮ (Government of India act of ೧೯೩೫) ಘೋಷಣೆಯ ನಂತರವಂತು ಬಂದಿಖಾನೆಗಳು ಸಂಪೂರ್ಣವಾಗಿ ರಾಜ್ಯ ಸರಕಾರ/ಪ್ರಾಂತೀಯ ಸರಕಾರಗಳ ಹಸ್ತಾಂತರಿತ ವಿಷಯವಾಗಿ ಬಿಟ್ಟು, ಕೇಂದ್ರ ಸರಕಾರದ ಹಸ್ತಕ್ಷೇಪವೇ ಇಲ್ಲದಂತಾದಾಗ, '೧೯೧೯-೨೦ರ ಭಾರತೀಯ ಬಂದಿಖಾನೆಗಳ ಸಮಿತಿ'ಯ ಶಿಫಾರಸುಗಳು ದೇಶದೆಲ್ಲೆಡೆಯ ಬಂದಿಖಾನೆಗಳಲ್ಲಿ ಏಕರೂಪವಾಗಿ ಜಾರಿಯಾಗದೆ ಮೂಲೆಗುಂಪಾಗುವುದನ್ನು ಬ್ರಿಟಿಷ್ ಸರಕಾರ ಗಮನಿಸಿತು. ಇದಲ್ಲದೆ ಈ ವಿಚಾರವಾಗಿ ನಮ್ಮ ರಾಷ್ಟ್ರನಾಯಕರು ಬ್ರಿಟಿಷ್ ಸರಕಾರವನ್ನು ತೀವ್ರ ತರಾಟೆಗೆ ತೆಗೆದುಕೊಂಡದ್ದರ ಫಲವಾಗಿ ಹಾಗೂ ಹಲವು ರಾಜ್ಯಗಳಲ್ಲಿ ಬಂದಿಖಾನೆಗಳ ಸುಧಾರಣೆ ಬಗ್ಗೆ ಒಂದು ಸಾಮಾಜಿಕ ಪ್ರಜ್ಞೆಯೇ ಆಂದೋಲನದ ರೂಪದಲ್ಲಿ ರೂಪುಗೊಂಡಾಗ ತಲ್ಲಣಗೊಂಡ ಬ್ರಿಟಿಷ್ ಸರಕಾರ ಎಲ್ಲ ಪ್ರಾಂತೀಯ ಸರಕಾರಗಳಿಗೂ, 'ತಕ್ಷಣವೇ ಬಂದಿಖಾನೆ ಸುಧಾರಣಾ ಸಮಿತಿಯೊಂದನ್ನು ರಚಿಸಿ, ಬಂದಿಖಾನೆಗಳ ಅಧ್ಯಯನ ನಡೆಸಬೇಕೆಂದು' ಆದೇಶ ನೀಡಬೇಕಾಯಿತು. ಇದರ ಫಲವಾಗಿ ದೇಶದಲ್ಲಿ ೪ ಸುಧಾರಣಾ ಸಮಿತಿಗಳು ಹುಟ್ಟಿಕೊಂಡವು.

## ೧.೭ ಬಂದಿಖಾನೆ ಸುಧಾರಣಾ ಸಮಿತಿಗಳು

ರಾಷ್ಟ್ರನಾಯಕರ ಒತ್ತಾಯದಂತೆ ಹಾಗೂ ಬ್ರಿಟಿಷ್ ಸರಕಾರದ ಆದೇಶದಂತೆ ವಿವಿಧ ಪ್ರಾಂತೀಯ ಸರಕಾರಗಳು, ತಮ್ಮ ವ್ಯಾಪ್ತಿಯಲ್ಲಿನ ಬಂದಿಖಾನೆಗಳ ಪರಿಸ್ಥಿತಿಯನ್ನು ಸಮಗ್ರವಾಗಿ ಅಧ್ಯಯನ ನಡೆಸಿ, ಅವುಗಳನ್ನು ಸುಧಾರಿಸುವ ಬಗ್ಗೆ ಸವಿವರ ವರದಿ - ಸಲಹೆ ಶಿಫಾರಸುಗಳನ್ನು ಪಡೆಯುವುದಕ್ಕಾಗಿ ಬಂದಿಖಾನೆ ಸುಧಾರಣಾ ಸಮಿತಿಗಳನ್ನು ರಚಿಸಿಕೊಂಡವು. ಅವುಗಳು ಈ ಕೆಳಗಿನವು.

೧. ಮೈಸೂರಿನ ಸೆರೆಮನೆ ಸುಧಾರಣಾ ಸಮಿತಿ, ೧೯೪೦ - ೪೧
   (The Mysore committee on Prison reforms, 1940-41)
೨. ಉತ್ತರ ಪ್ರದೇಶ ಸೆರೆಮನೆ ಸುಧಾರಣಾ ಸಮಿತಿ, ೧೯೪೬
   (U.P. Jail reforms committee, 1946)
೩. ಮುಂಬಯಿ ಸೆರೆಮನೆ ಸುಧಾರಣಾ ಸಮಿತಿ, ೧೯೪೬ - ೪೮
   (The Bombay jail riforms committee, 1846-48)

ಈ ಬಂದಿಖಾನೆ ಸುಧಾರಣಾ ಸಮಿತಿಗಳಲ್ಲಿ ಈ ಅಧ್ಯಯನಕ್ಕೆ ಮುಖ್ಯವಾದುದು - ಮೈಸೂರಿನ ಸೆರೆಮನೆ ಸುಧಾರಣಾ ಸಮಿತಿ, ೧೯೪೦ - ೪೧. ಶ್ರೀ ಡಿ.ಎಚ್.ಚಂದ್ರಶೇಖರಯ್ಯ ಅವರ ನೇತೃತ್ವದ ಈ ಸುಧಾರಣಾ ಸಮಿತಿ, ಕೈದಿಗಳ ಮನಪರಿವರ್ತನೆಯನ್ನೇ ಮೂಲ ಬೀಜಮಂತ್ರವನ್ನಾಗಿಟ್ಟುಕೊಂಡು, ಈ ಪ್ರಾಂತ್ಯದ ಬಂದಿಖಾನೆಗಳ ಆಡಳಿತವನ್ನು ಸಮಗ್ರವಾಗಿ ಬದಲಿಸುವ ಬಗ್ಗೆಯೇ ಸುದೀರ್ಘ ಅಧ್ಯಯನ ನಡೆಸಿ, ಕೈದಿಗಳಿಗೆ ಪುನರ್ವಸತಿಯನ್ನು

ಒದಗಿಸಿಕೊಡುವ ಬಗ್ಗೆಯೂ ಸಾಕಷ್ಟು ವೈಜ್ಞಾನಿಕವಾದ ಮಾಹಿತಿಗಳನ್ನು ಸಂಗ್ರಹಿಸಿತಲ್ಲದೆ, ಕೈದಿಗಳಿಗೆ ಬಂದಿಖಾನೆಯೊಳಗೆ ಕಲ್ಪಿಸಿಕೊಡಬೇಕಾದ ದುಡಿಮೆಯ ಅಗತ್ಯ ಮತ್ತು ಉದ್ದೇಶದ ಬಗ್ಗೆ ಸಮಾಜಶಾಸ್ತ್ರೀಯ ನೆಲೆಯಲ್ಲಿ ವಿವರಣೆ ನೀಡಿತ್ತು. ಕರ್ನಾಟಕದ ಬಂದಿಖಾನೆಗಳಲ್ಲಿ ಕೈದಿಗಳ ಮನಪರಿವರ್ತನೆಯ ಪ್ರಕ್ರಿಯೆಗೆ ತಾತ್ವಿಕವಾಗಿ ಪ್ರಪ್ರಥಮವಾಗಿ ಅಡಿಪಾಯ ಹಾಕಿಸಿದ್ದು - ಈ ಸಮಿತಿ. ಆದರೆ ಈ ಸುಧಾರಣಾ ಸಮಿತಿಯ ಶಿಫಾರಸು - ಸಲಹೆಗಳು ಹೆಚ್ಚು ಕಾಲ ನಮ್ಮ ಬಂದಿಖಾನೆಗಳಲ್ಲಿ ಪರಿಣಾಮಕಾರಿಯಾಗಿ ಜಾರಿಯಾಗಲಿಲ್ಲ. ಕಾರಣ ಭಾರತೀಯರ ಸ್ವಾತಂತ್ರ್ಯ ಹೋರಾಟದ ಕಿಚ್ಚು ಬ್ರಿಟಿಷ್ ಸರಕಾರವನ್ನು ಬೆಚ್ಚಿ ಬೀಳಿಸಿದ್ದರ ಪರಿಣಾಮವಾಗಿ ಯಾವುದೇ ಕೈದಿ ಸುಧಾರಣಾ ಕ್ರಿಯೆಗಳು ಬಂದಿಖಾನೆಯೊಳಗೆ ನಡೆಯದಂತಾಯ್ತು. ಆದರೆ ಈ ಸ್ಥಿತಿ ಮುಂದುವರಿದಿದ್ದು ೧೯೪೭ರ ವರೆಗೆ ಮಾತ್ರ.

## ೧.೪ ಸ್ವಾತಂತ್ರ್ಯಾನಂತರದ ಬಂದಿಖಾನೆ ಸುಧಾರಣಾ ಸಮಿತಿಗಳು

ಭಾರತೀಯ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಮಹತ್ತರ ಪಾತ್ರವಹಿಸಿದ್ದ ಅನೇಕಾನೇಕ ಭಾರತೀಯ ಧುರೀಣರು, ಹಲವಾರು ವರ್ಷಗಳನ್ನು ಸೆರೆಮನೆಯಲ್ಲೇ ಕಳೆದದ್ದರಿಂದ ಭಾರತೀಯ ಸೆರೆಮನೆಗಳ ಪರಿಸ್ಥಿತಿಯನ್ನು ಸುಧಾರಿಸಬೇಕೆನ್ನುವ ತುರ್ತು ಅವರಲ್ಲಿತ್ತು. ಅಂತೆಯೇ ಸ್ವಾತಂತ್ರ್ಯ ದೊರೆತೊಡನೆ ಬಂದಿಖಾನೆಗಳ ಸ್ಥಿತಿಗತಿಗಳನ್ನು ಸುಧಾರಿಸುವುದಕ್ಕಾಗಿ ಈ ಕೆಳಗಿನ ಸಮಿತಿಗಳನ್ನು ನೇಮಕ ಮಾಡಲಾಯಿತು.

೧. ಪೂರ್ವ ಪಂಜಾಬ್ ಬಂದಿಖಾನೆ ಸುಧಾರಣಾ ಸಮಿತಿ, ೧೯೪೮ - ೪೯
   (The East Punjab Jail Reforms Committee,1948-49)
೨. ಮದ್ರಾಸ್ ಬಂದಿಖಾನೆ ಸುಧಾರಣಾ ಸಮಿತಿ, ೧೯೫೦ - ೫೧
   (Madras Jail Reforms Committee, 1950-51)
೩. ಬಂದಿಖಾನೆ ಸುಧಾರಣಾ ಸಮಿತಿ, ಒರಿಸ್ಸಾ, ೧೯೫೨ - ೫೫
   (Jail Reforms Committee of Orissa, 1952-55)
೪. ಬಂಧೀಖಾನೆ ಸುಧಾರಣಾ ಸಮಿತಿ, ತಿರುವಾಂಕೂರು - ಕೊಚ್ಚಿ ಸಂಸ್ಥಾನ, ೧೯೫೩ - ೫೫.
೫. ಉತ್ತರ ಪ್ರದೇಶ ಬಂದಿಖಾನೆ ಉದ್ಯಮಗಳ ವಿಚಾರಣಾ ಸಮಿತಿ, ೧೯೫೫ - ೫೬
   (U.P. Jail and Industries Enquiry committee, 1955-56) ಮತ್ತು
೬. ಮಹಾರಾಷ್ಟ್ರ ಬಂದಿಖಾನೆ ಉದ್ಯಮಗಳ ಪುನರ್ ಸಂಘಟನಾ ಸಮಿತಿ, ೧೯೫೮ - ೫೯
   (Maharashtra Jail Industries reorganisation committee, 1958-59)

ರಾಜ್ಯ ಸರಕಾರಗಳಿಂದ ನೇಮಕಗೊಂಡ ಈ ಸಮಿತಿಗಳು, ಬಂದಿಖಾನೆಗಳನ್ನು ಮಾನವೀಕರಣ ಗೊಳಿಸುವಲ್ಲಿ ವೈಜ್ಞಾನಿಕವಾದ ಹೆಜ್ಜೆಗಳನ್ನಿರಿಸಲು ಹಾಗೂ ಬಂದಿಖಾನೆಗಳ ಹದಗೆಟ್ಟ ಪರಿಸ್ಥಿತಿಯ ಸುಧಾರಣೆಯನ್ನು ಕೈಗೆತ್ತಿಗೊಳ್ಳುವಲ್ಲಿ ಸಹಕಾರಿಯಾದವು.

ಸ್ವಾತಂತ್ರ್ಯ ಪಡೆದ ಆರಂಭಿಕ ವರ್ಷಗಳಲ್ಲಿ, ನಮ್ಮದೇ ಆಡಳಿತದಲ್ಲಿ - ನಮ್ಮ ಎಲ್ಲ ಬಂದಿಖಾನೆಗಳ ವ್ಯವಸ್ಥೆಯನ್ನು ಸುಧಾರಿಸಬೇಕೆನ್ನುವ ರಾಜ್ಯ ಸರಕಾರಗಳ ಹಠ, ಛಲ, ಸ್ಫೂರ್ತಿ, ಉತ್ಸಾಹ ಇದ್ದಕ್ಕಿದ್ದಂತೆ ಕುಸಿಯತೊಡಗಿದ್ದು ಕೈದಿಗಳ ದುರಾದೃಷ್ಟವೆಂಬಂತಾಯ್ತು. ಆಯಾ ರಾಜ್ಯದ ಬಂದಿಖಾನೆ ಸುಧಾರಣಾ ಸಮಿತಿಗಳ ವರದಿ - ಶಿಫಾರಸುಗಳು ಎಲ್ಲೂ ಪರಿಣಾಮಕಾರಿಯಾಗಿ ಜಾರಿಯಾಗಲಿಲ್ಲ. ಸ್ವಾತಂತ್ರ್ಯಪೂರ್ವದ ಸ್ಥಿತಿಯೇ ಬಂದಿಖಾನೆಗಳಲ್ಲಿ ಮತ್ತೆ ವಿಜೃಂಭಿಸತೊಡಗಿದಾಗ ಕೇಂದ್ರ ಸರಕಾರ ಎಚ್ಚೆತ್ತು ಕೊಂಡಿತು. ಬಂದಿಖಾನೆ ಸುಧಾರಣಾ ಸಮಿತಿಗಳು ಶಿಫಾರಸು ಮಾಡಿದ್ದ ಹಲವು ಉತ್ತಮ ಅಂಶಗಳನ್ನು ಬಂದಿಖಾನೆಗಳಲ್ಲಿ ಜಾರಿಗೆ ತರುವಂತೆ ನಿರ್ದೇಶನ ನೀಡಿತು.

ಸ್ವಾತಂತ್ರ್ಯಾನಂತರ ನೇಮಕಗೊಂಡ ೬ ಬಂದಿಖಾನೆ ಸುಧಾರಣಾ ಸಮಿತಿಗಳು ಶಿಫಾರಸು ಮಾಡಿದ್ದ ಅಂಶಗಳಲ್ಲಿ ಈ ಮುಖ್ಯವಾದವು ಮಾತ್ರ ಬಂದಿಖಾನೆ ಆಡಳಿತದಲ್ಲಿ ಜಾರಿಗೊಂಡವು ಅವು :

೧. ಕೈದಿಗಳಿಗೆ ಅವಧಿಪೂರ್ವ ತಾತ್ಕಾಲಿಕ ಬಿಡುಗಡೆಗಾಗಿ ಪೆರೋಲ್ ಮತ್ತು ಫರ್ಲೋ ಸೌಲಭ್ಯ.

೨. ದುಡಿಮೆಗೆ ತಕ್ಕಂತೆ ಕೂಲಿ

೩. ಬಂದಿಖಾನೆಯ ಮೂಲಭೂತ ವ್ಯವಸ್ಥೆಯನ್ನು ಸುಧಾರಣೆಗೊಳಿಸಲು ಕೈದಿಗಳಿಂದಲೇ ಪಂಚಾಯತ್ ಸೌಲಭ್ಯ. ಆ ಪಂಚಾಯತ್ ಬಂದಿಖಾನೆಯೊಳಗಿನ ಕುಂದುಕೊರತೆಗಳನ್ನು ಗಮನಿಸಿ, ಆಡಳಿತ ವರ್ಗಕ್ಕೆ ತಿಳಿಸತಕ್ಕದ್ದು.

೪. ಕೈದಿಗಳನ್ನು ಸಮಾಜಮುಖಿಗಳನ್ನಾಗಿ ಮಾಡಲು ಬಯಲು ಬಂದಿಖಾನೆಯನ್ನು ನಿರ್ಮಾಣ ಮಾಡುವುದು.

೫. ಕೈದಿಗಳ ಮನಪರಿವರ್ತನೆಗೆ ಪ್ರಯತ್ನಿಸುವುದು.

ಈ ಎಲ್ಲಾ ಬಂದಿಖಾನೆ ಸುಧಾರಣೆ ಸಮಿತಿಗಳು ಸಾಕಷ್ಟು ಪರಿಶ್ರಮ ಹಾಗೂ ಅಧ್ಯಯನಗಳಿಂದ ಕಂಡು ಕೊಂಡ ಸತ್ಯಗಳನ್ನು, ಸಂಗತಿಗಳನ್ನು ತಮ್ಮ ವರದಿಯಲ್ಲಿ ಮಂಡಿಸಿ, ರಾಜ್ಯ ಸರಕಾರಗಳ ಮುಂದಿಟ್ಟರೂ ಸರಕಾರ ಮಾತ್ರ ಬಂದಿಖಾನೆ ಕ್ಷೇತ್ರವನ್ನು ನಿರ್ಲಕ್ಷಿಸಿದ್ದರಿಂದ ಹಾಗೂ ಅದಕ್ಕೆ ಕನಿಷ್ಠ ಆದ್ಯತೆ ನೀಡಿದ್ದರಿಂದ ಬಂದಿಖಾನೆಗಳಲ್ಲಿ ನಿರೀಕ್ಷಿತ ಪ್ರಗತಿ ಕಾಣದಾಯಿತು. ಇದು ಕೇಂದ್ರ ಸರಕಾರದ ಗಮನಕ್ಕೂ ಬಂದು ಬಂದಿಖಾನೆಗಳ ಸುಧಾರಣೆಯನ್ನು ಆಯಾ ರಾಜ್ಯದ ಬಂದಿಖಾನೆ ಇಲಾಖೆಯ ಮುಖ್ಯ ಆಡಳಿತಗಾರರನ್ನು ಆಧರಿಸಿಯೇ ಕೈಗೊಳ್ಳಬೇಕೆಂದು ಕೇಂದ್ರ ಸರಕಾರ ತೀರ್ಮಾನಿಸಿತು.

ಮೊದಲಿಗೆ ಬಂದಿಖಾನೆಯ ಆಡಳಿತಗಾರರಿಗೆ ಬಂದಿಖಾನೆ ಸುಧಾರಣೆಯ ಅಗತ್ಯದ ಬಗ್ಗೆ ಮನವರಿಕೆ ಮಾಡಿಸಿ, ತರಬೇತಿ ನೀಡುವುದು ಅಗತ್ಯವೆಂದು ಮನಗಂಡ ಭಾರತ ಸರಕಾರ ಆ ನಿಟ್ಟಿನಲ್ಲಿ ಮೊದಲ ಹೆಜ್ಜೆಯನ್ನಿರಿಸಿತು. ಬಂದಿಖಾನೆ ಆಡಳಿತಗಾರರ ತರಬೇತಿಯನ್ನು ೧೯೫೮ರಲ್ಲಿ ಕೈಗೊಂಡಿತು.

## ೧.೯ ಬಂದಿಖಾನೆ ಆಡಳಿತಗಾರರ ತರಬೇತಿ, ೧೯೫೧

ಭಾರತ ಸರಕಾರ ತನ್ನ ಬಂದಿಖಾನೆಗಳ ಆಡಳಿತಗಾರರಿಗಾಗಿ ತರಬೇತಿ ಕಾರ್ಯಕ್ರಮವೊಂದನ್ನು ಏರ್ಪಡಿಸಲೋಸುಗ ೧೯೫೧ರಲ್ಲಿ, ಅಮೇರಿಕದ ಪ್ರಖ್ಯಾತ ಸಮಾಜ ವಿಜ್ಞಾನಿ ಹಾಗೂ ಕೈದಿಗಳನ್ನು ತಿದ್ದುವ ವಿಷಯದಲ್ಲಿ ಜಾಗತಿಕ ರಂಗದಲ್ಲಿಯೇ ಸಮರ್ಥ ಅಧಿಕಾರಿ ಎನಿಸಿದ್ದ ಡಬ್ಲ್ಯೂ.ಸಿ. ರೆಕ್‌ಲೆಸ್ ಅವರನ್ನು ಆಹ್ವಾನಿಸಿತು. ರೆಕ್‌ಲೆಸ್ ಅವರು ೧೯೫೧ - ೫೨ರಲ್ಲಿ ಭಾರತದ ಬಂದಿಖಾನೆಗಳ ಆಡಳಿತವನ್ನು ಅಧ್ಯಯನ ಮಾಡಿ ಸಲ್ಲಿಸಿದ ವರದಿ 'ಭಾರತದಲ್ಲಿ ಬಂದಿಖಾನೆ ಆಡಳಿತ' (Jail Administration in India)ವು ಭಾರತೀಯ ಬಂದಿಖಾನೆ ಸುಧಾರಣಾ ಚರಿತ್ರೆಯಲ್ಲಿ ಒಂದು ಮೈಲಿಗಲ್ಲು ಎನಿಸಿದೆ. ಶ್ರೀ ರೆಕ್‌ಲೆಸ್ ಅವರು ಟಾಟಾ ಸಮಾಜ ವಿಜ್ಞಾನಗಳ ಸಂಸ್ಥೆಯ ಆಶ್ರಯ ಮತ್ತು ಅದರ ನಿರ್ದೇಶಕ ಜೆ.ಎಂ. ಕುಮಾರಪ್ಪ ಅವರ ಸಹಕಾರದಲ್ಲಿ, ದೇಶದ ೪೭ ಮಂದಿ ಹಿರಿಯ ಬಂದಿಖಾನೆ ಆಡಳಿತಗಾರರಿಗೆ ಸಮಾಜ ವಿಜ್ಞಾನದಲ್ಲಿಯೂ, ಕೈದಿಗಳನ್ನು ವೈಜ್ಞಾನಿಕವಾಗಿ ತಿದ್ದುವ ಕ್ರಮಗಳ ಬಗ್ಗೆಯೂ ತರಬೇತಿಯನ್ನು ನೀಡಿದರು.[೨] ಈ ೪೭ ಮಂದಿ ಹಿರಿಯ ಆಡಳಿತಗಾರರು ದೇಶದ ವಿವಿಧ ರಾಜ್ಯಗಳ ಬಂದಿಖಾನೆಗಳನ್ನು ಸುಧಾರಿಸಲು ತರಬೇತಿ ಪಡೆದುದರಿಂದ, ಮುಂದೆ ಅವರು ತಮ್ಮ ತಮ್ಮ ರಾಜ್ಯದ ಕೈದಿಗಳ ಮನಪರಿವರ್ತನೆಯ ಪ್ರಕ್ರಿಯೆಯನ್ನು ಆರಂಭಿಸಲು ಇದು ಸಾಧ್ಯವಾಯಿತು.

ಡಬ್ಲ್ಯೂ.ಸಿ. ರೆಕ್‌ಲೆಸ್ ಅವರು ಭಾರತದ ಬಂದಿಖಾನೆ ಆಡಳಿತವನ್ನು ಸರಿಯಾದ ದಾರಿಯಲ್ಲಿ ತಂದು ನಿಲ್ಲಿಸುವುದಕ್ಕಾಗಿ ಹಲವು ಸಲಹೆಗಳನ್ನು, ಕ್ರಮಗಳನ್ನು ಸೂಚಿಸಿದ್ದರು. ಅವುಗಳಲ್ಲಿ ಮುಖ್ಯವಾದವು :

೧. ಬಂದಿಖಾನೆಯನ್ನು ಸುಧಾರಣಾ ಕೇಂದ್ರವನ್ನಾಗಿ ಮಾರ್ಪಡಿಸುವುದು.

೨. ಹೊಸ ಬಂದಿಖಾನೆಗಳನ್ನು ನಿರ್ಮಿಸಿ, ಈಗಿರುವ ಕೈದಿ ದಟ್ಟಣೆಯನ್ನು ಸಡಿಲಗೊಳಿಸುವುದು.

೩. ಸಾಕಷ್ಟು ತರಬೇತಿಗೊಂಡ, ಕೈದಿಗಳ ಮನಪರಿವರ್ತಿಸಬಲ್ಲ, ಮಾನವತೆ ತೋರಬಲ್ಲ ಸಿಬ್ಬಂದಿಗಳನ್ನು ನೇಮಕಗೊಳಿಸುವುದು.

೪. ಕೈದಿಗಳನ್ನು ತಿದ್ದಿ - ಸುಧಾರಣೆಗೊಳಿಸುವ ಸಿಬ್ಬಂದಿಗಳಿಗೆ ವಿಶೇಷವಾದ ತರಬೇತಿ ಕೇಂದ್ರಗಳನ್ನು ತೆರೆಯುವುದು.

೫. ಹಳೆಯದಾದ ಬಂದಿಖಾನೆ ಕೈಪಿಡಿಗಳನ್ನು ಬದಲಿಸಿ, ಸಮಾಜದ ಬದಲಾವಣೆಗೆ ತಕ್ಕಂಥ ಹೊಸ ಬಂದಿಖಾನೆ ಕೈಪಿಡಿಗಳನ್ನು ತರುವುದು.

೬. ಕೈದಿಗಳ ಅವಧಿಪೂರ್ವ ಬಿಡುಗಡೆಗೆ ಪ್ರೋತ್ಸಾಹಕರ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದು.

೭. ರಾಜ್ಯದ ಬಂದಿಖಾನೆಗಳ ಸಮಸ್ಯೆಗಳನ್ನು ಪರಸ್ಪರ ಹಂಚಿಕೊಂಡು, ಸಮಸ್ಯೆಗೆ ಪರಿಹಾರ ಕಂಡುಕೊಳ್ಳುವ ಉದ್ದೇಶದಿಂದ ದೇಶದ ಹಿರಿಯ ಬಂದಿಖಾನೆ ಆಡಳಿತಗಾರರ ಸಮಾವೇಶವೊಂದನ್ನು ಸರಕಾರ ನಿಯಮಿತವಾಗಿ ಹಮ್ಮಿಕೊಳ್ಳಬೇಕು.

ಅಂತೆಯೆ ಡಬ್ಲ್ಯೂ.ಸಿ. ರೆಕ್‌ಲೆಸ್ ಅವರ ಸಲಹೆಯಂತೆ - ಹಿರಿಯ ಬಂದಿಖಾನೆ ಆಡಳಿತಗಾರರ ಸಮಾವೇಶವೊಂದು ೧೯೫೨ರಲ್ಲಿ ಮುಂಬಯಿಯಲ್ಲಿ ನಡೆಯಿತು. ಸುಮಾರು ೧೭ ವರುಷಗಳ ನಂತರ ಸಮಾವೇಶಗೊಂಡ ಈ ಎನೇ ಸಮಾವೇಶದಲ್ಲಿ ರಾಷ್ಟ್ರದ ಎಲ್ಲ ಬಂದಿಖಾನೆಗಳ ಪ್ರಧಾನ ಪರಿಶೀಲಕರು (Inspectors General of Prisons) ಪಾಲ್ಗೊಂಡಿದ್ದರು. ಇದನ್ನು 'ಅಖಿಲ ಭಾರತ ಸೆರೆಮನೆಗಳ ಪ್ರಧಾನ ಪರಿಶೀಲಕರ ಸಮ್ಮೇಳನ' ಎಂದು ಕರೆಯಲಾಯಿತು.

## ೧.೧೦ ಅಖಿಲ ಭಾರತ ಸೆರೆಮನೆಗಳ ಪ್ರಧಾನ ಪರಿಶೀಲಕರ ಸಮ್ಮೇಳನ, ೧೯೫೨

ಬದಲಾಗುತ್ತಿರುವ ಪರಿಸ್ಥಿತಿಗನುಗುಣವಾಗಿ ಸಾಮಾಜಿಕ ಸಮಸ್ಯೆಯಾದ ಅಪರಾಧವನ್ನು ಬೇರೆ ದೃಷ್ಟಿಕೋನದಿಂದಲೇ ನೋಡಿ ಪರಿಶೀಲಿಸಬೇಕಾದ ಅಗತ್ಯವನ್ನು ಈ ಸಮಾವೇಶದಲ್ಲಿ ಕಂಡುಕೊಳ್ಳಲಾಯಿತು. ಭಾರತದಲ್ಲಿಯ ಬಂದಿಖಾನೆಗಳ ವ್ಯವಸ್ಥೆಯನ್ನು ಸುಧಾರಿಸುವುದಕ್ಕಾಗಿ, ಕೈದಿಗಳ ಮನಸ್ಸನ್ನು ಪರಿವರ್ತಿಸುವುದಕ್ಕಾಗಿ ಪ್ರಧಾನ ಪರಿಶೀಲಕರು (ಇನ್ಸ್‌ಪೆಕ್ಟರ್ ಜನರಲ್ಸ್) ಅನೇಕ ಶಿಫಾರಸುಗಳನ್ನು ಮಾಡಿದರು. ಈ ಸಮ್ಮೇಳನದಲ್ಲಿ ಬೇರೆ ಬೇರೆ ರಾಜ್ಯಗಳಲ್ಲಿನ ಬಂದಿಖಾನೆ ಕೈಪಿಡಿಗಳನ್ನು ಸಹ ಪರಿಶೀಲಿಸಬೇಕೆಂದು ಶಿಫಾರಸು ಮಾಡಲಾಯಿತು. ಮುಂಬಯಿ ರಾಜ್ಯದ (ಮಹಾರಾಷ್ಟ್ರ) ಬಂದಿಖಾನೆಗಳ ಪ್ರಧಾನ ಪರಿಶೀಲಕರು (ಇನ್ಸ್‌ಪೆಕ್ಟರ್ ಜನರಲ್) ಹಾಗೂ ಇಬ್ಬರು ಸೆರೆಮನೆ ಅಧೀಕ್ಷಕರು (Prison Superitendents)ಗಳುಳ್ಳ ಸಮಿತಿಯು ಹೊಸ ಬಂದಿಖಾನೆ ಕೈಪಿಡಿಯ ಕರಡನ್ನು ಸಿದ್ಧಪಡಿಸಬೇಕೆಂದು ಆ ಸಮ್ಮೇಳನದಲ್ಲಿ ಸಮಾವೇಶಗೊಂಡಿದ್ದ ಸೆರೆಮನೆಗಳ ಎಲ್ಲ ಪ್ರಧಾನ ಪರಿಶೀಲಕರು ಸಲಹೆ ನೀಡಿದರು.

## ೧.೧೧ ಅಖಿಲ ಭಾರತ ಬಂದಿಖಾನೆ ಕೈಪಿಡಿ ಸಮಿತಿ (೧೯೫೭ - ೫೯)

ಅಖಿಲ ಭಾರತ ಸೆರೆಮನೆಗಳ ಪ್ರಧಾನ ಪರಿಶೀಲಕರ ಸಮ್ಮೇಳನದಲ್ಲಿ 'ಬಂದಿಖಾನೆಗಳ ಕೈಪಿಡಿ'ಯ ಕರಡುಪ್ರತಿ ಸಿದ್ಧವಾದ ನಂತರ ಭಾರತ ಸರಕಾರವು ರಾಜ್ಯ ಸರಕಾರಗಳೊಂದಿಗೆ ಸಮಾಲೋಚನೆ ನಡೆಸಿ, 'ಅಖಿಲ ಭಾರತ ಬಂದಿಖಾನೆ ಕೈಪಿಡಿ ಸಮಿತಿ'ಯೊಂದನ್ನು ೧೯೫೭ರಲ್ಲಿ ರಚಿಸಿತು. ಈ ಸಮಿತಿಯು, ೧೯೫೨ರ ಬಂದಿಖಾನೆಗಳ ಕೈಪಿಡಿಯ ಕರಡು ಪ್ರತಿಯನ್ನು ಹಾಗೂ ಡಬ್ಲ್ಯೂ.ಸಿ. ರೆಕ್‌ಲೆಸ್ ಅವರ ಸಲಹೆ - ಶಿಫಾರಸುಗಳನ್ನು ಮುಂದಿಟ್ಟುಕೊಂಡು 'ಮಾದರಿ ಸೆರೆಮನೆ ಕೈಪಿಡಿ'ಯೊಂದನ್ನು ಭಾರತದ ವಿವಿಧ ರಾಜ್ಯಗಳ ಉಪಯೋಗಕ್ಕಾಗಿ ಸಿದ್ಧಪಡಿಸಿತು. ಅಖಿಲ ಭಾರತ ಬಂದಿಖಾನೆ ಕೈಪಿಡಿ ಸಮಿತಿಯ ಕೆಲವು ಮುಖ್ಯ ಶಿಫಾರಸುಗಳು ಹೀಗಿವೆ. (ಕೈದಿಗಳ ಮನಪರಿವರ್ತನೆಯ ದೃಷ್ಟಿಯಿಂದ ಆಯ್ಕೆಮಾಡಿಕೊಂಡಿರುವ ಕೆಲ ಶಿಫಾರಸುಗಳು)

೧. ಕೈದಿಗಳನ್ನು ತಿದ್ದುವ ಕೆಲಸಕ್ಕಾಗಿ ಸಿಬ್ಬಂದಿಗಳನ್ನು ತರಬೇತಿಗೊಳಿಸುವುದಕ್ಕೋಸ್ಕರ, ಸಿಬ್ಬಂದಿಗಳ ಸೇವಾಪೂರ್ವ ಶೈಕ್ಷಣಿಕ ಕಾರ್ಯಕ್ರಮಗಳನ್ನು ಅಭಿವೃದ್ಧಿಪಡಿಸಬೇಕು. ಈ ಸೇವೆಗಾಗಿ ಸಿಬ್ಬಂದಿಗಳನ್ನು ಭರ್ತಿ ಮಾಡಿಕೊಳ್ಳುವ ಅಧಿಕಾರಿಗಳ ಮಟ್ಟವೂ ಕನಿಷ್ಠ ಸಹಾಯಕ ಅಧೀಕ್ಷಕನದ್ದಾಗಿರಬೇಕು. ಬಂದಿಖಾನೆಗಳಲ್ಲಿ ಉಚ್ಚ ಹುದ್ದೆಗಳನ್ನು

ತುಂಬುವಾಗ ವ್ಯಕ್ತಿಯ ಪ್ರಾಮಾಣಿಕತೆ ಯೋಗ್ಯತೆ, ಹಾಗೂ ಕೈದಿ ತಿದ್ದುವ ಕಾರ್ಯಕ್ಕಾಗಿ ನಾಯಕತ್ವ ಗುಣಗಳಿಗೆ ಪ್ರಾಮುಖ್ಯತೆ ನೀಡಬೇಕು.

೨. ಬಂದಿಖಾನೆ ಸಿಬ್ಬಂದಿಯು ಸೇವೆಗೆ ಸೇರಿದೊಡನೆ ಮೊದಲಿಗೆ ಕೈದಿ ತಿದ್ದುವಿಕೆ ಬಗ್ಗೆ ಮೂಲ ತರಬೇತಿ ಪಡೆಯಬೇಕು. ನಂತರ ನಿಗದಿತ ಕಾಲಕ್ಕೆ ಅವರಿಗೆ ಪುನಶ್ಚೇತನ (ಪುನರ್ ನವೀಕರಣ ಕ್ರಮ) ಕ್ರಮ, ವಿಶೇಷ ಜ್ಞಾನಾರ್ಜನದಂತಹ ಯುಕ್ತ ತರಬೇತಿಯನ್ನು ನೀಡಬೇಕು. ಪ್ರತಿಯೊಂದು ರಾಜ್ಯದಲ್ಲೂ ಒಂದು ವಿಶೇಷವಾದ ಶಾಲೆಯು ಕೈದಿಗಳನ್ನು ತಿದ್ದುವ ಸಿಬ್ಬಂದಿಗಳ ತರಬೇತಿಗಾಗಿ ಇರತಕ್ಕದ್ದು. ತರಬೇತಿ ನೀಡುವ ಸಿಬ್ಬಂದಿಗಳಲ್ಲಿ ಅಂತರ್‌ಸಾಂಘಿಕ ವಿನಿಮಯವಿರಬೇಕು. ಕೈದಿಗಳನ್ನು ತಿದ್ದುವ ಅಧಿಕಾರಿಗಳ ಅಂತರ್ ರಾಜ್ಯ ಪ್ರವಾಸಗಳೂ, ಕೈದಿಗಳನ್ನು ತಿದ್ದುವ ಕಾರ್ಯಕರ್ತರ ಅಂತರ್‌ರಾಜ್ಯ ಪರಿಷತ್ತುಗಳೂ ಸಂಘಟಿಸಲ್ಪಡಬೇಕು.

೩. ಕೈದಿಗಳನ್ನು ತಿದ್ದುವ ಕೆಲಸಗಳಿಗೆ ಸೂಕ್ತ ಸಿಬ್ಬಂದಿಯನ್ನು ಆಕರ್ಷಿಸಲೋಸುಗ ಸಮಧಾನಕರ ಅಥವ ತೃಪ್ತಿಕರ ನೌಕರಿ ಸ್ಥಿತಿಗಳನ್ನು ಒದಗಿಸುವುದು ಅವಶ್ಯ. ಕೈದಿ ತಿದ್ದುವ ಸೇವೆಯಲ್ಲಿರುವ ಸಿಬ್ಬಂದಿಯಲ್ಲಿ ಕ್ರಿಯಾಶೀಲತೆ, ಪ್ರಾಮಾಣಿಕತೆ, ಸ್ವಯಂ ಪ್ರೇರಣೆಯಿಂದ ಕಾರ್ಯ ಕೈಗೊಳ್ಳುವ ಒಲವು ಹಾಗೂ ತಜ್ಞ ಪರಿಣಿತಿ ಇವುಗಳಿಗೆ ಅವಕಾಶವಿರಬೇಕು. ಸಿಬ್ಬಂದಿಯು ಕೈದಿಗಳ ಜತೆ ಸತತವಾಗಿ ಜಟಿಲವೂ ಕಷ್ಟತಮವೂ ಆದ ಪರಿಸ್ಥಿತಿಯಲ್ಲಿ ದುಡಿಯಬೇಕಿರುವುದರಿಂದ ಅವರಿಗೆ ಭದ್ರತೆಯನ್ನೂ, ರಕ್ಷಣೆಯನ್ನೂ ಒದಗಿಸತಕ್ಕದ್ದು.

೪. ಸಿಬ್ಬಂದಿಗಳಲ್ಲಿ ಶಿಸ್ತು ಮೂಡಿಸಲು - ಆಗಾಗ್ಗೆ ಸಿಬ್ಬಂದಿ ತರಬೇತಿ ಹಾಗೂ ಪುನಶ್ಚೇತನ ಕಾರ್ಯಕ್ರಮಗಳನ್ನು ರೂಪಿಸುವುದು ಅಗತ್ಯ. ಸಿಬ್ಬಂದಿಯ ಕರ್ತವ್ಯ, ಕಾರ್ಯಕ್ರಮಗಳನ್ನು ವ್ಯಾಖ್ಯಾನಿಸುವುದರ ಮೂಲಕ ಹಾಗೂ ಲಂಚಗುಳಿತನವನ್ನು - ವಿಚ್ಛಿದ್ರಕಾರಕ ಪ್ರವೃತ್ತಿಗಳನ್ನು ನಿವಾರಿಸುವುದರ ಮೂಲಕ ಸಿಬ್ಬಂದಿಯಲ್ಲಿ ಒಳ್ಳೆಯ ಮಟ್ಟದ ಶಿಸ್ತನ್ನೂ ಸ್ಥೈರ್ಯವನ್ನೂ ರೂಪಿಸಬೇಕು.[೩]

೫. ಕೈದಿಗಳ ವರ್ಗೀಕರಣ : ಕೈದಿಗಳ ಮನಪರಿವರ್ತನೆಯನ್ನು ಮುಖ್ಯವಾಗಿಟ್ಟುಕೊಂಡು, ಕೈದಿಗಳ ವರ್ಗೀಕರಣವು ಬಂದಿಖಾನೆಯಲ್ಲಿ ಅವರ ಪ್ರವೇಶದಿಂದ ಹಿಡಿದು ಬಿಡುಗಡೆಯ ವರೆಗೂ ಕ್ರಿಯಾತ್ಮವೂ ಸತತವೂ ಆದುದಾಗಿರಬೇಕು. ಅದು ಕೈದಿಯ ವಯಸ್ಸು, ಶಾರೀರಿಕ ಹಾಗೂ ಮಾನಸಿಕ ಆರೋಗ್ಯ, ಶಿಕ್ಷೆಯ ಅವಧಿ, ಕೈದಿಯ ಅಪರಾಧಿವರ್ತನೆ, ಸಾಮಾಜಿಕ ಹಿನ್ನಲೆ, ಶೈಕ್ಷಣೀಯ - ತರಬೇತಿ ಅಗತ್ಯಗಳು, ಮರುನೆಲೆಯ ಅವಶ್ಯಕತೆ ಇವುಗಳನ್ನು ಅವಲಂಬಿಸಿ ನಿರ್ಧರಿತವಾಗಬೇಕು.

೭. ಕೈದಿಗಳ ಸೌಕರ್ಯಗಳು : ಕೈದಿಗಳ ಜತೆ ಮಾನವೀಯವಾಗಿ ವರ್ತಿಸುವ ಅವಶ್ಯಕತೆ ಇದೆ. ಬಂದಿಖಾನೆಯೊಳಗೆ ಕೈದಿಗಳಿಗೆ ನೈರ್ಮಲ್ಯದ ಹಾಗೂ ಆರೋಗ್ಯಕರ ವಾತಾವರಣವನ್ನು ಕಲ್ಪಿಸಿಕೊಡುವುದು. ಪತ್ರ ಹಾಗೂ ಸಂದರ್ಶನಗಳಿಗೆ ಹೆಚ್ಚಿನ ಅಡ್ಡಿ - ಆತಂಕಗಳಿಲ್ಲದೆ ಅವಕಾಶ ನೀಡುವುದು. ಪುಸ್ತಕಗಳು, ಪತ್ರಿಕೆಗಳು, ಇತರ ಜ್ಞಾನ ಸಂಪಾದನ ಮಾಡುವ ಮಾಧ್ಯಮಗಳನ್ನು ಒದಗಿಸುವುದು. ಮನೋರಂಜನೆ ಹಾಗೂ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಭಾಗವಹಿಸಲು ಅನುವು ಮಾಡಿಕೊಡುವುದು. ಈ ಮೂಲಕ ಸೆರೆಮನೆವಾಸದಿಂದ ಉಂಟಾಗುವ ಶೀಲಭ್ರಷ್ಟತೆ, ಪಾಶವೀಕರಣ ಮತ್ತು ಇತರ ಅನಪೇಕ್ಷಣೀಯ ಆಘಾತಗಳನ್ನು ತೊಡೆದು ಹಾಕುವುದು ಹಾಗೂ ಅವರ ಸ್ವಸುಧಾರಣೆಗೆ ಪ್ರೋತ್ಸಾಹವನ್ನು ನೀಡುವುದು.

೮. ಕೈದಿ ಶಿಕ್ಷಣ : ಎಲ್ಲ ಕೈದಿಗಳಿಗೂ ಶೈಕ್ಷಣಿಕ ಕಾರ್ಯಕ್ರಮ ಕಡ್ಡಾಯವಾಗಿರಬೇಕಲ್ಲದೆ, ಶಾರೀರಿಕ ಮತ್ತು ಆರೋಗ್ಯ ಶಿಕ್ಷಣ, ಜಿಜ್ಞಾಸೆ ಶಿಕ್ಷಣ, ಸಾಮಾಜಿಕ ಶಿಕ್ಷಣ, ವೃತ್ತಿ ಮತ್ತು ಸಾಂಸ್ಕೃತಿಕ ಶಿಕ್ಷಣಗಳು ಅದರ ಅಂಗಗಳಾಗಿರಬೇಕು. ಅದರ ಗುರಿಯು ಸಾಕ್ಷರತೆ ಮಾತ್ರವಲ್ಲದೆ ತಿದ್ದುವ ಕಾರ್ಯವೂ ಕೂಡಾ ಆಗಿರಬೇಕು. ಮನಪರಿವರ್ತನಾ ಚಟುವಟಿಕೆಗಳು ವಿವಿಧ ಶೈಕ್ಷಣಿಕ ಕಾರ್ಯಕ್ರಮಗಳ ಸುತ್ತ ಹೆಣೆಯಲ್ಪಟ್ಟಿರಬೇಕು. ಇವುಗಳು ವಿವಿಧ ವರ್ಗದ ಕೈದಿಗಳ ಗುಂಪುಗಳ ಅಗತ್ಯಗಳಿಗೆ ಹೊಂದುವಂತೆ ಸಂಘಟಿಸಲ್ಪಡಬೇಕು. ಅಲ್ಲದೆ ಕೈದಿಯು ಸಾಮಾಜಿಕ ಗುಂಪುಗಳಲ್ಲಿ 'ಆರೋಗ್ಯವಂತ' ಸದಸ್ಯನಾಗಿ ಬೆಳೆಯಲು ಸಹಕಾರಿಯಾಗುವಂತೆ ಹಾಗೂ ಸಮಾಜ ಮತ್ತು ಸಾಮಾಜಿಕ ವರ್ತನೆಗಳ ಬಗ್ಗೆ ಆತನದ್ದೇ ಆದ ದೃಷ್ಟಿಕೋನವನ್ನು ನವೀಕರಿಸಿಕೊಳ್ಳಲು ಸಾಧ್ಯವಾಗುವಂತೆ ಆ ಶೈಕ್ಷಣಿಕ ಕಾರ್ಯಕ್ರಮಗಳು ಸಂಘಟಿಸಬೇಕು. ಸುಸಜ್ಜಿತ ಗ್ರಂಥಾಲಯದ ಜತೆಗೆ, ವಿಶಾಲ ವರ್ಗ - ಕೋಣೆಗಳಿದ್ದು, ಅದು ದೃಶ್ - ಶ್ರವ್ಯ ಉಪಕರಣಗಳನ್ನು ಒಳಗೊಂಡಿರಬೇಕು. ಕೈದಿಗೆ ಶಿಕ್ಷಣ ಶ್ರೇಣಿಯು ಪ್ರಾರಂಭಿಕ, ಮಾಧ್ಯಮಿಕ, ಹಾಗೂ ಉಚ್ಚ - ಈ ರೀತಿ ಮೂರು ಹಂತದಲ್ಲಿರಬೇಕು. ಈ ಶ್ರೇಣಿಯು ವಿದ್ಯಾಭ್ಯಾಸ ಬಂದಿಖಾನೆಯ ಹೊರಗಡೆ ಪ್ರಚಲಿತವಿರುವ ಆಡಳಿತ ಹಾಗೂ ಶೈಕ್ಷಣಿಕ ವ್ಯವಸ್ಥೆಗೆ ಸಮನಾಗಿದ್ದು, ಬಿಡುಗಡೆಯ ನಂತರವೂ ಅವುಗಳನ್ನು ಮುಂದುವರಿಸಿಕೊಂಡು ಹೋಗಲು ಅನುಕೂಲವಾಗುವಂತಿರಬೇಕು. ಬಿಡುಗಡೆ ಹೊಂದಿದ ನಂತರ, ಆತ ಶಾಲಾಮಂಡಳಿ ಹಾಗೂ ವಿಶ್ವವಿದ್ಯಾಲಯದ ಪರೀಕ್ಷೆಗಳಿಗೆ, ಅರ್ಹತೆಗೆ ಅನುಗುಣವಾಗಿ ಕೂಡಲು ಅನುಮತಿ ಇರಬೇಕು.

೯. ಕೈದಿಗಳ ದುಡಿಮೆ : ದುಡಿಮೆಯನ್ನು ಕೈದಿಗಳ ಶಿಕ್ಷೆಯ ಇನ್ನೊಂದು ಮುಖವೆಂದು ಪರಿಗಣಿಸಕೂಡದು. ಆ ದುಡಿಮೆ ಕೈದಿಯು ಮರುನೆಲೆಗೆ ಸಹಕಾರಿಯಾಗುವಂತಿದ್ದು, ಆತನ ಬಿಡುಗಡೆಯ ನಂತರ ಆತ ಮುಕ್ತ ಸಮುದಾಯದಲ್ಲಿ, ವೃತ್ತಿಯಲ್ಲಿ, ಸಾಮಾಜಿಕವಾಗಿ

ಹೊಂದಿಕೊಳ್ಳುವಂತೆ ಅದು ಉಪಯುಕ್ತ ಮೌಲ್ಯಗಳನ್ನು ನೀಡುವ ಮಹತ್ತ್ವದ ಬದುಕುವ ದಾರಿಯಾಗಿರಬೇಕು. ಬಂದಿಖಾನೆಯಲ್ಲಿ ಕೈದಿಗೆ ನೀಡುವ ದುಡಿಮೆ ಹಿಂಸಾತ್ಮಕವೂ ದಬ್ಬಾಳಿಕೆಯದೂ ಆಗಿರಬಾರದು. ಅದು ಕೈದಿಯಲ್ಲಿ ಉದ್ಯಮಶೀಲ ರೂಢಿಗಳನ್ನು ಬೆಳೆಸಿ ಕೆಲಸದಲ್ಲಿ ಸ್ಪಷ್ಟ ಆಸಕ್ತಿಯನ್ನು ಮೂಡಿಸಲು ಪೋಷಕವಾಗಿರಬೇಕು. ಕೈದಿ ಬಂದಿಖಾನೆಯಿಂದ ಹೊರಗಡೆ ತೊಡಗಬೇಕಾದ ಉದ್ಯೋಗಕ್ಕೆ, ಅನುಕೂಲವಾದ ರೀತಿಯಲ್ಲಿ ಅವರ ಸಹಜ ಪ್ರವೃತ್ತಿ, ಮೂಲ ವೃತ್ತಿ, ಸಾಮರ್ಥ್ಯ ಹಾಗೂ ಮರುನೆಲೆಯ ಅಗತ್ಯಗಳಿಗೆ ಅನುಗುಣವಾಗಿ ಕೆಲಸವನ್ನು, ತರಬೇತಿ ಯೋಜನೆಯನ್ನು ರೂಪಿಸಬೇಕು. ಇಲ್ಲವೆ ಮರು ಹೊಂದಾಣಿಕೆ ಮಾಡಬೇಕು. ಕೈದಿಗಳು ಉದ್ಯೋಗಗಳಿಂದ ಗಳಿಸುವ ಆರ್ಥಿಕ ಲಾಭಕ್ಕೆ, ಅವರ ಆಸಕ್ತಿಗಿಂತ ಹೆಚ್ಚಿನ ಸ್ಥಾನ ದೊರೆಯಕೂಡದು. ಕೈದಿಗಳನ್ನು ಆರ್ಥಿಕ ಲಾಭ ಗಳಿಸುವ ಉದ್ದೇಶದಿಂದ ಎಂದಿಗೂ ಖಾಸಾಗಿ ಉದ್ಯೋಗ - ವ್ಯವಹಾರಸ್ಥರಿಗೆ ಕಾರ್ಮಿಕರೆಂದು ನೀಡಬಾರದು. ಉತ್ಪಾದನೆಯೂ ತರಬೇತಿ ಕಾರ್ಯಕ್ರಮಗಳೂ ಸಮತೋಲನದಲ್ಲಿರಬೇಕಲ್ಲದೆ, ಅವು ರಾಜ್ಯದ ಹಾಗೂ ರಾಷ್ಟ್ರೀಯ ಆರ್ಥಿಕ ಧೋರಣೆಗಳೊಂದಿಗೂ ಅಭಿವೃದ್ಧಿ ಯೋಜನೆಗಳೊಂದಿಗೂ ಸಮಗ್ರವಾಗಿರಬೇಕು. ಕೈದಿಗಳಿಗೆ, ಸಾಂಸ್ಥಿಕ ಸೇವೆಗಳಲ್ಲಿ, ಬಂದಿಖಾನೆಗಳಿಗೆ ಅಗತ್ಯವಾಗಿ ಬೇಕಾಗಿರುವ ವಸ್ತುಗಳ ಉತ್ಪಾದನಾ ಕಾರ್ಯದಲ್ಲಿ, ಕೈದಿಗಳನ್ನು ತಿದ್ದುವ ಹಾಗೂ ಇತರ ಸರಕಾರಿ ಇಲಾಖೆಗಳಲ್ಲಿ, ರಾಷ್ಟ್ರ ನಿರ್ಮಾಣ ಚಟುವಟಿಕೆಗಳು ಮುಂತಾದೆಡೆಯಲ್ಲಿ ಉದ್ಯೋಗ ನೀಡಬಹುದಾಗಿದೆ. ಬಂದಿಖಾನೆಗಳಲ್ಲಿ ನೀಡಬಹುದಾದ ಉದ್ಯೋಗ, ಕೆಲಸ ಮತ್ತು ತರಬೇತಿಗಾಗಿ ಕೆಲವು ಉದ್ಯಮಗಳು, ಕರಕುಶಲ ವೃತ್ತಿಗಳು (ಬಡಗಿ, ಕಮ್ಮಾರಿಕೆ, ಕುಂಬಾರಿಕೆ, ದರ್ಜಿ, ಇತ್ಯಾದಿ), ಕೃಷಿ, ಪಶುಸಾಕಾಣೆ ಮತ್ತು ಲೋಕೋಪಯೋಗಿ ಕಾರ್ಯಗಳನ್ನು ಕೈದಿಗಳಿಂದ ಮಾಡಿಸಲು ಸೂಚಿಸಲಾಗಿದೆ. ಕೈದಿಗಳಿಗೆ ಕೆಲಸದ ಅವಧಿಯನ್ನು ನಿಗದಿಗೊಳಿಸಿ, ಅವರಿಗೆ ಅವಶ್ಯವಿರುವಷ್ಟು ವಿಶ್ರಾಂತಿ, ಸುರಕ್ಷಿತಾ ಕ್ರಮಗಳು ಹಾಗೂ ವೇತನವನ್ನು ನೀಡಬೇಕಲ್ಲದೆ, ಸ್ಥಳೀಯ ಪರಿಸ್ಥಿತಿಗಳಿಗನುಗುಣವಾಗಿ ದುಡಿಸತಕ್ಕದ್ದು. ಉದ್ಯಮ ಕಾರ್ಯಾಗಾರ ನಿರ್ವಹಣೆಯು ಸುವ್ಯವಸ್ಥಿತವಾಗಿರಬೇಕಲ್ಲದೆ ಆಧುನಿಕ ಔದ್ಯಮಿಕ ಘಟನೆಗಳ ಸಾಲಿನಲ್ಲೇ ಅವುಗಳನ್ನು ತರಬೇಕು.

೯. ಕೈದಿಗಳಿಗೆ ವೃತ್ತಿ ತರಬೇತಿ : ಮನಪರಿವರ್ತನಾ ಪ್ರಕ್ರಿಯೆಯಾಗಿ ಶಿಕ್ಷಣವನ್ನು ಹಾಗೂ ಗ್ರಂಥಾಲಯವನ್ನು ಜ್ಞಾನ ಸಂವಹನ ಮಾಧ್ಯಮವನ್ನಾಗಿ ಬಂದಿಖಾನೆಯೊಳಗೆ ಆಯ್ಕೆಮಾಡಿಕೊಂಡಂತೆ ವೃತ್ತಿ ತರಬೇತಿಯೂ ಜ್ಞಾನ ಸಂವಹನಾ ಮಾಧ್ಯಮವಾಗಿರತಕ್ಕದ್ದು. ವೃತ್ತಿಶಿಕ್ಷಣ ತರಬೇತಿ ನಡೆಯುವ ಘಟನಾ ಸ್ಥಳದಲ್ಲೇ ವೃತ್ತಿ ತರಬೇತಿಗಳನ್ನು ನೀಡುವಂತೆ

ವ್ಯವಸ್ಥೆಯನ್ನು ರೂಪುಗೊಳಿಸತಕ್ಕದ್ದು. ಬಂದಿಖಾನೆಯ ಹೊರಗಿನ ಸರಕಾರಿ ತಾಂತ್ರಿಕ ಹಾಗೂ ವೃತ್ತಿಶಿಕ್ಷಣ ಸಂಸ್ಥೆಗಳಲ್ಲಿಯ ಪಾಠಕ್ರಮಗಳನ್ನು, ಪರೀಕ್ಷೆಗಳನ್ನು ಕೈದಿಗಳ ಶೈಕ್ಷಣಿಕ ಹಾಗೂ ವೃತ್ತಿಯಲ್ಲಿಯ ಯೋಗ್ಯತೆಗೆ ಶಕ್ಯವಿದ್ದಷ್ಟು ಹೊಂದುವಂತೆ ಅಳವಡಿಸತಕ್ಕದ್ದು. ಪ್ರತಿಯೊಬ್ಬ ಕೈದಿಗೂ ಅವನವನ ಸಹಜ ಪ್ರವೃತ್ತಿ, ಯೋಗ್ಯತೆ ಹಾಗೂ ಪುನರ್ವಸತಿಯ ಅಗತ್ಯಗಳನ್ನು ಗುರುತಿಸಿಕೊಂಡು ಅವನಿಗೆ ವೃತ್ತಿ ತರಬೇತಿ ನೀಡತಕ್ಕದ್ದು. ದೀರ್ಘಾವಧಿ ಶಿಕ್ಷೆಗೊಳಗಾದವರಿಗೆ ವಿವಿಧ ರೀತಿಯ ನೈಪುಣ್ಯಗಳನ್ನು ಗಳಿಸಿಕೊಳ್ಳಲು ಅವಕಾಶಗಳನ್ನು ಒದಗಿಸತಕ್ಕದ್ದು. ಸಾಕಷ್ಟು ತರಬೇತಿ ಸಲಕರಣೆಗಳನ್ನು, ತರಬೇತಿ ನೀಡುವ ವೃತ್ತಿಶಿಕ್ಷಣ ಸಿಬ್ಬಂದಿಗಳನ್ನು ಒದಗಿಸಬೇಕಲ್ಲದೆ, ಅದಕ್ಕಾಗಿ ತಗಲುವ ವೆಚ್ಚವನ್ನು ಅತ್ಯಗತ್ಯವೆಂದು ಗ್ರಹಿಸಬೇಕು. ಹಾಗೂ ತರಬೇತಿ ಯೋಜನೆಗಳ ಉತ್ಪಾದನೆಗಳ ಮಾರಾಟದಿಂದ ದೊರೆಯುವ ಲಾಭಕ್ಕೂ ಇದಕ್ಕೂ ತಳಕು ಹಾಕಬಾರದು.

೧೦. ಕೈದಿಗಳ ಮನೋವಿಕಾಸಕ್ಕಾಗಿ ಸಾಂಸ್ಕೃತಿಕ ಚಟುವಟಿಕೆಗಳು : ಬಂದಿಖಾನೆಯಲ್ಲಿ ವ್ಯಾಪ್ತಿ ಹಾಗೂ ವೈವಿಧ್ಯಗಳೆರಡರಲ್ಲೂ ಸಾಕಷ್ಟು ವಿಪುಲವಾದ ಮನೋರಂಜಕ ಮತ್ತು ಸಾಂಸ್ಕೃತಿಕ ಚಟುವಟಿಕೆಗಳನ್ನು ಒದಗಿಸಬೇಕಲ್ಲದೆ, ಶಾರೀರಿಕ ವ್ಯಾಯಮ, ಆಟದ ಬಯಲಲ್ಲಿಯ ಆಟಗಳು ಹಾಗೂ ಒಳಾಂಗಣ ಕ್ರೀಡೆಗಳಿಗೆ ಅವಕಾಶ ನೀಡಬೇಕು. ಬಯಲು ರಂಗ ಮಂದಿರದಲ್ಲಿ ನಾಟಕ, ರೂಪಕಗಳನ್ನು ಏರ್ಪಡಿಸುವುದು, ನೈತಿಕ ಬೋಧನೆ ನೀಡುವಂತಹ ಚಲನಚಿತ್ರ, ಮನಸ್ಸಿಗೆ ಮುದನೀಡುವ ಬಾನುಲಿ ಪ್ರಸಾರ, ಧ್ವನಿ ಮುದ್ರಿತ ಸಂಗೀತ ಸೌಲಭ್ಯವನ್ನು ಒದಗಿಸತಕ್ಕದ್ದು. ಸಮೂಹಗಾನ, ಜಾನಪದ ನೃತ್ಯ, ನಾಟಕ, ಕರಕುಶಲ ಕಲೆಗಳು, ವೃತ್ತಪತ್ರಿಕೆ, ಗ್ರಂಥಾಲಯ ಸೇವೆ ಇವೆಲ್ಲವೂ ಸಾಂಸ್ಕೃತಿಕ ಚಟುವಟಿಕೆಗಳ ಅಂಗವೆಂದು ಪರಿಗಣಿಸಿ ಅದು ಬಂದಿಖಾನೆಯಲ್ಲಿ ಕೈದಿಗಳಿಗೆ ಸಿಗುವಂತೆ ವ್ಯವಸ್ಥೆಗೊಳಿಸಬೇಕು.

೧೧. ಕೈದಿಗಳಿಗೆ ರಜಾ ಮತ್ತು ತುರ್ತು ಬಿಡುಗಡೆ : ರೂಢಾಪರಾಧಿಗಳು, ಕೆಲವು ಗಂಭೀರ ಅಪರಾಧಗಳಿಗಾಗಿ ಶಿಕ್ಷಿತರು ಹಾಗೂ ವಿಶೇಷ ಬಂದಿಖಾನೆಗಳಲ್ಲಿಡಲ್ಪಟ್ಟ ಕೈದಿಗಳು ಇವರನ್ನು ಹೊರತು ಪಡಿಸಿ, ಉಳಿದ ಕೈದಿಗಳು ಮೂರು ವರ್ಷ ಮತ್ತು ಅದಕ್ಕೂ ಹೆಚ್ಚಿನ ಶಿಕ್ಷೆಗಳಿಗೆ ಒಳಪಟ್ಟಿದ್ದರೆ ಅಂತರವನ್ನು ಆಯಾ ರಾಜ್ಯದ ಬಂದಿಖಾನೆಗಳ ಅಧಿನಿಯಮಗಳ 'ಬಿಡುಗಡೆಯ ಕರಾರು'ಗಳಿಗನುಗುಣವಾಗಿ ರಜಾ ಸೌಲಭ್ಯ (ಪೆರೋಲ್ ) ಪಡೆಯುವ ಅವಕಾಶವಿರಬೇಕು. ಹಾಗೆಯೇ ತುರ್ತು ಸಂದರ್ಭದಲ್ಲಿ ತುರ್ತು ಬಿಡುಗಡೆ (ಫರ್ಲೋ)ಯನ್ನು ಪಡೆಯುವ ಅವಕಾಶ ಕಲ್ಪಿಸಬೇಕು. ಇವೆರಡು ಪ್ರಕರಣದಲ್ಲೂ ಕೈದಿಯ ವರ್ತನೆ, ಆತನ ದುಡಿಮೆ, ವೃತ್ತಿ ಪರತೆ, ವಿನಯ, ಆತನಲ್ಲಾದ ಸುಧಾರಣೆ, ಕುಟುಂಬ -

ಸಮುದಾಯದ ಕುರಿತ ಆತನ ಮನೋಭಾವ ಹಾಗೂ ಆತ ಈ ಹಿಂದೆ ಇಂತಾ ರಜೆಯನ್ನು ಪಡೆದುಕೊಂಡಿದ್ದಲ್ಲಿ ಅದನ್ನು ಬಳಸಿಕೊಂಡಿರುವ ರೀತಿ - ಇತ್ಯಾದಿ ಹಿನ್ನೆಲೆಯನ್ನು ಪರಿಶೋಧಿಸಿ ರಜಾ ಸೌಲಭ್ಯವನ್ನು ನೀಡತಕ್ಕದ್ದು.

೧೨. ಕೈದಿಗಳಲ್ಲಿ ಶಿಸ್ತು : ಬಂದಿಖಾನೆಗಳಲ್ಲಿ ಕೈದಿಗಳನ್ನು ತಿದ್ದುವ ಕ್ರಿಯೆಯಲ್ಲಿ, ಕೈದಿಗಳಲ್ಲಿ ಶಿಸ್ತು ತರುವುದಕ್ಕಾಗಿ ದಬ್ಬಾಳಿಕೆಯಿಂದ ಕೂಡಿದ ದಂಡನಾ ವ್ಯವಸ್ಥೆ ಇರಕೂಡದು ಅಥವ ಮೆತ್ತಗೆ ಮನವೊಲಿಸುವ ಮೃದು ಧೋರಣೆಯೂ ಇರಬಾರದು. ಶಿಸ್ತು ಹೇರುವ ನಿಯಮಗಳು ಸ್ಪಷ್ಟವೂ, ವಿಧಾಯಕವೂ ಆಗಿದ್ದು ದೃಢವೂ ಆಗಿರತಕ್ಕದ್ದು.

೧೩. ಶಿಕ್ಷೆಗಳ ಪುನರವಲೋಕನ : ಕ್ಷಮಿಸಲಾದ ಶಿಕ್ಷೆಯ ಅವಧಿಯನ್ನು (ಮಾಫಿ) ಒಳಗೊಂಡಂತೆ ಕೈದಿಗಳು, ರೂಢಾಪರಾಧಿಯಲ್ಲದ ಸ್ತ್ರೀಯರು, ತರುಣರು, ವೃದ್ಧರು ಮತ್ತು ದುರ್ಬಲರೂ ಆಗಿದ್ದಲ್ಲಿ ಜೀವಾವಧಿ ಶಿಕ್ಷೆಯನ್ನು ೨೦ ವರುಷಗಳೆಂದು ಗ್ರಹಿಸಿ, ಅವರ ಶಿಕ್ಷೆಯನ್ನು ಪುನರವಲೋಕನ ಮಾಡತಕ್ಕದ್ದು. ಸಾಮಾಜಿಕ ಒತ್ತಡಕ್ಕೊಳಗಾಗಿ ಅಪರಾಧ ಮಾಡಿದಂತಹ ಸ್ತ್ರೀಯರನ್ನು ಬಂದಿಖಾನೆಗೆ ಪ್ರವೇಶವಾದೊಡನೆ ಶಿಕ್ಷೆಯ ಅವಧಿಯನ್ನು ಪುನರವಲೋಕಿಸಬೇಕು. ಪುನರವಲೋಕನ ಮಂಡಳಿಗಳ ಮಾರ್ಗದರ್ಶನಕ್ಕಾಗಿ ಸಾಮಾನ್ಯ ನೀತಿಯನ್ನು ರಾಜ್ಯ ಸರಕಾರಗಳು ರೂಪಿಸಬೇಕು.

೧೪. ಪಂಚವಾರ್ಷಿಕ ಯೋಜನೆ : ಸಾಮಾಜಿಕ ಸಂರಕ್ಷಣೆಯ ಅವಿಭಾಜ್ಯ ಅಂಗವೆಂದು ಪಂಚವಾರ್ಷಿಕ ಯೋಜನೆಯಲ್ಲಿ ಕೈದಿಗಳನ್ನು ತಿದ್ದುವ ಆಡಳಿತಕ್ಕೆ ಗಮನವನ್ನು ನೀಡತಕ್ಕದ್ದು.

ಅಖಿಲ ಭಾರತ ಬಂದಿಖಾನೆ ಕೈಪಿಡಿ ಸಮಿತಿ, ೧೯೫೭ - ೫೯ ಯು ಸಿದ್ಧಪಡಿಸಿದ 'ಮಾದರಿ ಬಂದಿಖಾನೆ ಕೈಪಿಡಿ'ಯಲ್ಲಿನ ಈ ಶಿಫಾರಸುಗಳನ್ನು ಸಮಾಜಶಾಸ್ತ್ರೀಯ ನೆಲೆಯಲ್ಲಿಟ್ಟು ತೂಗಿದಾಗ ಅದು ಅತ್ಯಂತ ಮಾನವೀಯ ಹಾಗೂ ಪ್ರಗತಿಪರವಾಗಿರುವುದರಿಂದ ಇಂದಿಗೂ ಅದು ಅನೇಕ ರಾಜ್ಯಗಳ ಬಂದಿಖಾನೆ ಅಧಿನಿಯಮಗಳಲ್ಲಿ ಯಥಾವತ್ತಾಗಿ ಅಡಕಗೊಂಡಿದೆ. ಅಖಿಲಭಾರತ ಬಂದಿಖಾನೆ ಕೈಪಿಡಿ ಸಮಿತಿ ಹಾಗೂ ಕೈದಿ ಮನಪರಿವರ್ತಕ ಡಬ್ಲ್ಯೂ.ಸಿ. ರೆಕ್‌ಲೆಸ್ ಅವರ ಶಿಫಾರಸು, ಸಲಹೆಯ ಮೇರೆಗೆ ಕೇಂದ್ರ ಸರಕಾರವು ೧೯೬೧ರಲ್ಲಿ ಕೈದಿಗಳನ್ನು ತಿದ್ದುವ ಸೇವೆಗಳ ಕೇಂದ್ರ ದಳವೊಂದನ್ನು ಸ್ಥಾಪಿಸಿತು. ಇದುವೇ 'ಸೆಂಟ್ರಲ್ ಬ್ಯೂರೋ ಆಫ್ ಕರೆಕ್ಷನಲ್ ಸರ್ವೀಸಸ್' (Central Bureau of Correctional Services)

**೧.೧೨ ತಿದ್ದುವ ಸೇವೆಗಳ ಕೇಂದ್ರದಳ ಅಥವ ಸಂಸ್ಥೆ** (ಸೆಂಟ್ರಲ್ ಬ್ಯೂರೋ ಆಫ್ ಕರೆಕ್ಷನಲ್ ಸರ್ವೀಸಸ್)

ಕೇಂದ್ರ ಗೃಹ ಸಚಿವಾಲಯವು ೧೯೬೧ರಲ್ಲಿ ಹಲವು ಮುಖ್ಯ ಉದ್ದೇಶಗಳಿಂದ ಈ ಕೇಂದ್ರ ಸಂಸ್ಥೆಯನ್ನು ಸ್ಥಾಪಿಸಿತು. ಈ ಸಂಸ್ಥೆಯ ಪ್ರಮುಖ ಉದ್ದೇಶಗಳು ಹೀಗಿವೆ.

೧. ರಾಷ್ಟ್ರೀಯ ಮಟ್ಟದಲ್ಲಿ ಅಪರಾಧವನ್ನು ತಡೆಗಟ್ಟಿರುವ ಮತ್ತು ಕೈದಿಗಳನ್ನು ತಿದ್ದಿರುವ ಬಗ್ಗೆ ಹಾಗೂ ಭಾರತದ ವಿವಿಧ ರಾಜ್ಯಗಳಲ್ಲಿ ನಡೆದಿರುವ ಇತರ ಸುಧಾರಣಾ (ತಿದ್ದುವ) ಕಾರ್ಯಕ್ಕೆ ಸಂಬಂಧಿಸಿದಂತೆ ಅಂಕಿ ಅಂಶಗಳ ಸಂಗ್ರಹವನ್ನು ಪ್ರಮಾಣೀಕರಿಸುವುದು.

೨. ಅಪರಾಧವನ್ನು ತಡೆಗಟ್ಟುವಿಕೆ ಹಾಗೂ ಅಪರಾಧಿಗಳನ್ನು ನೋಡಿಕೊಳ್ಳುವ ಕುರಿತು ಏಕರೂಪ ನೀತಿಯನ್ನು ರೂಪಿಸುವುದು ಹಾಗೂ ಕಾರ್ಯವನ್ನು ಸಂಯೋಜಿಸುವುದು.

೩. ಅಪರಾಧ ಹಾಗೂ ಅದರ ಪ್ರತಿಬಂಧ ಹಾಗೂ ಕೈದಿಗಳ ತಿದ್ದುವ ಸೇವೆಗಳ ಬಗೆಗೆ ರಾಜ್ಯ ರಾಜ್ಯಗಳ ನಡುವೆ ಮಾಹಿತಿ ವಿನಿಮಯ ಮತ್ತು ಸಾಮಾನ್ಯವಾಗಿ ಇಲ್ಲವೆ ಒಂದು ವಿಶಿಷ್ಟ ಕಾರ್ಯಕ್ರಮದ ಕುರಿತ ತಾಂತ್ರಿಕ ಜ್ಞಾನ, ಸಹಾಯ ಮತ್ತು ಇತರ ಮಾಹಿತಿಯನ್ನು ಒದಗಿಸುವುದು.

೪. ಅವಶ್ಯವಿದ್ದಲ್ಲಿ ಭಾರತ ಹಾಗೂ ವಿದೇಶಿ ಸರಕಾರಗಳ ಮಧ್ಯೆ ಹಾಗೂ ವಿಶ್ವಸಂಸ್ಥೆಯೊಂದಿಗೆ ಮಾಹಿತಿ ವಿನಿಮಯ ನಡೆಸುವುದು.

೫. ಸಂಶೋಧನೆ ಮತ್ತು ಸಿಬ್ಬಂದಿ ತರಬೇತಿಯನ್ನು ಉತ್ತೇಜಿಸುವುದು ಹಾಗೂ ಆ ಕ್ಷೇತ್ರದಲ್ಲಿ ಅವಶ್ಯವಾದ ಅಭ್ಯಾಸಗಳನ್ನು, ಸರ್ವೇಕ್ಷಣಗಳನ್ನು, ಸಂಶೋಧನ ಮತ್ತು ಪ್ರಯೋಗಗಳನ್ನು ಕೈಗೊಳ್ಳುವುದು.

ಈ ಸಂಸ್ಥೆಯ ಮತ್ತೊಂದು ಅತ್ಯಂತ ಪ್ರಮುಖ ಜವಾಬ್ದಾರಿ ಎಂದರೆ ದೇಶದೆಲ್ಲೆಡೆಯ ಬಂದಿಖಾನೆಗಳಲ್ಲಿ ಬಳಕೆಯಲ್ಲಿರುವ ಕೈಪಿಡಿಗಳಲ್ಲಿ, ಅಖಿಲ ಭಾರತ ಬಂದಿಖಾನೆ ಕೈಪಿಡಿ ಸಮಿತಿ, ೧೯೫೭ - ೫೯ ಯು ರಚಿಸಿದ್ದ 'ಮಾದರಿ ಬಂದಿಖಾನೆ ಕೈಪಿಡಿ' ಯಲ್ಲಿರುವ ಅಂಶಗಳನ್ನು ಅಳವಡಿಸುವಂತೆ ನೋಡಿಕೊಳ್ಳುವುದು. ಹಾಗೂ ಆ ಮೂಲಕ ಬಂದಿಖಾನೆ ಸುಧಾರಣೆಗಳನ್ನು ಸಾಧಿಸುವಂತೆ ಶ್ರಮಿಸುವುದು.

ಈ ಸಂಸ್ಥೆಯನ್ನು ೧೯೭೪ ರಲ್ಲಿ 'ರಾಷ್ಟ್ರೀಯ ಸಾಮಾಜಿಕ ಸಂರಕ್ಷಣಾ ಸಂಸ್ಥೆ'ಯಾಗಿ ಪರಿವರ್ತಿಸಲಾಯಿತು. ಇದು ಸಾಮಾಜಿಕ ಸಂರಕ್ಷಣ ಕ್ಷೇತ್ರದಲ್ಲಿ ಬಹು ಮಹತ್ತ್ವದ ಹೆಜ್ಜೆ. ಈ ರಾಷ್ಟ್ರೀಯ ಸಾಮಾಜಿಕ ಸಂರಕ್ಷಣಾ ಸಂಸ್ಥೆಯು, ಅಖಿಲ ಭಾರತ ಬಂದಿಖಾನೆ ಕೈಪಿಡಿ ಸಮಿತಿಯ ಶಿಫಾರಸುಗಳ ಜಾರಿಯನ್ನು ಪುನರಾವಲೋಕನ ಮಾಡುತ್ತದಲ್ಲದೆ, ಬಂದಿಖಾನೆ ಸುಧಾರಣೆಯ ಕುರಿತಾದ ಶಿಫಾರಸುಗಳು ಸರಿಯಾದ ರೀತಿಯಲ್ಲಿ ಜಾರಿಗೊಳ್ಳುತ್ತಿವೆಯೇ, ವಿವಿಧ ರಾಜ್ಯಗಳು ಬಂದಿಖಾನೆ ಆಡಳಿತವನ್ನು ಸರಿಯಾದ ದಾರಿಯಲ್ಲಿ ನಡೆಸಿಕೊಂಡೊಯ್ಯುತ್ತಿವೆಯೇ ಎಂಬುದನ್ನು ನಿಶ್ಚಿತಪಡಿಸಿಕೊಳ್ಳುವ ಜವಾಬ್ದಾರಿ ಈ ಸಂಸ್ಥೆಯದ್ದು.

## ೧.೧೩ ಬಂದಿಖಾನೆಗಳ ಕುರಿತ ಕಾರ್ಯತಂಡ (Working group on Prisons, ೧೯೭೨-೭೩)

ಭಾರತ ಸರಕಾರವು ೧೯೭೨ರಲ್ಲಿ, ಬಂದಿಖಾನೆಗಳ ಆಡಳಿತ ಹಾಗೂ ಬಂದಿಖಾನೆಗಳೊಳಗಿನ ಕೈದಿಗಳ ಜೀವನದ ಸ್ಥಿತಿಗತಿಗಳನ್ನು ಸುಗಮಗೊಳಿಸುವುದಕ್ಕೆ ಮತ್ತು ಸುಧಾರಿಸುವುದಕ್ಕೆ ಕೈಗೊಳ್ಳಲಾದ ಕ್ರಮಗಳನ್ನು

ಪರೀಕ್ಷಿಸಲೋಸುಗ ಕಾರ್ಯತಂಡವೊಂದನ್ನು ಸರಕಾರ ರಚಿಸಿತು. ಈ ತಂಡವು ೧೯೭೩ರಲ್ಲಿ ಭಾರತ ಸರಕಾರಕ್ಕೆ ತನ್ನ ವರದಿಯನ್ನು ಸಲ್ಲಿಸಿ, ಈ ಕೆಳಗಿನ ಅಂಶಗಳ ಬಗ್ಗೆ ಶಿಫಾರಸುಗಳನ್ನು ಮಾಡಿತು.

೧. ಬಂದಿಖಾನೆಗಳ ಬಗ್ಗೆ ರಾಷ್ಟ್ರೀಯ ನೀತಿ ನಿರೂಪಣೆ ಅಗತ್ಯ

೨. ಸೆರೆಮನೆವಾಸಕ್ಕೆ ಪರ್ಯಾಯ ಶಿಕ್ಷೆ ವಿಧಿಸುವುದು

೩. ಬಂದಿಖಾನೆಗಳ ಮೇಲೆ ಪ್ರಭಾವವುಂಟು ಮಾಡುವ ಶಾಸನ ರಚನೆ

೪. ಬಂದಿಖಾನೆಗಳ ಆಂತರಿಕ ಆಡಳಿತ ಸುಧಾರಣೆ

೫. ಇಲಾಖಾ ಸಂಘಟನೆ ಮತ್ತು ಸಂಯೋಜನೆ

೬. ಬಂದಿಖಾನೆ ನೌಕರ ವರ್ಗದ ಭರ್ತಿ ಮತ್ತು ತರಬೇತಿ

೭. ಸಿಬ್ಬಂದಿ ವರ್ಗದ ಸೇವಾ - ಸ್ಥಿತಿ ಗತಿಗಳು

೮. ಕೈದಿಗಳ ವರ್ಗೀಕರಣ ಹಾಗೂ ಸಂಸ್ಥೆಗಳ ವೈವಿಧ್ಯತೆ

೯. ಬಂದಿಖಾನೆಗಳಲ್ಲಿ ಚಿಕಿತ್ಸಾ ಸೇವೆಗಳು ಹಾಗೂ ಕೃತಿ - ಕಾರ್ಯಕ್ರಮಗಳು

೧೦. ಶಿಕ್ಷೆ, ಅವಧಿಪೂರ್ವ ಬಿಡುಗಡೆ ಮತ್ತು ಅನುಪಾಲನದ ಪುನರವಲೋಕನ

೧೧. ಬಂದಿಖಾನೆಯ ವಾಸ್ತುಶಿಲ್ಪ ಮತ್ತು ಕಟ್ಟಡಗಳು

೧೨. ಬಂದಿಖಾನೆ ಅಭಿವೃದ್ಧಿ ಯೋಜನೆಗಳಲ್ಲಿ ಆದ್ಯತಾ ಕ್ರಮ[೮]

ಈ ಶಿಫಾರಸುಗಳನ್ನು ಭಾರತ ಸರಕಾರ ತನ್ನ ಬಂದಿಖಾನೆಗಳಲ್ಲಿ ಜಾರಿಗೊಳಿಸಲು ಆಸಕ್ತವಾದರೂ ರಾಜ್ಯ ಸರಕಾರಗಳು ಈ ವಿಷಯದಲ್ಲಿ ಆಮೆನಡಿಗೆಯನ್ನು ವ್ಯಕ್ತಪಡಿಸಿದವು. ದೇಶದೆಲ್ಲೆಡೆ ಬಂದಿಖಾನೆಯ ವಿಷಯ ರಾಜ್ಯ ಸರಕಾರಗಳದ್ದಾಗಿದ್ದು, ತನ್ನದೇನೂ ಹಿಡಿತವಿಲ್ಲ ಎಂದು ತಡವಾಗಿ ಸತ್ಯಾಂಶವನ್ನು ಅರಿತುಕೊಂಡ ಕೇಂದ್ರ ಸರಕಾರ ಈ ವಿಚಾರವಾಗಿ ರಾಜ್ಯ ಸರಕಾರಗಳನ್ನು ಅಂಕುಶದಲ್ಲಿಟ್ಟು ಕೊಳ್ಳಲು ಬಂದಿಖಾನೆ ಸುಧಾರಣೆಯನ್ನು ಪಂಚವಾರ್ಷಿಕ ಯೋಜನೆಯಡಿ ಅಳವಡಿಸುವ ಯೋಜನೆಯನ್ನು ಮುಂದಿಟ್ಟಿತು.

## ೧.೧೪ ಯೋಜನ ವಲಯದಲ್ಲಿ ಬಂದಿಖಾನೆ ಆಡಳಿತ

ಬಂದಿಖಾನೆಗಳ ಆಡಳಿತದಲ್ಲಿ ನಿರೀಕ್ಷಿತ ಸುಧಾರಣೆಗಳು ಕಾಣದೆ, ಅದು ಮತ್ತಷ್ಟು ಹದಗೆಡುತ್ತಿದೆಯೆಂಬ ವಾಸ್ತವ ವಿಚಾರ ಕೇಂದ್ರ ಸರಕಾರದ ಗಮನಕ್ಕೆ ಬಂದಾಗ ಅದು ಮುಂದಿನ ದಾರಿಯ ಬಗ್ಗೆ ಗಂಭೀರವಾಗಿ ಯೋಚಿಸಿತು. ೧೯೭೭ - ೭೮ರಲ್ಲಿ ಕೇಂದ್ರದ ಗೃಹ ಸಚಿವಾಲಯವು ಯೋಜನೆಯೊಂದನ್ನು ರೂಪಿಸಿ ಬಂದಿಖಾನೆಗಳನ್ನು ಆಧುನೀಕರಣ ಗೊಳಿಸಿ, ಕೈದಿಗಳ ಸ್ಥಿತಿ - ಗತಿಗಳನ್ನು ಸುಧಾರಿಸುವ ಬಗ್ಗೆ ಮೊದಲ ಹೆಜ್ಜೆ ಇರಿಸಿತು. ಕೇಂದ್ರ ಸರಕಾರದ ಈ ಪ್ರಾಯೋಗಿಕ ಹೆಜ್ಜೆಯಿಂದ ಅದು ಬಂದಿಖಾನೆಗಳ ಸುಧಾರಣೆ ಹಾಗೂ ಕೈದಿಗಳ ಜೀವನ ಶೈಲಿಯನ್ನು ಬದಲಾಯಿಸಲು ಅದೆಷ್ಟು ಉತ್ಸುಕವಾಗಿದೆ ಎಂಬುದನ್ನು ಸಾಬೀತು ಪಡಿಸಿದಂತಾಯಿತು. ಈ ಪ್ರಯತ್ನ ಇಲ್ಲಿಗೇ ಕೊನೆಗೊಳ್ಳದೆ, ಬಂದಿಖಾನೆಯನ್ನು ಯೋಜನಾ ವಲಯಕ್ಕೆ ಸೇರಿಸುವ ಬಗ್ಗೆ ತನ್ನ ಆಲೋಚನೆಯನ್ನು ಮುಂದರಿಸಿತು.

ಯೋಜನಾ ಆಯೋಗವು, ನಾಲ್ಕನೇಯ ಪಂಚವಾರ್ಷಿಕ ಯೋಜನೆಯಲ್ಲಿ ಬಂದಿಖಾನೆ ಆಡಳಿತವನ್ನು ಅಳವಡಿಸುವುದಕ್ಕೋಸ್ಕರ ಸಾಮಾಜಿಕ ಸಂರಕ್ಷಣಾ ಕ್ಷೇತ್ರದಡಿ ಯೋಜನೆಗಳನ್ನು ಸಿದ್ಧಪಡಿಸುವುದಕ್ಕೆಂದು ಒಂದು ಕಾರ್ಯತಂಡವನ್ನು ರಚಿಸಿತು. ಪಂಚವಾರ್ಷಿಕ ಯೋಜನೆಯಡಿ ಬಂದಿಖಾನೆಗಳ ಆಡಳಿತ - ಸುಧಾರಣೆಯನ್ನು ಸೇರಿಸುವಂತೆ ಈ ಕಾರ್ಯತಂಡ ಶಿಫಾರಸು ಮಾಡಿತು. ಆದರೆ ಮತ್ತೊಂದು ಕಾರ್ಯತಂಡ ಐದನೇಯ ಪಂಚವಾರ್ಷಿಕ ಯೋಜನೆಯಲ್ಲಿ ಬಂದಿಖಾನೆ ಆಡಳಿತವನ್ನು 'ಅಭಿವೃದ್ಧಿ ಕಾರ್ಯಕ್ರಮ'ವೆಂದು ಪರಿಗಣಿಸಿ ಸೇರ್ಪಡೆಗೊಳಿಸಬೇಕೆಂದು ಶಿಫಾರಸು ಮಾಡಿತು. ಒಟ್ಟಾರೆ ಬಂದಿಖಾನೆ ಆಡಳಿತವನ್ನು ಯೋಜನಾ ವಲಯದಲ್ಲಿ ಸೇರಿಸದೆಯೇ ಬಂದಿಖಾನೆಗಳ ಸುಧಾರಣೆ ಹಾಗೂ ಆಡಳಿತವನ್ನು ಸುಗಮಗೊಳಿಸಲು ಸಾಧ್ಯವಿಲ್ಲವೆಂದು ಕೈದಿಗಳನ್ನು ತಿದ್ದುವ ಆಡಳಿತಗಾರರು (Correctional Administrators) ಅಭಿಪ್ರಾಯ ಪಟ್ಟರು. ಯಾಕೆಂದರೆ ಆ ಸುಧಾರಣಾ ಪ್ರಕ್ರಿಯೆಯ ದಾರಿಯಲ್ಲಿದ್ದ ಮುಖ್ಯ ಅಡೆತಡೆಗಳೆಂದರೆ :

೧. ನಿಧಿ ಕೊರತೆ

೨. ಬಂದಿಖಾನೆಗಳ ಕಾರ್ಯ ಯೋಜನೆಗಳಿಗೆ ದೊರೆತಿರುವ ಕಡಿಮೆ ಆದ್ಯತೆ

ಬಂದಿಖಾನೆ ಆಡಳಿತವನ್ನು, ಅಭಿವೃದ್ಧಿ ಪಡಿಸಬೇಕಾದ ಕಾರ್ಯಕ್ರಮವೆಂದು ಯೋಜನಾ ವಲಯದಲ್ಲಿ ಸೇರಿಸುವುದರಿಂದ, ಇದುವರೆಗೆ ಕಾರ್ಯರೂಪಕ್ಕೆ ತರಲಾಗದಿರುವ ಅನೇಕ ಬಂದಿಖಾನೆಗಳೊಳಗಿನ ಸುಧಾರಣೆಗಳನ್ನು ಮತ್ತು ಆಡಳಿತವನ್ನು ಸುಗಮಗೊಳಿಸುವ ಕಾರ್ಯ ಹೆಚ್ಚು ದೃಢವಾಗಿಯೂ ಸತ್ವಪೂರ್ಣವಾಗಿಯೂ ಜಾರಿಗೊಳಿಸಲು ಸಾಧ್ಯವೆಂಬ ಆಶಯ ಕೇಂದ್ರ ಸರಕಾರದ್ದಾಗಿತ್ತು.

ಏಳನೇ ಹಣಕಾಸು ಆಯೋಗವು ತನ್ನ ೧೯೭೮ರ ವರದಿಯಲ್ಲಿ ದೇಶದ ಬಂದಿಖಾನೆಗಳನ್ನು ಸುಧಾರಿಸುವ ಕಾರಣಕ್ಕಾಗಿ ಬಂದಿಖಾನೆ ಆಡಳಿತವನ್ನು ಯೋಜನಾ ವಲಯದಲ್ಲಿ ಸೇರ್ಪಡೆಗೊಳಿಸುವ ಅವಶ್ಯಕತೆ - ಅನಿವಾರ್ಯದ ಬಗ್ಗೆ ವಿವರಣೆ ನೀಡಿತಲ್ಲದೆ, ೪೮.೩೧ ಕೋಟಿ ಹಣವನ್ನು ಬಂದಿಖಾನೆ ಹಾಗೂ ಕೈದಿಗಳ ಸುಧಾರಣೆಗಾಗಿ ವಿವಿಧ ರಾಜ್ಯಗಳಿಗೆ ಮೀಸಲಿಡುವಂತೆ ಶಿಫಾರಸು ಮಾಡಿತು.

ಏಳನೇಯ ಪಂಚವಾರ್ಷಿಕ ಯೋಜನೆಯಿಂದ (೧೯೮೮ - ೧೯೯೨) ಎಲ್ಲ ರಾಜ್ಯ ಸರಕಾರಗಳಿಗೂ ಷರತ್ತಿನ ಮೇರೆಗೆ 'ಬಂದಿಖಾನೆ ಆಡಳಿತದ ಆಧುನೀಕರಣ' ಯೋಜನೆಯಲ್ಲಿ ಕೇಂದ್ರ ಸರಕಾರ ಧನಸಹಾಯವನ್ನು ನೀಡುತ್ತಿದೆ. ಎಂಟನೆ ಪಂಚವಾರ್ಷಿಕ ಯೋಜನೆ (೧೯೯೩ - ೯೭) ಹಾಗೂ ಒಂಭತ್ತನೇ ಪಂಚವಾರ್ಷಿಕ ಯೋಜನೆಯಲ್ಲೂ (೧೯೯೮ - ೨೦೦೨) ಬಂದಿಖಾನೆಗಳ ಆಡಳಿತ ಸುಧಾರಣೆಗೆ ಹಲವು ಕೋಟಿ ಹಣವನ್ನು ನೀಡಿ, ಬಂದಿಖಾನೆಗಳನ್ನು ಮತ್ತು ಕೈದಿಗಳನ್ನು ಸುಧಾರಿಸುವ ಬಗ್ಗೆ ಕೇಂದ್ರ ಸರಕಾರ ತನ್ನ ಜವಾಬ್ದಾರಿಯನ್ನು ಸಮರ್ಥವಾಗಿ ನಿರ್ವಹಿಸುತ್ತಿದೆ. ಕೈದಿಗಳ ಮನಪರಿವರ್ತನೆಯನ್ನೇ ಮುಖ್ಯವಾಗಿರಿಸಿಕೊಂಡು ಬಂದಿಖಾನೆಗಳನ್ನು ಆಧುನೀಕರಣಗೊಳಿಸುವ ಪರಿಕಲ್ಪನೆಯಿಂದ ಕೈದಿಗಳ ಶಿಕ್ಷೆಯ ಉದ್ದೇಶ ಈಡೇರುವಂತಾಗಿದೆ.

ಅಖಿಲ ಭಾರತ ಬಂದಿಖಾನೆ ಸುಧಾರಣಾ ಸಮಿತಿ, ೧೯೮೦ - ೮೩ (All India Committee on Jail reforms, 1980-83) ಯು ಮುಲ್ಲಾ ಸಮಿತಿ ಎಂದೇ ಪ್ರಸಿದ್ಧಿ ಪಡೆದ ಸಮಿತಿ. ಸಾಮಾಜಿಕ ಪರಿವರ್ತನೆಯ ಅನಿವಾರ್ಯತೆಯ ಬಗ್ಗೆ ಕಾಳಜಿಯಿದ್ದ ಜಸ್ಟಿಸ್ ಆನಂದ್ ನರೇನ್ ಮುಲ್ಲಾ ಅವರ ನೇತೃತ್ವದ ಸಮಿತಿ ದೇಶದ ಬಂದಿಖಾನೆಗಳ ಬಗ್ಗೆ ಸಮಗ್ರವಾದ ಅಧ್ಯಯನವನ್ನು ವಿವಿಧ ದೃಷ್ಟಿಕೋನಗಳಿಂದ ನಡೆಸಿ, ಸರಕಾರಕ್ಕೆ ಸಲ್ಲಿಸಿದ್ದ ಸವಿವರ ವರದಿ ಹಾಗೂ ಪ್ರಗತಿಪರ ಹಾಗೂ ಸಮಾಜವಾದಿ ಗ್ರಹಿಕೆಗಳಿಂದ ಕೂಡಿದ್ದ ಶಿಫಾರಸುಗಳು ಸರ್ವಕಾಲಕ್ಕೂ ಪ್ರಸ್ತುತವೆನಿಸುವಂತಹದ್ದು. ಲಾರ್ಡ್ ಮೆಕಾಲೆಯ ದೂರದೃಷ್ಟಿ, ಪರದೇಶಿಯನಾದರೂ ಮಾನವೀಯ ನೆಲೆಯಿಂದ ಬಂದಿರುವ ಶಿಫಾರಸುಗಳೇ ನರೇನ್ ಮುಲ್ಲಾ ನೇತೃತ್ವದ ಸಮಿತಿಯಿಂದ ವ್ಯಕ್ತವಾಗಿದ್ದು, ಮಾನವತಾವಾದವೆಂಬುದು ಕಾಲ - ಭೌಗೋಳಿಕ ವ್ಯಾಪ್ತಿಗೆ ಮೀರಿದ್ದು ಎಂಬುದನ್ನು ಸಾಬೀತು ಪಡಿಸಿದೆ.

ಹುಟ್ಟಿನಿಂದ ಯಾರೂ ಅಪರಾಧಿಗಳಲ್ಲ - ಅದು ಸಮಾಜದ ಕೊಡುಗೆ ಎಂದೇ ನಂಬಿದ್ದ ಜಸ್ಟಿಸ್ ಮುಲ್ಲಾ ತನ್ನ ವರದಿಯಲ್ಲಿ, ತಾನು ನ್ಯಾಯಾಧೀಶನ ಪಟ್ಟವೇರುವದಕ್ಕೂ ಹಿಂದೆ (೧೯೩೦ರ ಸುಮಾರಿಗೆ) ತಾನು ಕಂಡಿದ್ದ ಅಲಕ್ಷಿತ - ಅನೂಹ್ಯ ಕತ್ತಲ ಜಗತ್ತನ್ನು ಹಾಗೂ ಅಲ್ಲಿನ ಬದುಕು ಭಾರವನ್ನು ಪದ್ಯದಲ್ಲಿ ಹೀಗೆ ವರ್ಣಿಸಿದ್ದಾರೆ:

Locked behind high walls and Iron Bars,
An unfortunate human world slumbers;
Here they have lost even their names,
And how they are just a roll of numbers.

When will their season of sorrow change,
When will the locks be broken;
With every breath each one of them hopes and prays,
All these lost souls in agony unspoken;

Counting each moment of their unending prison days.*

ಒಬ್ಬ ನ್ಯಾಯಾಧೀಶನ ಕಣ್ಣೆದುರಿನ ಸತ್ಯವಿದು. ಇದೇ ನ್ಯಾಯಾಧೀಶ ಮುಂದೆ ಮಹತ್ವದ ಬಂದಿಖಾನೆ ಸುಧಾರಣಾ ಸಮಿತಿಯೊಂದರ ಅಧ್ಯಕ್ಷರಾಗಿ, ಕೈದಿಗಳ ಕಣ್ಣೊರೆಸುವ ಭರವಸೆಯ ವರದಿಯನ್ನು ಸರಕಾರಕ್ಕೆ ಸಲ್ಲಿಸುತ್ತಾರೆ ಎಂಬುದು ಸ್ವತಾ ಜಸ್ಟಿಸ್ ಆನಂದ್ ನರೇನ್ ಮುಲ್ಲಾ ಅವರೇ ಯೋಚಿಸಿರಲಿಲ್ಲ.

ಬಂದಿಖಾನೆಗಳ ಅಸಂಖ್ಯ ಸಮಸ್ಯೆಗಳನ್ನು ಕೈಗೆತ್ತಿಕೊಳ್ಳುವ ಮುನ್ನ ಮುಲ್ಲಾ ಸಮಿತಿಯ ಅಧ್ಯಕ್ಷ ನರೇನ್ ಮುಲ್ಲಾ ಅವರು ತನ್ನನ್ನು ನೇಮಿಸಿದ ಸರ್ಕಾರವನ್ನೇ ಪ್ರಶ್ನಿಸುತ್ತಾರೆ. 'ಜೈಲು ಸುಧಾರಣೆ' ಎಂಬ ಅಂಶವನ್ನು ಸರಕಾರ ಕೈಗೆತ್ತಿಕೊಳ್ಳುವ ಮುನ್ನ ತನ್ನ ನಿಲುವನ್ನು ಅದು ಸ್ಪಷ್ಟಪಡಿಸಬೇಕಾಗಿದೆ - 'What is its attittude towords the unfortunate group of persons in prisons? ಕೇವಲ ಬಂದಿಖಾನೆಗಳನ್ನೇ ಸರಕಾರ

ಸುಧಾರಿಸುವುದೇ? ಅಥವ ಕೈದಿಗೆ ಸಂವಿಧಾನ ದತ್ತವಾಗಿರುವ ಮೂಲಭೂತ ಹಕ್ಕುಗಳನ್ನು ಬಂದಿಖಾನೆಯೊಳಗೆ ಆತನಿಗೆ ಸಿಗುವಂತೆ ಮಾಡಿ ಆತನ ವ್ಯಕ್ತಿತ್ವವನ್ನು ಸುಧಾರಿಸುದೆ? ಕೈದಿ ನೀತಿಭ್ರಷ್ಟನೆಂದು ಸಮಾಜದಿಂದ ಬಹಿಷ್ಕರಿಸಲ್ಪಟ್ಟಿದ್ದರೂ ಆತನ ಹಕ್ಕನ್ನು ಕಸಿದುಕೊಳ್ಳದೆಯೇ ದಂಡನೆಯನ್ನು ವಿದಿಸಬೇಕೆ? ಅಥವಾ ಹಕ್ಕನ್ನು ಕಸಿದುಕೊಳ್ಳಬೇಕೆ?' ಮುಲ್ಲಾ ಈ ಪ್ರಶ್ನೆಗಳನ್ನು ಸರಕಾರಕ್ಕೆ ಕೇಳುತ್ತಾ ತನ್ನ ವರದಿಯನ್ನು ಮುಂದುವರಿಸುತ್ತಾರೆ.

ಕೈದಿಗಳನ್ನು ಸಲೀಸಾಗಿ ಕೈಗೆ ಸಿಕ್ಕ ಕ್ರೂರಮೃಗಗಳೆಂಬಂತೆ ಬೇಟೆಯಾಡುವ ಕೆಲಸ ಈಗ ನಡೆಯುತ್ತದೆ. ಅದರಲ್ಲೂ ಬಹಳಷ್ಟು ಮಂದಿ ಹಸುಮನಸ್ಸಿನವರು, ಯಾವುದೋ ಕಾರಣಕ್ಕೆ ಸಮಾಜದ ನೀತಿ ನಿಯಮ ಕಟ್ಟು ಪಾಡುಗಳಿಂದ ದೂರ ಸರಿದವರು. ಅಂತವರನ್ನು ಸರಿಯಾದ ಮಾರ್ಗದರ್ಶನ ನೀಡಿ ಸಮಾಜದ ಮುಖ್ಯವಾಹಿನಿಗೆ ಎಳೆತರುವುದು ಮುಖ್ಯ. ಅದರ ಬದಲಿಗೆ ಈ ಅಪರಾಧಿಗಳು ಸಮಾಜದ ರೋಗಗ್ರಸ್ತ ಕೈ - ಕಾಲುಗಳು ಎಂದು ಪರಿಗಣಿಸಿ, ಅದು ಗುಣಪಡಿಸಲಾಗದ್ದು ಎಂದು ಕತ್ತರಿಸಿ ಎಸೆಯುವುದು ಸಾಧುವೆ? ಅಥವ ಗುಣಪಡಿಸಿ ಊನವಿಲ್ಲದ ಅಂಗವೆಂದು ಸಮುದಾಯಕ್ಕೆ ಕೊಡುಗೆ ನೀಡುವುದು ಒಳಿತೋ ಎಂದು ನರೇನ್ ಮುಲ್ಲಾ ಪ್ರಶ್ನಿಸುತ್ತಾರೆ. ಸೆರೆವಾಸದಲ್ಲಿ ಅಪರಾಧಿಯನ್ನು ಶಿಕ್ಷಿಸುವ ನೆಪದಲ್ಲಿ ಬರೇ ಹೊಟ್ಟೆ - ಬಟ್ಟೆಗೆ ನೀಡಿ ಅವರನ್ನು 'ಉಸಿರಾಡುವ ಹೆಣ'ದಂತೆ ಬದುಕಿಸುವ ಬಗ್ಗೆ ಈ ಸಮಿತಿ ಆಕ್ಷೇಪ ಎತ್ತಿತಲ್ಲದೆ, ಇಡೀಯ ಸಮಿತಿಯು ಒಂದು ಅವಿರೋಧವಾದ ಸ್ಪಷ್ಟ ತೀರ್ಮಾನಕ್ಕೆ ಬದ್ಧವಾಯಿತು.

ಕೈದಿಯ ಬದುಕಿಗೆ ಗ್ರಹಣದಂತೆ ಪರಿಣಮಿಸಿದ ಸೆರೆಮನೆ ಶಿಕ್ಷೆಯ ಅವಧಿಯನ್ನು ಪೂರೈಸಿದ ಆತ, ನಂತರದ ಕ್ಷಣದಲ್ಲಿ ಆತನನ್ನು ಆವರಿಸಿರುವ ಕಳಂಕದ ಹೊಗೆಯಿಂದ ಹೊರಬಂದು, ಸಮಾಜದಲ್ಲಿ ತನ್ನ ಇಷ್ಟಬಂದ ಬದುಕನ್ನು ವೃತ್ತಿರೂಪದಲ್ಲಿ ಆಯ್ಕೆ ಮಾಡಲು ಸರ್ವಸ್ವತಂತ್ರನಾಗುವಂತೆ ಆತನನ್ನು ಈ ಬಂದಿಖಾನೆ ಸುಧಾರಣಾ ಸಮಿತಿ ಸಿದ್ಧಪಡಿಸಬೇಕು. ಆದುದರಿಂದ ಸರಕಾರದ ಮುಖ್ಯ ಕರ್ತವ್ಯವೆಂದರೆ 'ಬಂಧನದಲ್ಲಿರುವ ಕೈದಿ ಬಿಡುಗಡೆಯಾದೊಡನೆ ಸಮಾಜದ ಮುಖ್ಯವಾಹಿನಿಗೆ ಸೇರಲು ಅನುವಾಗುವಂತೆ, ಆತ ಬಂದಿಖಾನೆಯೊಳಗೆ ಸಾಮಾಜಿಕವಾಗಿ ಅಂಗವಿಕಲನಾಗದಂತೆ ಎಚ್ಚರಿಕೆ ತೆಗೆದುಕೊಂಡು, (ಆತನಿಗೆ ವೃತ್ತಿ ಬದುಕನ್ನು ಕಲಿಸಿ) ಬಂದಿಖಾನೆಯಿಂದ ಆತ ಯಾವುದೇ ಅಳುಕಿಲ್ಲದೆ ಸಮಾಜದಲ್ಲಿ ಲಭ್ಯವಿರುವ ಆತನ ಸ್ಥಾನಕ್ಕೆ ನೇರವಾಗಿ ಮರುಳುವಂತಾಗಿ ಮತ್ತೆ ಹೊಸಬದುಕನ್ನು ಹಿಂದಿನಂತೆಯೇ ಸಹಜವಾಗಿ ನಡೆಸುವಂತೆ ಆತನನ್ನು ಸಿದ್ಧಗೊಳಿಸುವುದು' ಎಂಬ ಶಿಫಾರಸನ್ನು ಅಕ್ಷರಶಃ ಜಾರಿಗೆ ತರುವಂತೆ ಸರಕಾರಕ್ಕೆ ಸೂಚಿಸುವುದು.

ಮುಲ್ಲಾ ಸಮಿತಿ ಕೈದಿಗಳ ಮನಪರಿವರ್ತನೆಯನ್ನೇ ಪ್ರಮುಖ ಉದ್ದೇಶವನ್ನಾಗಿರಿಸಿಕೊಂಡು ಬಂದಿಖಾನೆ ಸುಧಾರಣೆಯ ಬಗ್ಗೆ ಸರಕಾರಕ್ಕೆ ಅನೇಕಾನೇಕ ಪ್ರಗತಿಪರ ಸಲಹೆ - ಶಿಫಾರಸುಗಳನ್ನು ಮಾಡಿದೆ. ಈ ಶಿಫಾರಸುಗಳನ್ನು ಜಾರಿಗೊಳಿಸುವುದಕ್ಕಾಗಿ ಸರಕಾರ ಭಾರಿ ಹಣವನ್ನು ವ್ಯಯಿಸಬೇಕಾದರೂ, ಹಣ ವ್ಯಯಿಸಬೇಕಾದುದು ಅನಿವಾರ್ಯ ಎಂದು ಸಮಿತಿ ಸ್ಪಷ್ಟಪಡಿಸಿದೆ. ಮನುಕುಲದಲ್ಲಿ ಮಮಕಾರವಿದ್ದಲ್ಲಿ ಹಲವು ಶಿಫಾರಸುಗಳಲ್ಲಿ ಕೆಲವನ್ನಾದರೂ ಆದ್ಯತೆಯ ಮೇರೆಗೆ ಚಲಾವಣೆಗೆ ತರಬೇಕು, ಮತ್ತೆ ಕೆಲವನ್ನು ನಿಧಾನಕ್ಕೆ ಜಾರಿಗೊಳಿಸಿದರೂ ಸಾಕು ಎಂದು ಸರಕಾರಕ್ಕೆ ಸಮಿತಿ ಸಲಹೆ ನೀಡಿದೆ.

ಈ ಶಿಫಾರಸುಗಳನ್ನು ಜಾರಿಗೆ ತರಲು ಕೇಂದ್ರ ಸರಕಾರ ಗೃಹಸಚಿವಾಲಯದಡಿ ಒಂದು ಪ್ರತ್ಯೇಕ ಪೀಠ (Cell) ಒಂದನ್ನು ರಚಿಸಿ ಆದಷ್ಟು ಬೇಗನೆ ಅವುಗಳನ್ನು ಕಾರ್ಯರೂಪಕ್ಕೆ ತರುವಂತೆ ನೋಡಿಕೊಳ್ಳುವುದು ಹಾಗೂ ಈ ವರದಿಯೂ ಹಿಂದಿನ ಇತರ ಆಯೋಗ, ಸಮಿತಿಗಳ ವರದಿಗಳಂತೆ ಕಪಾಟಿನಲ್ಲಿ ಧೂಳು ಹಿಡಿಯುವ ಗತಿಕಾಣಬಾರದು. ಹೀಗೆಯೇ ಒಂದು ಆಯೋಗ... ಅನಂತರ ಮತ್ತೊಂದು ಆಯೋಗ - ಸಮಿತಿಗಳನ್ನು ರಚಿಸಿ ಅವುಗಳಿಗೂ ಅದೇ ಗತಿ ಕಾಣಿಸುವುದು ಒಳ್ಳೆಯದಲ್ಲ - ಎಂದು ಜಸ್ಟಿಸ್ ಮುಲ್ಲಾ ತನ್ನ ಅನಿಸಿಕೆಯನ್ನು ಸರಕಾರಕ್ಕೆ ನೇರ ತಿಳಿಸಿರುವುದರಿಂದ ಈ ವರದಿಯ ಅನೇಕ ಶಿಫಾರಸುಗಳು ಬಂದಿಖಾನೆಗಳಲ್ಲಿ ಕ್ಷಿಪ್ರ ಜಾರಿಗೊಳ್ಳಲು ಸಾಧ್ಯವಾಯಿತು.

ಯಾವುದೇ ವರದಿಯನ್ನು ಕೇವಲ ಕಡತದಲ್ಲಿ ಜಾರಿಗೊಳಿಸಿದರೆ, ಬಂದಿಖಾನೆಯ ಸ್ಥಿತಿ ಅಥವ ಸಮಾಜದ ಅಪರಾಧೀ ವಾತಾವರಣದಲ್ಲಿ ಯಾವುದೇ ವ್ಯತ್ಯಾಸ ಕಾಣಲಾಗದು - ಎಂದು ಮಾರ್ಮಿಕವಾಗಿ ಹೇಳುತ್ತಲೇ ಮುಲ್ಲಾ ಸಮಿತಿ ಸರಕಾರಕ್ಕೆ ಹಲವು ಶಿಫಾರಸು - ಸಲಹೆಗಳನ್ನು ತನ್ನ ವರದಿಯಲ್ಲಿ ನೀಡಿದೆ. ಅವುಗಳಲ್ಲಿ ಅತೀ ಮುಖ್ಯವಾದುದನ್ನು ಅಧ್ಯಯನದ ವಿಷಯಕ್ಕೆ ಸಂಬಂಧಿಸಿದಂತೆ ಮಾತ್ರವೇ ಈ ಅಧ್ಯಯನದಲ್ಲಿ ಪ್ರಸ್ತಾಪಿಸಲಾಗಿದೆ.

೧. ಸದ್ಯ ಬಂದಿಖಾನೆ ಆಡಳಿತದಲ್ಲಿ ಬಳಕೆಯಲ್ಲಿರುವ ಕ್ರಮ - ನಿಯಮ - ಶೈಲಿ ಹಳೆಯ ಸಾಂಪ್ರದಾಯಿಕ ಶೈಲಿಗನುಗುಣವಾಗಿದ್ದು, ಅವನ್ನು ಹಳೆಯ ಶೈಲಿಯೆಂದು ಪರಿಗಣಿಸಿ ಹೊಸ 'ದಾರಿ'ಯತ್ತ ಕಣ್ಣು ಹಾಯಿಸಬೇಕು. ಯಾಕೆಂದರೆ ಈ ಶೈಲಿಯಿಂದಾಗಿಯೇ ಅಪರಾಧಗಳು ಮತ್ತಷ್ಟು ಹೆಚ್ಚುತ್ತವೆ. (ಹಳೆಯ ನಿಯಮ, ಶೈಲಿ ವರದಿಯಲ್ಲಿ ಸ್ಪಷ್ಟಗೊಂಡಿದೆ)

೨. ಪ್ರಜಾಪ್ರಭುತ್ವದ ಆಡಳಿತದಲ್ಲಿ, ಸಮಾಜದ ಹಿತಾಸಕ್ತಿಯನ್ನು ಕಾಪಾಡಿ, ರಕ್ಷಿಸಲು ಕಾನೂನುಗಳಿವೆ. ಪ್ರಜೆಯ ಹಕ್ಕುಗಳನ್ನು ಸಂವಿಧಾನ ದಯಪಾಲಿಸಿದೆ. ಪ್ರಜೆಗಳ ನಾಗರಿಕ ಹಕ್ಕುಗಳನ್ನು ರಕ್ಷಿಸುವುದರ ಜತೆಗೆ ಸಾಮಾಜಿಕ ಮೌಲ್ಯಗಳನ್ನು ರಕ್ಷಿಸಬೇಕಾದುದು ಕಾನೂನು. ಪ್ರಸ್ತುತ ಭಾರತೀಯ ದಂಡ ಸಂಹಿತೆ ಹಾಗೂ ದಂಡ ಪ್ರಕ್ರಿಯಾ ಸಂಹಿತೆಯನ್ನು ಅವಲೋಕಿಸಿದಾಗ, ಈ ಕೆಳಗಿನ ಪ್ರಶ್ನೆಗಳು ಎದುರಾಗುತ್ತಿವೆ. ಈ ಪ್ರಶ್ನೆಗಳಿಗೆ ಮೊದಲು ಸ್ಪಷ್ಟ ಉತ್ತರವನ್ನು ನ್ಯಾಯಾಂಗದಿಂದ ಸ್ಪಷ್ಟ ಪಡಿಸಿಕೊಳ್ಳತಕ್ಕದು.

ಶಿಕ್ಷೆಯ ಹಿಂದಿರುವ ಉದ್ದೇಶವೇನು? ಅಪರಾಧಿಗೆ ಯಾತಕ್ಕಾಗಿ ಶಿಕ್ಷೆ ವಿಧಿಸುವುದು - ಹಾಗೂ ಅಪರಾಧಿಯನ್ನು ನಡೆಸಿಕೊಳ್ಳತಕ್ಕ ರೀತಿ, ಅಪರಾಧಿಯ ಹಕ್ಕುಗಳು ಯಾವುವು -ಇದು ಸ್ಪಷ್ಟಗೊಳ್ಳಬೇಕು.

೩. ಅಪರಾಧಿಯ ಗುಣ ನಡತೆಗಳನ್ನು ಗಮನಿಸಿ ಆಡಳಿತ ವರ್ಗ ಮಾಫಿ, ರಜೆ, ತುರ್ತುರಜೆ (Parole and Furloe) ಸೌಲಭ್ಯ ನೀಡುವಲ್ಲಿ ಹೆಚ್ಚಿನ ಚೌಕಾಸಿ ಇರಕೂಡದು. ಮಾನವೀಯತೆಯನ್ನು ಗಣನೆಯಲ್ಲಿಟ್ಟು ನಿಯಮವನ್ನು ಪಾಲಿಸತಕ್ಕದ್ದು.

೪. ತರುಣ ಅಪರಾಧಿಗಳ ವಿಚಾರದಲ್ಲಿ ವಯಸ್ಸಿಗನುಗುಣವಾಗಿ ಶಿಕ್ಷೆ ನೀಡಬೇಕಾದುದರಿಂದ ಸೆರೆವಾಸವಲ್ಲದ ಬೇರೆ ಶಿಕ್ಷೆಯ ಬಗ್ಗೆ ಚಿಂತನೆ ನಡೆಸಬೇಕಾಗಿದೆ.

೫. ಶಿಕ್ಷೆಯನ್ನು ವಿಧಿಸುವುದಷ್ಟೇ ನಮ್ಮ ಕಾನೂನು ಹೇಳುತ್ತದೆ - ನಂತರದ ಪರಿಣಾಮದ ಬಗ್ಗೆ ಅದು ಯೋಚಿಸುವುದಿಲ್ಲ. ಜೀವಾವಧಿ ಶಿಕ್ಷೆಯನ್ನು ಕನಿಷ್ಠ ೧೪ ವರ್ಷಕ್ಕೆ ವಿಧಿಸಿರುವುದು ದುರದೃಷ್ಟಕರ. ಕೈದಿಯ ಬದುಕಲ್ಲಿ ಆ ಅವಧಿ ಅತೀ ಮಹತ್ತರವಾದ ಮುಖ್ಯ ಕಾಲ. ಆ ಶಿಕ್ಷೆಯಿಂದ, ದುರಾದೃಷ್ಟ ಕೈದಿಯು ಭವಿಷ್ಯದ ಬಾಗಿಲೇ ಮುಚ್ಚಿದಂತಾಗುವುದಲ್ಲದೆ ಮರುನೆಲೆಗೆ ಆತನಿಗೆ ಅವಕಾಶವಿಲ್ಲದಂತಾಗುತ್ತದೆ. ಸಮಾಜದ ಸ್ನೇಹ - ಸಲುಗೆ, ಕುಟುಂಬದ ಸಲುಗೆ - ವಿಶ್ವಾಸವನ್ನು ಆತ ಈ ಅವಧಿಯಲ್ಲಿ ಸಂಪೂರ್ಣ ಕಳೆದುಕೊಳ್ಳಬಹುದು. ಹದಿನಾಲ್ಕು ವರ್ಷ ಆತನ ಬದುಕಿನ ಬಹಳ ಸುದೀರ್ಘವಾದ ಅಮೂಲ್ಯ ಅವಧಿಯಾಗಿರುವುದರಿಂದ ಆತ ನಿಶ್ಚಿಂತೆಯಿಂದ ಬಂದಿಖಾನೆಯಲ್ಲಿ ಕಾಲ ಕಳೆಯದೆ ಭವಿಷ್ಯದ ಚಿಂತೆಯಿಂದಲೇ ಮಾನಸಿಕ ರೋಗಿಯಾಗುತ್ತಾನೆ. ಶಾಸಕಾಂಗವೂ ಈ ನಿಟ್ಟಿನಲ್ಲಿ ಗಮನ ಹರಿಸಿ ನ್ಯಾಯಾಂಗದ ಸಹಕಾರದೊಂದಿಗೆ ಶಿಕ್ಷೆಯ ಅವಧಿಯನ್ನು ಕಡಿಮೆಗೊಳಿಸುವುದು ಮಾನವೀಯವಾದುದು.

೬. ಒಬ್ಬ ಕೈದಿಯು ಸೃಷ್ಟಿಯಾಗುವುದು ಸಾಮಾಜಿಕ ಪರಿಸ್ಥಿತಿಗಳಿಂದ. ಆದ್ದರಿಂದ ಆತನನ್ನು ಶಿಕ್ಷಿಸುವ ಬದಲು ಆತನ ಮನೋಭಾವಕ್ಕೆ ಚಿಕಿತ್ಸೆ ನೀಡುವುದು ಅವಶ್ಯಕ. ಕಾಯಿಲೆಗೆ ಚಿಕಿತ್ಸೆ ನೀಡುವ ಮಾದರಿಯಲ್ಲೇ ಕೈದಿಯ ಮನಪರಿವರ್ತನೆಗಾಗಿ ಚಿಕಿತ್ಸೆ ನೀಡತಕ್ಕದ್ದು. ಇದೇ ಚಿಕಿತ್ಸೆಯನ್ನು ಆತನನ್ನು ಸೃಷ್ಟಿಸಿದ ಸಮಾಜಕ್ಕೂ ಚಿಕಿತ್ಸೆ ನೀಡುವ ಅವಶ್ಯಕತೆ ಇದೆ. ತನ್ನ ಸಮಾಜದ ಪರಿಸ್ಥಿತಿ - ಸಮಸ್ಯೆಗಳಿಂದ ಅಪರಾಧ ಪಟ್ಟಕ್ಕೇರಿದ ಅಪರಾಧಿಯನ್ನು ಪರಿವರ್ತಿಸಿ ಮರಳಿ ಸಮಾಜದ ಮುಖ್ಯವಾಹಿನಿಗೆ ಕಳುಹಿಸುವಾಗ ಆ ಸಮಾಜವೂ ಸಾಮಾಜಿಕ ಸಮಸ್ಯೆಗಳಿರದೆ ನಿರ್ಮಲವಾಗಿರತಕ್ಕದ್ದು.

೭. ಬಂದಿಖಾನೆಗಳು ಕೈದಿಯನ್ನು ತಿಳುವಳಿಕೆಯುರುವ ಮಾನವನನ್ನಾಗಿಸುವ 'ಸುಧಾರಣಾ' ತಾಣಗಳಾಗಬೇಕು ವಿನಾ ಸಮಾಜಘಾತುಕರಿಗೆ ರಜಾದಿನಗಳನ್ನು ಕಳೆಯುವ ಮನೆಗಳಂತೆ ಮಾರ್ಪಾಡಾಗಕೂಡದು. ಕೈದಿಗಳಿಗೆ ಕಷ್ಟಪಟ್ಟು ದುಡಿಯುವ ಅವಕಾಶವನ್ನು ಒದಗಿಸಿಕೊಟ್ಟು ವೃತ್ತಿ ಮತ್ತು ದುಡಿಮೆಯ ಶ್ರಮದ ಬೆಲೆಯನ್ನು ತಿಳಿಸಬೇಕೇ ವಿನಾ ಗುಲಾಮರಿಗೆ ಕೊಡುವ ಉದ್ದೇಶರಹಿತ ದುಡಿಮೆಗೆ ಹಚ್ಚಬಾರದು. ಭವಿಷ್ಯದಲ್ಲಿ ಅವರ ವೃತ್ತಿ ಬದುಕಿಗೆ ಸಹಕಾರಿಯಾಗುವಂತಾ ಉದ್ಯಮಗಳಲ್ಲಿ ಅವರನ್ನು ತೊಡಗಿಸುವುದು ಅವಶ್ಯ.

೮. ಕೈದಿಗಳ ಊಟ - ತಿಂಡಿಯ ವಿಚಾರದಲ್ಲೂ ಮಾನವೀಯತೆ ತೋರುವ ಅವಶ್ಯಕತೆ ಇದೆ. ಒಂದೇ ರುಚಿಯ, ಒಂದೇ ಬಗೆಯ ಊಟ ಯಾವ ಕೈದಿಯನ್ನೂ ಸುಖಿಯನ್ನಾಗಿರಿಸದು. ಊಟದಲ್ಲಿ - ರುಚಿಯಿಲ್ಲಿ ಭಿನ್ನತೆ ಇಲ್ಲದಿದ್ದಲ್ಲಿ ಅದೂ ಒಂದು ಶಿಕ್ಷೆಯಾಗಿ ಮಾರ್ಪಡಬಹುದು. ನಿಯಮದಲ್ಲಿರುವಂತಹ ಪೋಷಕಾಂಶಯುಕ್ತ ಶುದ್ಧ ಎಣ್ಣೆಕಾಳು - ಬೇಳೆ ತರಕಾರಿಗಳನ್ನು ಬಳಸಿ ನೈರ್ಮಲ್ಯದ ಊಟವನ್ನು ಕೈದಿಗಳಿಗೆ ನೀಡತಕ್ಕದ್ದು. ಅರೆ ಬೆಂದ ಊಟ - ತಿಂಡಿ, ಹುಳು ಹಿಡಿದ ಕಾಳು - ಬೇಳೆ, ಕೆಟ್ಟ ತರಕಾರಿ, ನೀರಿನಂತಿರುವ ಚಾ-ನೀರು ಇವು ಸಾಮಾನ್ಯವಾಗಿ ಕೈದಿಗಳಿಗೆ ನೀಡಲಾಗುತ್ತಿದೆ ಎಂಬ ಆರೋಪವಿರುವದರಿಂದ ಬಂದಿಖಾನೆ ಇಲಾಖೆ ಈ ಬಗ್ಗೆ ವಿಶೇಷವಾಗಿ ಗಮನಹರಿಸತಕ್ಕದ್ದು. ಕೈದಿಗಳು ಶಿಕ್ಷೆ ಜತೆ ಈ ಉಣ್ಣುವ ಶಿಕ್ಷೆಯನ್ನು ಅನುಭವಿಸಿದರೆ, ಅವರ ಕೆಟ್ಟಿರುವ ಮನಸ್ಸು ಮತ್ತಷ್ಟು ಕೆಡಬಹುದು.

೯. ಸ್ನಾನ-ಶೌಚ-ಬಟ್ಟೆ ಬರೆಗಳ ವಿಚಾರದಲ್ಲೂ ಕೈದಿಗಳನ್ನು ಹೀನಾಯವಾಗಿ ಕಾಣಲಾಗುತ್ತದೆ. ಅವರನ್ನು ಕನಿಷ್ಠ ಮನುಷ್ಯರಂತೆ ಪರಿಗಣಿಸಿ ಈ ವಿಚಾರದಲ್ಲಿ ಸೂಕ್ತ ಕ್ರಮ ವಹಿಸಿ ಸುಧಾರಣೆ ಮಾಡತಕ್ಕದ್ದು. ಮೂಲಭೂತ ಸೌಲಭ್ಯಗಳನ್ನು ಕೈದಿಗಳಿಗೆ ಒದಗಿಸದೆ ಅವರ ಮನೋವಿಕಾಸವನ್ನು ಮಾಡಹೊರಟೆವೆಂದರೆ ಅದು ಅರ್ಥಹೀನವಾದುದು.

೧೦. ನಿಗದಿತ ಕಾಲದಲ್ಲಿ ಕೈದಿಗಳ ಆರೋಗ್ಯ ತಪಾಸಣೆ ಮಾಡಿಸತಕ್ಕದ್ದು. ಬಂದಿಖಾನೆ ಆಸ್ಪತ್ರೆಯೊಳಗಿರುವ ವೈದ್ಯರು ಈ ನಿಟ್ಟಿನಲ್ಲಿ ಮುತುರ್ವರ್ಜಿ ವಹಿಸುವುದು ಅವಶ್ಯ. ಅಪರಾಧ ಮನೋಭಾವವುಳ್ಳ ಅಥವ ಇರದ ಕೈದಿಗೂ ಮನಶಾಸ್ತ್ರಜ್ಞರಿಂದ ಕನಿಷ್ಠ ಮಾತಿನ ಚಿಕಿತ್ಸೆ ಕೊಡಿಸತಕ್ಕದ್ದು. ಈ ಮಾನಸಿಕ ಚಿಕಿತ್ಸೆಗಾಗಿ ಬಂದಿಖಾನೆಯೊಳಗೆ ಒಬ್ಬ ಮನಶಾಸ್ತ್ರಜ್ಞ ವೈದ್ಯ ಇರತಕ್ಕದ್ದು.

೧೧. ಕೈದಿಗಳಿಗೆ ಸಾಂಪ್ರದಾಯಿಕ ಶಿಕ್ಷಣ, ಧಾರ್ಮಿಕ - ನೈತಿಕ ಶಿಕ್ಷಣ, ವೃತ್ತಿ ಶಿಕ್ಷಣವನ್ನು ಕಡ್ಡಾಯವಾಗಿ ನೀಡತಕ್ಕದ್ದು. ವೃತ್ತಿ ಶಿಕ್ಷಣದ ಜತೆ ವೃತ್ತಿ ತರಬೇತಿ - ಉದ್ಯಮ ಎರಡೂ ಇರತಕ್ಕದ್ದು.

೧೨. ಇದಕ್ಕೆ (ಶಿಕ್ಷಣ) ಸಂಬಂಧಿಸಿದಂತೆ, ಕೈದಿಗಳನ್ನು ಪುಸ್ತಕ ಓದುವುದರತ್ತ ಪ್ರೇರೇಪಿಸುವುದರ ಜತೆಗೆ ಬಂದಿಖಾನೆಯೊಳಗೆ ಉತ್ತಮ ಪುಸ್ತಕಗಳಿರುವ ಗ್ರಂಥಾಲಯವನ್ನು ಸ್ಥಾಪಿಸತಕ್ಕದ್ದು. ಶೈಕ್ಷಣಿಕ ಪುಸ್ತಕಗಳ ಜತೆ ಮನರಂಜನಾ ಪುಸ್ತಕಗಳೂ ಇರತಕ್ಕದ್ದು.

೧೩. ಸಹಕೈದಿಗಳ ಜತೆ ಕ್ರೀಡೆ, ಸಾಂಸ್ಕೃತಿಕ ಕಾರ್ಯಕ್ರಮ, ಮನೋರಂಜನಾ ಕಾರ್ಯಕ್ರಮಗಳಲ್ಲಿ ತೊಡುಗುವಂತೆ ಪ್ರೋತ್ಸಾಹಿಸತಕ್ಕದ್ದು.

೧೪. ಓದು ಬರಹಕ್ಕೆ ಪ್ರಾಶಸ್ತ್ಯ ನೀಡುವುದರ ಜತೆಗೆ ಪುಸ್ತಕ - ಬರವಣಿಗೆ ಸಾಮಾಗ್ರಿಗಳನ್ನು ಹೊಂದಲು ಅವರಿಗೆ ಅವಕಾಶ ನೀಡಬೇಕು. ಆಯ್ಕೆ ಮಾಡಿದ ದಿನಪತ್ರಿಕೆಗಳನ್ನು ಕೈದಿಗೆ ಒದಗಿಸಿದ್ದಲ್ಲಿ ಪ್ರಪಂಚದ ಸಂಪರ್ಕ ಹೊಂದಲು ಆತನಿಗೆ ಸಾಧ್ಯವಾಗುತ್ತದೆ. ಬಾನುಲಿ ವ್ಯವಸ್ಥೆಯೂ ಇದಕ್ಕೆ ಪೂರಕವಾಗಿರತಕ್ಕದ್ದು (ಈ ಸಮಿತಿ ವರದಿ ಸಲ್ಲಿಸುವ ಕಾಲಕ್ಕೆ ದೂರದರ್ಶನದ ಬಳಕೆ ವ್ಯಾಪಕವಾಗಿರಲಿಲ್ಲ).

೧೫. ಕನಿಷ್ಠ ವಾರಕ್ಕೊಮ್ಮೆಯಾದರೂ ಕೈದಿಗೆ ಹೊರಗಿನವರ ಜತೆ ಮಾತುಕತೆಗೆ - ಸಂದರ್ಶನಕ್ಕೆ ಅವಕಾಶವಿರಬೇಕು. ಪತ್ರ ವ್ಯವಹಾರಕ್ಕೂ ಹೆಚ್ಚಿನ ಅಡೆ - ತಡೆ ಇರಕೂಡದು. ಇದು ಕೌಟುಂಬಿಕ - ಸ್ನೇಹ ಸಂಬಂಧಗಳನ್ನು ಬೆಸೆಯುತ್ತದೆ.

೧೬. ಕೈದಿ ಬಿಡುಗಡೆಯಾದ ನಂತರ ಆತನನ್ನು ಮರಳಿ ಅಪರಾಧಿಯನ್ನಾಗಿ ಮಾಡದಂತೆ ಸಮಾಜದ ಹೊಣೆಗಾರಿಕೆ ಏನೆಂಬುದನ್ನು ಸಮಾಜಕ್ಕೆ ಮನದಟ್ಟು ಮಾಡಬೇಕು. ಅದು ಅಪರಾಧಕ್ಕೆ ಕಾರಣವಾಗುವ ಸಾಮಾಜಿಕ - ಆರ್ಥಿಕ ಸಮಸ್ಯೆಗಳನ್ನು ಸರಿಪಡಿಸುವ ಮೂಲಕ ಅಥವ ಅಪರಾಧಿ ಮನೋಭಾವವುಳ್ಳವನನ್ನು ಆರೋಗ್ಯಕರ ಚಿಂತನೆಯಿಂದ ಉತ್ತಮ ಪ್ರಜೆಯನ್ನಾಗಿ ಮಾಡಲು ಸೂಕ್ತ ಚಿಕಿತ್ಸೆ ಅಥವ ಪರಿವರ್ತನಾ ಕಾರ್ಯಕ್ರಮಗಳಲ್ಲಿ ಆತನನ್ನು ತೊಡಗಿಸುವುದು ಅವಶ್ಯ. ಈ ಕಾರ್ಯಕ್ಕೆ ಅದು ಸಾರ್ವಜನಿಕ ಸಂಘ - ಸಂಸ್ಥೆಗಳ ಬೆಂಬಲ ಪಡೆಯಬಹುದು. ಅಪರಾಧ ಮನೋಭಾವದ ವ್ಯಕ್ತಿಗಳನ್ನು ಪರಿವರ್ತಿಸಲು ಸಮುದಾಯದಿಂದ ಸ್ವಯಂ ಸೇವಕರನ್ನು ಪಡೆಯಬಹುದು.

೧೭. ಅಪರಾಧ ತಡೆಗಟ್ಟುವಿಕೆಯಲ್ಲಿ ಹಾಗೂ ಅಪರಾಧಿಗಳ ಪರಿವರ್ತನೆಗಾಗಿ ಸಮಾಜ ಅಥವ ಸಮುದಾಯದ ಭಾಗವಹಿಸುವಿಕೆಯನ್ನು ನಮ್ಮ ಬಂದಿಖಾನೆಯ ರಾಷ್ಟ್ರೀಯ ನೀತಿಯ (National Policy) ಭಾಗವನ್ನಾಗಿ ಮಾಡಲೇಬೇಕು.

೧೮. ಅಪರಾಧ ತಡೆಗಟ್ಟುವಿಕೆ ಹಾಗೂ ಅಪರಾಧಿಗಳ ಮನಪರಿವರ್ತನೆಗೆ ಅವಶ್ಯವಿರುವ ಆಳವಾದ ಜ್ಞಾನವನ್ನು ನಾಗರಿಕರಿಗೆ - ಸ್ವಯಂಸೇವಕರಿಗೆ ನೀಡುವ ವ್ಯವಸ್ಥೆಯಾಗಬೇಕು. ಬಂದಿಖಾನೆ ಇಲಾಖೆಯ ಮುಖ್ಯ ಕೇಂದ್ರದಲ್ಲಿ ಸಾರ್ವಜನಿಕ ಸಂಪರ್ಕ ಕೇಂದ್ರ ಹಾಗೂ ಕೈದಿ ತಿದ್ದುಪಡಿ ಕೇಂದ್ರವು ಇರತಕ್ಕದ್ದು - ಇದನ್ನು ಮಾಹಿತಿ ಮತ್ತು ಪ್ರಸಾರ ಇಲಾಖೆಯ ಜತೆಗೂಡಿ ನಡೆಸಬೇಕು.

೧೯. ಸ್ವಯಂ ಸೇವಾ ಸಂಸ್ಥೆಗಳಿಗೆ, ಅಪರಾಧಿಗಳಿಗ ಸೂಕ್ತ ಚಿಂತನೆ (ಮನಸ್ಸಿನ ಭಾವನೆಗಳಿಗೆ) ನೀಡುವಲ್ಲಿ ಹಾಗೂ ಶಿಕ್ಷಾ ನಂತರದ ಸೇವಾಕ್ರಮಗಳು ಹಾಗೂ ಮನಪರಿವರ್ತನಾ ವಿಷಯಗಳಲ್ಲಿ ಕಾರ್ಯನಿರ್ವಹಿಸಲು ವಿಫುಲ ಅವಕಾಶಗಳಿರುತ್ತವೆ. ಶಿಕ್ಷಣ, ವೈದ್ಯಕೀಯ,

ಕಾನೂನು, ಮನಶಾಸ್ತ್ರ, ಸಮಾಜಸೇವೆ, ಉದ್ಯಮ ಕ್ಷೇತ್ರಗಳಲ್ಲಿ ಕೈದಿಗಳಿಗೆ ಸ್ವಯಂ ಸೇವಾ ಸಂಘಗಳು ಸಹಕರಿಸಬಹುದು.

೨೦. ಹಾಲಿ ಇರುವ ಸಂಘ - ಸೇವಾ ಸಂಸ್ಥೆಗಳನ್ನು ಬಂದಿಖಾನೆಗಳಲ್ಲಿ ಈ ಕೆಳಗಿನ ಚಟುವಟಿಕೆಗಳಿಗೆ ಬಳಸಿಕೊಳ್ಳಬಹುದು.

೧. ವಯಸ್ಕರ ಶಿಕ್ಷಣ ಕಾರ್ಯಕ್ರಮಗಳು

೨. ಉಚಿತ ಕಾನೂನು ಸೇವೆ

೩. ದಂತ - ನೇತ್ರ - ಚರ್ಮ ಹಾಗೂ ಲೈಂಗಿಕ ರೋಗಗಳು ಮತ್ತು ಸಾಮಾನ್ಯ ರೋಗ ಪರೀಕ್ಷೆಗಳಿಗಾಗಿ ಬಂದಿಖಾನೆಯೊಳಗೆ ಆರೋಗ್ಯ ಶಿಬಿರ ನಡೆಸುವುದು

೪. ಮನರಂಜನಾ ಹಾಗೂ ಸಾಂಸ್ಕೃತಿಕ ಚಟುವಟಿಕೆ, ಕರಕುಶಲ ಕಲೆ ಶಿಬಿರ ನಡೆಸುವುದು

೫. ಹೆಚ್ಚಿನ ಶೈಕ್ಷಣಿಕ - ವೃತ್ತಿ ವ್ಯಾಸಂಗ ಬಯಸುವ ಕೈದಿಗಳಿಗೆ ವೈಯಕ್ತಿಕ ತರಬೇತಿ ನೀಡುವುದು.

೬. ಈ ಕೈದಿಗಳ ಮನಪರಿವರ್ತನೆಗೆ ಆಸಕ್ತರಾಗಿರುವ ಸಮುದಾಯದ ಗುಂಪುಗಳನ್ನು 'ಸೆರೆಮನೆವಾಸಿಗಳ ಗೆಳೆಯರು' ಎಂದು ಸಂಘಟಿಸಿ, ಅವರಿಂದ ಹಬ್ಬ - ರಾಷ್ಟ್ರೀಯ ದಿನಗಳಂದು ಕಾರ್ಯಕ್ರಮ ಆಚರಣೆಗೆ ವ್ಯವಸ್ಥೆ ಮಾಡಿಸುವುದು. ಕೈದಿಗಳು ಹಾಗೂ ಅವರಿಂದ ಹತರಾದ ಕುಟುಂಬಗಳ ನಡುವೆ ಅಥವ ಕುಟುಂಬ ಸದಸ್ಯರ ನಡುವೆ ಸಹಬಾಳ್ವೆ, ಸಾಮರಸ್ಯ ಏರ್ಪಡುವಂತೆ ಮಾತುಕತೆ ನಡೆಸುವುದು. ಕೈದಿಗಳ ನಿರ್ಗತಿಕ, ನಿರ್ವಸಿತ ಅವಲಂಬಿತ ಮಕ್ಕಳಿಗಾಗಿ ಅನಾಥಾಲಯದ ಅಥವ ಶಿಕ್ಷಣ ಸೌಕರ್ಯ ಒದಗಿಸುವ ವ್ಯವಸ್ಥೆ ಮಾಡಿಸುವುದು. ಕೈದಿಗಳ ಬಿಡುವಿನ ಕಾಲದಲ್ಲಿ ಜ್ಞಾನ ಸಂವಹನೆಗಾಗಿ ಪುಸ್ತಕ, ನಿಯತಕಾಲಿಕೆ ಇತರ ಜ್ಞಾನಸಂವಹನ ಮಾಧ್ಯಮಗಳನ್ನು ಒದಗಿಸುವಂತೆ ಮಾಡುವುದು. ಕೈದಿಗಳ ಮಾನಸಿಕ ಒತ್ತಡ ಕಡಿಮೆ ಮಾಡಲು, ಹಾಗೂ ಅವರ ನೋವು, ಭಾವನೆ ವ್ಯಕ್ತಪಡಿಸುವ ಸಲುವಾಗಿ ಅವರೊಂದಿಗೆ ಭಾವನಾತ್ಮಕವಾದ ಸ್ನೇಹದಿಂದ ಕಾಲ ಕಳೆಯುವುದು. ಕೈದಿಗಳಿಗೆ ನೈತಿಕ, ಧಾರ್ಮಿಕ, ಮನರಂಜನಾ ಕಾರ್ಯಕ್ರಮಕ್ಕಾಗಿ ನೈತಿಕ - ಧಾರ್ಮಿಕ ಭಾಷಣ ಏರ್ಪಡಿಸುವುದು, ಶ್ರವ್ಯ - ದೃಶ್ಯ ಮಾಧ್ಯಮಗಳನ್ನು ಬಳಕೆ ಮಾಡಿಸುವುದು.

೨೧. ಸಮಾಜದಲ್ಲಿರುವ ಖ್ಯಾತ ಉದ್ಯಮಿಗಳನ್ನು ಬಂದಿಖಾನೆಯೊಳಗಿನ ಉದ್ಯಮಗಳನ್ನು ವೀಕ್ಷಿಸಲು ಆಹ್ವಾನಿಸುವುದು. ಇದರಿಂದ ಸಮಾಜದ ಉದ್ಯಮಿಗಳಿಗೆ ಬಂದಿಖಾನೆಯೊಳಗಿನ

ಕೈದಿ - ದುಡಿಮೆಗಾರರ ಮೇಲೆ ವಿಶ್ವಾಸ ಹೆಚ್ಚುವುದಲ್ಲದೆ ಕೈದಿಗಳ ಮೇಲೆ ತಪ್ಪು ಅಭಿಪ್ರಾಯ ಗಣನೀಯವಾಗಿ ಕಡಿಮೆಯಾಗುವುದು. ಬಿಡುಗಡೆಯ ನಂತರ ವೃತ್ತಿ ಕಲಿತ ಕೈದಿಗಳಿಗೆ ತಮ್ಮ ಸಂಸ್ಥೆಗಳಲ್ಲಿ ನೌಕರಿ ನೀಡುವ ಅವಕಾಶಗಳು ಹೆಚ್ಚುತ್ತವೆ.

೨೨. ಮನ ಸುಧಾರಣಾ ಚಿಕಿತ್ಸೆಗೆ ಸ್ಪಂದಿಸುವ ಸಾಮರ್ಥ್ಯಕ್ಕನುಗುಣವಾಗಿ ಕೈದಿಗಳನ್ನು ಬಂದಿಖಾನೆಯಿಂದ ಹೊರಗಡೆಗೆ ಅಂದರೆ ಕ್ರೀಡಾಕೂಟಗಳಲ್ಲಿ, ಸಾರ್ವಜನಿಕ ವಿಚಾರ ಸಂಕಿರಣಗಳಲ್ಲಿ, ಶೈಕ್ಷಣಿಕ ಕಾರ್ಯಕ್ರಮಗಳಲ್ಲಿ - ಆಕಾಶವಾಣಿ ದೂರದರ್ಶನ ಕಾರ್ಯಕ್ರಮಗಳಲ್ಲಿ ಭಾಗವಹಿಸಲು ಅವಕಾಶ ಕಲ್ಪಿಸಿ ಕೊಡಬೇಕು. ಸಾಕಷ್ಟು ಒಳ್ಳೆಯ ನಡತೆ ಇರುವ ಕೈದಿಗಳಿಗೆ ಈ ಅವಕಾಶ ಮಾಡಿಕೊಟ್ಟಲ್ಲಿ ಬೇರೆ ಕೈದಿಗಳಲ್ಲಿಯೂ ಸನ್ನಡತೆ ತೋರುವ ಸಾಧ್ಯತೆಯಿದೆ.

೨೩. ಕೈದಿಯ ಬಿಡುಗಡೆಯ ನಂತರದ ಯೋಗ್ಯಕ್ಷೇಮ, ಪರಿವರ್ತನೆಯ ಬಗ್ಗೆ ಸಮುದಾಯ, ಬಂದಿಖಾನೆ ಆಡಳಿತ ಹಾಗೂ ಸ್ವಯಂ ಸೇವಕ ಸಂಘಗಳು ಯೋಚಿಸಬೇಕಾಗಿದೆ. ಕೈದಿಯಾಗಿದ್ದವನ ಜೀವನದಲ್ಲಿ ಬರುವ ಕ್ಲಿಷ್ಟ ಪರಿಸ್ಥಿತಿಯೆಂದರೆ ಆತ ಬಿಡುಗಡೆ ಹೊಂದಿದ ನಂತರದ ಪರಿಸ್ಥಿತಿ. ಆತ ಎಷ್ಟು ಹೆಚ್ಚು ಕಾಲ ಸೆರೆಯಲ್ಲಿರುತ್ತಾನೋ ಅಷ್ಟು ಹೆಚ್ಚು ಕಷ್ಟವನ್ನು ಆತ ಸಮಾಜದಲ್ಲಿ ಎದುರಿಸಬೇಕಾಗುತ್ತದೆ. ದೀರ್ಘಕಾಲದ ಸೆರೆಯಿಂದಾಗಿ ಸಮಾಜದಲ್ಲಿ, ಕುಟುಂಬದಲ್ಲಿ ಒಂಟಿತನ ಕಾಡ ತೊಡಗಿ ಎಲ್ಲರೊಂದಿಗೆ ಬೆರೆಯಲು ಆತ ಕಷ್ಟ ಪಡಬೇಕಾಗುತ್ತದೆ. ಕುಟುಂಬದವರು ಸರಿಯಾಗಿ ಬೆರೆಯದೆ ಹಾಗೂ ಸ್ನೇಹಿತರು ಆತನಿಂದ ದೂರವಾಗಿ ಆತ ಏಕಾಕಿತನವನ್ನು ಅನುಭವಿಸಬೇಕಾಗುತ್ತದೆ. 'ಅಪರಾಧ' ಎಂಬ ಆಕಸ್ಮಿಕದಿಂದ ಆತ ಅಂಗವಿಕಲನಂತಾಗಿ ಬದುಕಿನ ಎಲ್ಲ ಮೂಲೆಗಳಿಂದಲೂ ಆತ ಒಬ್ಬ 'ಮಾಜಿ ಕೈದಿ' ಎಂಬ ಕಪ್ಪುಚುಕ್ಕೆ ಆತನನ್ನು ಶಾಶ್ವತವಾಗಿ ಎಲ್ಲರಿಂದಲೂ ದೂರವಿರಿಸ ಬಹುದು. ಆತನಿಗೆ ಉದ್ಯೋಗ ದೊರಕದೆ ಇರಬಹುದು. ತನ್ನ ಅಪರಾಧ ಹಾಗೂ ಅದರ ಪರಿಣಾಮಗಳಿಂದ ಪೂರ್ಣ ಸುಧಾರಣೆಯಾಗಿ ಆತ ಪ್ರಾಮಾಣಿಕ ಹಾಗೂ ಶ್ರಮದ ಜೀವನ ನಡೆಸಬಲ್ಲನೆಂದರೂ ಯಾರೂ ನಂಬದಿರಬಹುದು. ಇಂತಹ ಸಂದರ್ಭದಲ್ಲಿ ಆತ ಮತ್ತೆ ವಿವೇಕ - ಸಹನೆ ಕಳೆದುಕೊಂಡು, ಭವಿಷ್ಯದ ಬಗ್ಗೆ ಒತ್ತಡಗಳನ್ನು ಹೇರಿಕೊಂಡು, ಚಿಂತಾಕ್ರಾಂತನಾಗಿ, ಜೀವನ ದುರ್ಭರವೆನಿಸಿ ಮತ್ತೆ ಅಪರಾಧ ಎಸಗುವ ಸಾಧ್ಯತೆ ಇಲ್ಲದಿಲ್ಲ. ಇಂತಹ ಪರಿಸ್ಥಿತಿಯನ್ನು ಎದುರಿಸುವ ಸಾಮರ್ಥ್ಯ, ಶಕ್ತಿ, ವಿವೇಚನೆಯನ್ನು ಕೈದಿಗೆ ಬಂದಿಖಾನೆಯ ಒಳಗೇ ತುಂಬಬೇಕಾಗುತ್ತದೆ. ಜ್ಞಾನ ಸಂವಹನ ಮಾಧ್ಯಮಗಳು ಈ ಶಕ್ತಿಯನ್ನು ಕೈದಿಯಲ್ಲಿ ತುಂಬಬಲ್ಲವು. ಈ ಬಗ್ಗೆ ಬಂದಿಖಾನೆ ಆಡಳಿತ ಪೂರ್ವ ಎಚ್ಚರಿಕೆ ತೆಗೆದುಕೊಳ್ಳಬೇಕಾದ ಅಗತ್ಯವಿದೆ.

ಬಿಡುಗಡೆಯ ನಂತರದ 'ಕೈದಿ ಸುಧಾರಣಾ ಕ್ರಮ', ಭಾರತೀಯ ಸಾಮಾಜಿಕ ವ್ಯವಸ್ಥೆಯಲ್ಲಿ ಎಲ್ಲಾ ಕೈದಿಗಳಿಗೂ ಬೇಕಾಗುವುದಿಲ್ಲ. ಅದು ಕೈದಿಯಿಂದ ಕೈದಿಗೆ ಬೇರೆಯೇ ಆಗಿರುತ್ತದೆ. ಗ್ರಾಮೀಣ ಪರಿಸರದಿಂದ ಬಂದ ಕೈದಿಗಳು ಶಿಕ್ಷಾ ನಂತರ ಅವರ ಪರಿಸರದಲ್ಲಿ ಹೆಚ್ಚಿನ ವಿರೋಧವಿಲ್ಲದೆ ಸ್ವೀಕಾರಾರ್ಹರಾಗುತ್ತಾರೆ. ಆದರೆ ಅವರ ಭೂ ಕಬಳಿಕೆಯೇನಾದರೂ ನಡೆದಿದ್ದರೆ ಮತ್ತೆ ವ್ಯಗ್ರರಾಗಬಹುದು. ಒತ್ತಡದಿಂದ ಅಪರಾಧಕ್ಕೆ ಮನಸ್ಸೆಳೆಯಬಹುದು. ಈ ಸನ್ನಿವೇಶ ಹುಟ್ಟಿಕೊಳ್ಳದಂತೆ ಸ್ವಯಂ ಸೇವಾ ಸಂಸ್ಥೆಗಳು ಅಥವ ಬಂದಿಖಾನೆ ಇಲಾಖೆಯ ಮುಖ್ಯ ಕೇಂದ್ರ ಕಚೇರಿಗಳಲ್ಲಿನ ಸಾರ್ವಜನಿಕ ಸಂಪರ್ಕ ಕೇಂದ್ರ ಅಥವ ತಿದ್ದುಪಡಿ ಕೇಂದ್ರವು ಈ ಬಗ್ಗೆ ಮುಂಜಾಗ್ರತಾ ಕ್ರಮಗಳನ್ನು ತೆಗೆದುಕೊಳ್ಳತಕ್ಕದ್ದು.

೨೫. ಬಿಡುಗಡೆಯ ನಂತರ ಕೈದಿಗಳಿಗೆ ಆರ್ಥಿಕ ಅನುಕೂಲ ಮಾಡಿಕೊಡಲು ಶಿಕ್ಷಾ ಅವಧಿಯಲ್ಲಿ ದುಡಿದ ಹಣವನ್ನು ನೀಡುವುದು, ಬಂದಿಖಾನೆಯಲ್ಲಿ ಪಡೆದ ಶಿಕ್ಷಣದ ಬಗ್ಗೆ ಪ್ರಮಾಣಪತ್ರ ಹಾಗು ಗುಣ ನಡತೆಯ ಬಗ್ಗೆ ಪ್ರಮಾಣಪತ್ರ ನೀಡುವುದು ಅವಶ್ಯ. ಅವಶ್ಯಕತೆಯಿದ್ದಲ್ಲಿ ಸ್ವಉದ್ಯೋಗ ಕಲ್ಪಿಸಿ ಕೊಡಲು ಬ್ಯಾಂಕುಗಳಲ್ಲಿ ಕಡಿಮೆ ಬಡ್ಡಿದರದ ಸಾಲವನ್ನು ಒದಗಿಸಿಕೊಡುವುದು ಹಾಗೂ ಸ್ವಯಂ ಸೇವಾ ಸಂಘಗಳಿಂದ ಆರ್ಥಿಕ ಸಹಾಯ ದೊರಕಿಸಿ ಕೊಡುವುದರಿಂದ ಕೈದಿಯ ಭವಿಷ್ಯಕ್ಕೆ ಚೈತನ್ಯ ನೀಡಿದಂತಾಗುತ್ತದೆ.

೨೬. ಬಂದಿಖಾನೆಯೊಳಗಡೆ ಕೈದಿಗೆ ಆತನ ಮಾನಸಿಕ ಹಾಗೂ ಸಾಮಾಜಿಕ ಸಮಸ್ಯೆಗಳನ್ನು ಎದುರಿಸುವ ಹಾಗೂ ನಿವಾರಿಸುವ ಬಗ್ಗೆ ಸೂಕ್ತ ಮಾರ್ಗದರ್ಶನ ನೀಡಿ, ಕಾನೂನನ್ನು ಗೌರವಿಸುವ 'ಪ್ರಜೆ'ಯಾಗುವಂತೆ ಅಗತ್ಯ ಶಿಕ್ಷಣ ನೀಡಿದ್ದಲ್ಲಿ ಆತ ಸಮಾಜಕ್ಕೆಂದೂ ಹೊರೆಯಾಗಲಾರ; ಆತ ಉತ್ತಮ ಪ್ರಜೆಯಾಗುತ್ತಾನೆ. ಆದರೆ ಈ ಜವಾಬ್ದಾರಿ ಹೊರಲು ಬಂದಿಖಾನೆಯ ಆಡಳಿತದಲ್ಲಿ, ಕೈದಿ ತಿದ್ದುವ ಸೇವೆಯಲ್ಲಿ ತರಬೇತಿ ಪಡೆದು ಪರಿಣಿತರಾದ ಸುಶಿಕ್ಷಿತರಾದ, ಮಾನವತೆಯುಳ್ಳ ಸಿಬ್ಬಂದಿಗಳಿರಬೇಕು.[೬]

ಮುಲ್ಲಾ ಸಮಿತಿ ಹಲವಾರು ಶಿಫಾರಸುಗಳನ್ನು ತನ್ನ ವರದಿಯಲ್ಲಿ ಅಳವಡಿಸಿಕೊಂಡು ೨ ಸಂಪುಟಗಳ ಸುದೀರ್ಘ ವರದಿಯನ್ನು ೧೯೮೩ ರಲ್ಲಿ ಸರಕಾರಕ್ಕೆ ಸಲ್ಲಿಸಿತು. ಅತ್ಯಂತ ಪರಿಶ್ರಮ, ಅಧ್ಯಯನಗಳಿಂದ ಶೋಧಿಸಲ್ಪಟ್ಟ ಬಂದಿಖಾನೆಗಳೊಳಗಿನ ಸತ್ಯಗಳು ಆ ವರದಿಯಲ್ಲಿದ್ದುದರಿಂದ ಎಲ್ಲ ರಾಜ್ಯ ಸರಕಾರಗಳು ಮುಲ್ಲಾ ಸಮಿತಿ ವರದಿಯನ್ನು ಮುಂದಿಟ್ಟುಕೊಂಡು ತಮ್ಮ ಬಂದಿಖಾನೆ ಕೈಪಿಡಿಗಳನ್ನು ಪರಿಷ್ಕರಿಸಿಕೊಂಡವು. ಕೈದಿಗಳ ಮನಪರಿವರ್ತನಾ ಪ್ರಕ್ರಿಯೆ ಹಾಗೂ ಅವರ ಸುಧಾರಣಾ ಚಿಕಿತ್ಸೆಗಾಗಿ ಇಂದಿಗೂ ಮುಲ್ಲಾ ಸಮಿತಿ ವರದಿಯನ್ನೇ ಮಾದರಿಯನ್ನಾಗಿ ಇರಿಸಿಕೊಂಡಿರುವುದು ಆ ಸಮಿತಿಯ ಪರಿಶ್ರಮಕ್ಕೊಂದು ಸಂದ ಗೌರವ.

೧೯೮೦ - ೮೩ರ ಮುಲ್ಲಾ ಸಮಿತಿಯ ನಂತರ ಭಾರತದ ಸರಕಾರ ಮಹಿಳಾ ಕೈದಿಗಳ ಸ್ಥಿತಿ ಗತಿಗಳನ್ನು ಅಧ್ಯಯನಕ್ಕಾಗಿ ಜಸ್ಟಿಸ್ ಕೃಷ್ಣ ಅಯ್ಯರ್ ಅವರ ಅಧ್ಯಕ್ಷತೆಯಲ್ಲಿ ಸಮಿತಿಯೊಂದನ್ನು ೧೯೮೫ ರಲ್ಲಿ ನೇಮಕ

ಮಾಡಿತು. ಆದರೆ ಆ ವರದಿಯಲ್ಲಿನ ಯಾವ ಶಿಫಾರಸುಗಳೂ ಆಡಳಿತದಲ್ಲಿ ಜಾರಿಯಾಗದಿರುವುದರಿಂದ ಸರಕಾರ ಆ ವರದಿಯನ್ನು ಪರಿಶೀಲಿಸಿದೆಯೋ ಇಲ್ಲವೋ ಎನ್ನುವುದು ಅಸ್ಪಷ್ಟವಾಗಿದೆ.

ಭಾರತದಲ್ಲಿ ಕೈದಿಗಳ ಮನಪರಿವರ್ತನಾ ಪ್ರಕ್ರಿಯೆಗೆ ಚಾಲನೆ ನೀಡಿದಾತ ಲಾರ್ಡ್ ಮೆಕಾಲೆ. ಅದನ್ನು ಸ್ಪಷ್ಟ ದಾರಿಯಲ್ಲಿ ಕೊಂಡೊಯ್ದದ್ದು, ಅಖಿಲ ಭಾರತ ಬಂದಿಖಾನೆ ಕೈಪಿಡಿ ಸಮಿತಿ, ೧೯೫೭ - ೫೯, ಮಾದರಿ ಬಂದಿಖಾನೆ ಕೈಪಿಡಿಯನ್ನು ರಚಿಸುವ ಮೂಲಕ. ನಂತರದಲ್ಲಿ ನೇಮಕಗೊಂಡ ಮುಲ್ಲಾ ಸಮಿತಿ, ಸಮಾಜಶಾಸ್ತ್ರೀಯ ಮನಶಾಸ್ತ್ರೀಯ ಹಾಗೂ ಮಾನವೀಯ ನೆಲೆಯಲ್ಲಿ ಕೈದಿಗಳ ಮನಪರಿವರ್ತನಾ ಪ್ರಕ್ರಿಯೆ, ಮನಸುಧಾರಣಾ ಚಿಕಿತ್ಸೆಗಳ ಅಗತ್ಯವನ್ನು ವಿಶ್ಲೇಷಿಸಿ ಆ ಬಗ್ಗೆ ಹಲವು ಕ್ರಮಗಳನ್ನು ತನ್ನ ವರದಿಯಲ್ಲಿ ಸ್ಪಷ್ಟ ಪಡಿಸಿದ್ದು ಕೈದಿಗಳ ಕತ್ತಲ ಲೋಕದಲ್ಲಿ ಸುಧಾರಣೆಯ ಬೆಳಕನ್ನೇ ಹರಿಸಿದಂತಾಯ್ತು.

❑ ❑

## ಅಡಿಟಿಪ್ಪಣಿ

೧. Mulla, A.N., Chairman, 1983. Report of the All India Committee on Jail Reforms 1980-83 Vol. 1. New Delhi, Ministry of Home Affairs. Pp. 7.

೨. Ibid., Pp. 7.

೩. ಕರ್ನಾಟಕ ಸರಕಾರ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ೧೯೮೭. ಭಾರತದ ಗ್ಯಾಸೆಟಿಯರ್, ಸಂಪುಟ ೪ : ಆಡಳಿತ ಮತ್ತು ಸಮಾಜ ಕಲ್ಯಾಣ. ಬೆಂಗಳೂರು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ. ಪುಟ ೪೭೦.

೪. ಇದೇ., ಪುಟ ೪೭೨.

೫. Mulla, A.N., Chairman, 1983. Report of the All India Committee on Jail Reforms 1980-83 Vol. 1. New Delhi, Ministry of Home Affairs. Pp. 1.

೬. Ibid., Vol. 1-2. Pp. 18-262.

## ೭

# ಕರ್ನಾಟಕ ಬಂದಿಖಾನೆಗಳ ಕೈದಿಗಳು

## (ಆರ್ಥಿಕ - ಸಾಮಾಜಿಕ ಹಿನ್ನೆಲೆ)

ಬಂದಿಖಾನೆ ವ್ಯವಸ್ಥೆ ಎಂಬುದು ಸಮಾಜದ 'ಪ್ರತಿಕೃತಿ' ಇದ್ದಂತೆ. ಹೊರಗಿನ ಶ್ರೇಣೀಕೃತ ಸಮಾಜದಲ್ಲಿರುವಂತೆ ಇಲ್ಲೂ ಸಾಮಾಜಿಕ, ಆರ್ಥಿಕ, ಶೈಕ್ಷಣಿಕವಾದ ಅಸಮಾನತೆ ಇದೆ. ಕರ್ನಾಟಕ ಬಂದಿಖಾನೆಗಳಲ್ಲಿರುವ ಒಟ್ಟು ೯೦೨೬ ಬಂಧಿಗಳಲ್ಲಿ ೮೭೮೦ ಪುರುಷ ಕೈದಿಗಳು, ೨೪೬ ಮಹಿಳಾ ಕೈದಿಗಳು. ಇವರಲ್ಲಿ ಜೀವಾವಧಿ ಶಿಕ್ಷೆಯಾದವರು ೧೩೦೨ ಮಂದಿ. ಈ ಅಧ್ಯಯನಕ್ಕೆ ತೆಗೆದುಕೊಂಡಿರುವ ರಾಜ್ಯದ ೬ ಕೇಂದ್ರ ಬಂದಿಖಾನೆಗಳು ಮತ್ತು ಒಂದು ಬಯಲು ಬಂದಿಖಾನೆಯಲ್ಲಿರುವ ಒಟ್ಟು ಜೀವಾವಧಿ ಶಿಕ್ಷೆಯವರು ೧೨೬೯ ಮಂದಿ. ಇದರಲ್ಲಿ ಮಹಿಳೆಯರು ೩೨ (ಕೋಷ್ಟಕ ೧೩) (೧೪.೭.೨೦೦೦ ರ ಕ್ಷೇತ್ರಕಾರ್ಯದ ಮಾಹಿತಿಯಂತೆ). ನಂತರ ೨.೬.೨೦೦೨ರ ಕ್ಷೇತ್ರಕಾರ್ಯದ ಮಾಹಿತಿಯಂತೆ ಈ ಬಂದಿಖಾನೆಗಳಲ್ಲಿರುವ ಜೀವಾವಧಿ ಶಿಕ್ಷೆಯವರು ಒಟ್ಟು ೧೬೩೬ ಮಂದಿ. ಇದರಲ್ಲಿ ಪುರುಷ ಕೈದಿಗಳು ೧೫೯೩, ಮಹಿಳಾ ಕೈದಿಗಳು ೪೩ ಮಂದಿ ಇದ್ದಾರೆ.

ಇತ್ತೀಚಿನ (೧೫.೮.೨೦೦೨ ರ ಕ್ಷೇತ್ರಕಾರ್ಯದ ಮಾಹಿತಿ) ವರದಿಯಂತೆ ರಾಜ್ಯದ ಒಟ್ಟು ಕೈದಿಗಳ ಸಂಖ್ಯೆ ೧೦೫೬೪ ಮಂದಿ. ಇದರಲ್ಲಿ ಪುರುಷ ಕೈದಿಗಳು ೧೦೨೦೩, ಮಹಿಳಾ ಕೈದಿಗಳು ೩೬೧ ಮಂದಿ. ಈ ಪೈಕಿ ಜೀವಾವಧಿ ಪುರುಷ ಕೈದಿಗಳು ೨೦೪೮, ಮಹಿಳಾ ಕೈದಿಗಳು ೬೨ ಮಂದಿ ಇದ್ದು, ಒಟ್ಟು ೨೧೧೦ ಜೀವಾವಧಿ ಕೈದಿಗಳಿದ್ದಾರೆ. (ಅನುಬಂಧ ೫ ಗಮನಿಸಿ).

## ಕೋಷ್ಟಕ ೧೩

# ಬಂದಿಖಾನೆಗಳ ಕೈದಿ, ವಿಸ್ತೀರ್ಣ ವಿವರ

| ಕೇಂದ್ರ ಬಂದಿಖಾನೆಗಳು | ಆರಂಭಿಸಿದ ವರ್ಷ | ಒಟ್ಟು ವಿಸ್ತೀರ್ಣ | ಜೈಲಿನ ಒಳ ವಿಸ್ತೀರ್ಣ | ಅಧಿಕೃತ ಸ್ಥಳಾವಕಾಶ | ಜೀವಾವಧಿ ಕೈದಿ | | |
|---|---|---|---|---|---|---|---|
| | | | | | ಪುರುಷ | ಮಹಿಳೆ | ಒಟ್ಟು |
| ಬಳ್ಳಾರಿ | ೧೮೮೪ | ೬೦ ಎಕ್ರೆ ೩೯ ಗುಂಟೆ | ೨೯ ಎಕ್ರೆ ೧೦ ಗುಂಟೆ | ೭೪೭ ಕೈದಿಗಳಿಗೆ | ೯೩ | ೫ | ೯೮ |
| ಗುಲಬರ್ಗಾ | ೧೯೬೯ (ಹೊಸಕಟ್ಟಡ) | ೯೮ ಎಕ್ರೆ ೪೦ ಗುಂಟೆ | ೨೩ ಎಕ್ರೆ ೨೬ ಗುಂಟೆ | ೪೩೦ ಕೈದಿಗಳಿಗೆ | ೧೯೬ | ೬ | ೨೦೨ |
| ವಿಜಾಪುರ | ೧೯೦೬ | ೪೪ ಎಕ್ರೆ ೨೬ ಗುಂಟೆ | ೦೪ ಎಕ್ರೆ ೧೦ ಗುಂಟೆ | ೩೦೦ ಕೈದಿಗಳಿಗೆ | ೧೦೪ | ೨ | ೧೦೬ |
| ಮೈಸೂರು | ೧೮೬೨ | ೨೩ ಎಕ್ರೆ | ೪.೫ ಎಕ್ರೆ | ೩೬೨ ಕೈದಿಗಳಿಗೆ | ೩೫೧ | ೧೦ | ೩೬೧ |
| ಬೆಳಗಾಂ | ೧೯೨೩ | ೯೯ ಎಕ್ರೆ | ೨೩ ಎಕ್ರೆ | ೧೧೬೨ ಕೈದಿಗಳಿಗೆ | ೨೧೦ | ೯ | ೨೧೯ |
| ಬೆಂಗಳೂರು ಹಳೆಯ ಬಂದಿಖಾನೆ | ೧೮೬೭ | ಮುಚ್ಚಲಾಗಿದೆ | - | - | - | - | - |
| ಬೆಂಗಳೂರು ಹೊಸ ಬಂದಿಖಾನೆ | ೨೦೦೧ | ೧೪೯ ಎಕ್ರೆ | ೪೨ ಎಕ್ರೆ | ೨೧೦೦ ಕೈದಿಗಳಿಗೆ | ೫೯೩ | ೧೧ | ೬೦೪ |
| ಬಯಲು ಬಂದಿಖಾನೆ | ೧೯೭೨ | ೧೧೬ ಎಕ್ರೆ ೧೬ ಗುಂಟೆ | ಕೈದಿಗಳ ವಾಸಕ್ಕೆ ಗುಡಿಸಲುಗಳನ್ನು ನಿರ್ಮಿಸಿದ್ದಾರೆ | ೮೦ ಕೈದಿಗಳಿಗೆ | ೪೬ | | ೪೬ |
| ಒಟ್ಟು | | | | | ೧೫೯೩ | ೪೩ | ೧೬೩೬ |

ಸ್ವಾತಂತ್ರ್ಯ ಪೂರ್ವದಿಂದ ಇಂದಿನ ವರೆಗೂ ಭಾರತೀಯ ಅಪರಾಧಿಗಳಲ್ಲಿ ಬಹುಪಾಲು ಮಂದಿ ಗ್ರಾಮೀಣ ಹಿನ್ನಲೆಯವರು; ಒಕ್ಕಲುತನ ಮಾಡುವವರು. ಅಪರಾಧ ಹುಟ್ಟುವುದೇ ಮುಖ್ಯವಾಗಿ ಹೆಣ್ಣು - ಹೊನ್ನು - ಮಣ್ಣು ಮತ್ತು ಅಧಿಕಾರದ (ರಾಜಕೀಯದ) ಕಾರಣಕ್ಕಾಗಿ. ಭಾರತ ಕೃಷಿ ಪ್ರಧಾನ ದೇಶವಾದುದರಿಂದ ದುಡಿಮೆಗೈಯುವ ಭೂಮಿಯ ಸುತ್ತಲೇ ವಾದ - ವಿವಾದ ಸೃಷ್ಟಿಯಾಗಿ ಅದು ವಿಪರೀತಕ್ಕೇರಿ ಅಪರಾಧದಲ್ಲಿ ಅಂತ್ಯಗೊಳ್ಳುತ್ತದೆ. ಅಪರಾಧಿಯೋ... ನಿರಪರಾಧಿಯೋ ನ್ಯಾಯಾಂಗದ ಬಾಯಿಗೆ ಸಿಕ್ಕವನು ಬಂದಿಖಾನೆಯ ಕಂಬಿ ಎಣಿಸಬೇಕಾಗುತ್ತದೆ.

ಈ 'ಭೂಮಿ' ಇರುವವರೆಗೆ ವಿವಾದ ನಿಲ್ಲದು - ಅಪರಾಧವೂ ನಿಲ್ಲದು. ಇದು 'ಭೂಮಿ'ಗೊಂದೇ ಅನ್ವಯಿಸುವ ಮಾತಲ್ಲ. ಹೆಣ್ಣು ಹೊನ್ನಿನ ಪರಿಸ್ಥಿತಿಯೂ ಅಷ್ಟೆ. ಅಪರಾಧ ಅಥವ ಅಪರಾಧಿ ಹುಟ್ಟುವುದು ಒಂದೇ ತೆರನಾದರೂ, ಅಪರಾಧ ಹುಟ್ಟುವ ನೆಲೆ ಮಾತ್ರ ಬೇರೆ ಬೇರೆಯಾಗಿರುವುದರಿಂದ, ಸಮಾಜವು ಎಲ್ಲ ಅಪರಾಧಿಗಳನ್ನು ಒಂದೇ ತಕ್ಕಡಿಯಲ್ಲಿಟ್ಟು ತೂಗಲಾರದು. ಹೆಣ್ಣು ಹೊನ್ನಿನ ಕಾರಣಕ್ಕೆ ಅಪರಾಧಿ ಎನಿಸಿಕೊಂಡವವನ್ನು ಸಮಾಜ ತಾನು ಅನುಸರಿಸಿಕೊಂಡು ಬಂದಿರುವ ನೈತಿಕ ಚೌಕಟ್ಟಿನಲ್ಲಿಟ್ಟು ಅಳೆಯುತ್ತದೆ. ಆತ ಸಮಾಜ ಕಟ್ಟಿರುವ ಸಂವಿಧಾನದಡಿಯಲ್ಲಿ ನಿಕೃಷ್ಟ ವ್ಯಕ್ತಿಯೆನಿಸುತ್ತಾನೆ. ಆದರೆ ಭೂಮಿಯ ಕಾರಣಕ್ಕೆ ಅಪರಾಧಿ ಎನಿಸಿಕೊಂಡವನನ್ನು ಸಮಾಜ ಅಷ್ಟೊಂದು ಕೆಟ್ಟ ದೃಷ್ಟಿಯಿಂದ ನೋಡಲಾರದು. ಇದೇ ದೃಷ್ಟಿಕೋನ ಬಂದಿಖಾನೆಯಲ್ಲೂ ಚಾಲ್ತಿಯಲ್ಲಿದೆ.

ಪ್ರಸ್ತುತ ಅಧ್ಯಯನಕ್ಕೆ ಬಳಸಿಕೊಂಡಿರುವ ರಾಜ್ಯದ ಬಂದಿಖಾನೆಯಲ್ಲಿರುವ ಜೀವಾವಧಿ ಕೈದಿಗಳಲ್ಲೂ ಬಹಳಷ್ಟು ಮಂದಿ ಹಳ್ಳಿಗಾಡಿನ-ಕೃಷಿಮೂಲದವರು-ರೈತಾಪಿ ಕೆಲಸವನ್ನೇ ನಂಬಿಕೊಂಡವರು (ಕೋಷ್ಟಕ ೧೬). ಕೋಪ - ಆವೇಶದ ರಭಸದಲ್ಲಿ ವಿವೇಕವನ್ನು ಬದಿಗೊತ್ತಿ ಮಾಡಿರುವ ಅಪರಾಧಗಳೇ ಇಲ್ಲಿ ಹೆಚ್ಚಿನದು. ಬಹಳಷ್ಟು ಭೂಮಿ ವಿವಾದದ ಹಗರಣಗಳಲ್ಲಿ ಕನಿಷ್ಠ ೫ - ೬ ಮಂದಿಗೆ ಒಟ್ಟಾಗಿ ಶಿಕ್ಷೆಯಾಗಿ, ಒಂದೇ ಕಡೆ ಜೀವಾವಧಿ ಶಿಕ್ಷೆ ಅನುಭವಿಸುತ್ತಿರುವುದು ಸದ್ಯ ಹೆಚ್ಚಿನ ಕೇಂದ್ರ ಬಂದಿಖಾನೆಗಳಲ್ಲಿ ಕಂಡು ಬರುವ ಚಿತ್ರಣ. ಇವರು ಅಪರಾಧಿಗಳಾಗಿದ್ದರೂ, ಮೂಲಭೂತವಾಗಿ ಅಪರಾಧದ ಮನೋಭಾವವುಳ್ಳ ಅಪರಾಧಿಗಳೆಂದು ಬಂದಿಖಾನೆ ಆಡಳಿತ ಇವರನ್ನು ಪರಿಗಣಿಸುವುದಿಲ್ಲ. ಪರಿಸ್ಥಿತಿಯ ಒತ್ತಡದಲ್ಲಿ ಸಿಲುಕಿ ವಿವೇಕ ಶೂನ್ಯರಾಗಿ ಅಪರಾಧಿ ಪಟ್ಟವನ್ನು ಹೊತ್ತವರೆಂದು ಪರಿಗಣಿಸಿ ನಂಬಿಕೆಯ 'ಪಟ್ಟಿ'ಯಲ್ಲಿರಿಸುತ್ತದೆ. ಇವರಲ್ಲಿ ಶೇಕಡಾ ೯೬.೫ ಮಂದಿಯನ್ನು ಕನಿಷ್ಠ ಭದ್ರತೆಯಲ್ಲಿಟ್ಟು, ಬಂದಿಖಾನೆಯ ಕೃಷಿ ಭೂಮಿಯನ್ನು ಹಸನು ಮಾಡಿ ಬೆಳೆ ತೆಗೆಯಲು ಬಳಸಲಾಗುತ್ತದೆ.[೨೦]

ಪಂಡಿತ ನೆಹರೂ ಅವರು ೧೯೩೦ ರಲ್ಲಿ ನೈನಿ ಸೆಂಟ್ರಲ್ ಜೈಲಿನಲ್ಲಿದ್ದಾಗ, ಭೂಮಿ ತಗಾದೆಯಲ್ಲಿ ಶಿಕ್ಷೆಯಾದ ಹಲವಾರು ರೈತರೂ ಅದೇ ಜೈಲಲ್ಲಿದ್ದರು. ನೆಹರೂ ಅವರನ್ನು ಕಂಡು ಪರಿತಪಿಸುತ್ತ ತನ್ನ ಜೀವನ ಚರಿತ್ರೆಯಾದ An Autobiography : 1936ರಲ್ಲಿ ಅದನ್ನು ಪ್ರಸ್ತಾಪಿಸಿದ್ದಾರೆ. 'ಸಣ್ಣ ಹಳ್ಳಿಗಳ ಈ ಕಷ್ಟಜೀವಿ ಕೃಷಿಕರು ಭೂಮಿ ತಗಾದೆಯಲ್ಲೋ, ನೀರು ಅಥವ ಬೆಳೆ ತಗಾದೆಯಲ್ಲೋ ವಿವೇಕ ಕಳಚಿಟ್ಟು ಆವೇಶಕ್ಕೊಳಗಾಗಿ ಬಡಿದಾಡಿಕೊಂಡು, ಅಂತೂ... ತಗಾದೆಯನ್ನು ಶಮನಮಾಡಿಕೊಂಡೆವೆಂದು ಭ್ರಮಿಸಿ ನೇರ ಹೊಗುವುದು ಬಂದಿಖಾನೆಯನ್ನು. ಇವರು ನಿಜವಾಗಿಯೂ ಕ್ರೂರ ಅಪರಾಧಿಗಳಲ್ಲ. ಇವರ ಸಾಮರ್ಥ್ಯಕ್ಕೆ ತಕ್ಕಂತ ಕೆಲಸ

ಕೊಟ್ಟು, ಸರಿಯಾದ ಆಲೋಚನೆಯ ದಾರಿಯಲ್ಲಿ ಕೊಂಡೊಯ್ದರೆ ಇವರು ದೇಶಕ್ಕೆ ಅಮೂಲ್ಯ ಆಸ್ತಿಯಾಗುವುದರಲ್ಲಿ ಸಂದೇಹವಿಲ್ಲ' ಎಂದು ನೆಹರೂ ಅವರು ಪರಿತಪಿಸಿದ್ದಾರೆ.

ನಮ್ಮ ಬಂದಿಖಾನೆ ಆಡಳಿತವಂತೂ ಕೃಷಿ ಹಿನ್ನಲೆಯ ಕೈದಿಗಳನ್ನು ಸಮರ್ಥವಾಗಿ ಬಳಸಿಕೊಳ್ಳಲು ಬಯಲು ಬಂದಿಖಾನೆ ಮತ್ತು ಎಲ್ಲಾ ಜಿಲ್ಲಾ / ಕೇಂದ್ರ ಬಂದಿಖಾನೆಗಳ ವ್ಯಾಪ್ತಿಯಲ್ಲಿ ಸಾಕಷ್ಟು ಕೃಷಿ ಭೂಮಿಯನ್ನು ಅಭಿವೃದ್ಧಿಗೊಳಿಸಿದೆ. ಕ್ಷೇತ್ರಕಾರ್ಯದ ವೇಳೆ ಗಮನಿಸಿದ ಮುಖ್ಯ ಅಂಶವೆಂದರೆ, ಎಲ್ಲ ಬಂದಿಖಾನೆಗಳಲ್ಲೂ ಕೃಷಿ ಹಿನ್ನಲೆಯಿಂದ ಬಂದ ಕೈದಿಗಳು ತೀರಾ ಸಹಜವಾಗಿದ್ದು, ಶಾಂತಚಿತ್ತರಾಗಿ ಸಂಯಮದಿಂದಿದ್ದು ಕೃಷಿ ಕೆಲಸದಲ್ಲಿ ಸಂತೋಷವನ್ನು ಕಾಣುತ್ತಿರುವುದು. ಇವರೆಲ್ಲರು ಶೈಕ್ಷಣಿಕವಾಗಿ ಹಿಂದುಳಿದವರಾಗಿದ್ದು, ಕೆಲವೇ ಕೆಲವು ಭೂಮಾಲೀಕರನ್ನು ಹೊರತುಪಡಿಸಿ ಉಳಿದವರೆಲ್ಲರೂ ಆರ್ಥಿಕವಾಗಿಯೂ ದುರ್ಬಲರು.

ಭೂಮಿ ತಗಾದೆಯಂತೆಯೆ, ಹಳ್ಳಿ ರಾಜಕೀಯದ ಗುಂಪುಗಾರಿಕೆಯಲ್ಲಿ ಅಪರಾಧ ಎನಿಸಿಕೊಂಡ ಕೈದಿಗಳಿದ್ದು ಮತ್ತೊಂದು ಗಾಥೆ. ಇಲ್ಲೂ ಯಾವುದೇ ಅಪರಾಧದ ಮನೋಭಾವವಿಲ್ಲದೆ, ಕ್ಷಣ ಮಾತ್ರದ ಆವೇಶದಲ್ಲಿ ಅಪರಾಧಗೈದವರೇ ಹೆಚ್ಚು. ಇವರಲ್ಲೂ ಶೇಕಡಾ ೯೦ ರಷ್ಟು ಮಂದಿ ಕೃಷಿಮೂಲದ ಹಳ್ಳಿಯವರು. ರಾಜಕೀಯ ತಗಾದೆಯಲ್ಲಿ ನೇರ ಪಾಲ್ಗೊಂಡವರಿಗಿಂತ ಬರೀ ಆ ಜಗಳದಲ್ಲಿ ಮೂಗು ತೂರಿಸಿದವರೇ ಹೆಚ್ಚು ಮಂದಿ ಶಿಕ್ಷೆ ಅನುಭವಿಸುತ್ತಿದ್ದಾರೆ. ಇವರಲ್ಲೂ ಶೇಕಡಾ ೯೦ ರಷ್ಟು ಮಂದಿಯನ್ನು ಕೃಷಿ ಕೆಲಸಕ್ಕೆ ತೋಟಗಾರಿಕೆ, ಹೈನುಗಾರಿಕೆಯಲ್ಲಿ ಬಳಸಿಕೊಳ್ಳಲಾಗುತ್ತದೆ. ಈ ಅಪರಾಧಿಗಳಲ್ಲಿ ಬಹಳಷ್ಟು ಮಂದಿ ಶೈಕ್ಷಣಿಕವಾಗಿ ಹಾಗೂ ಆರ್ಥಿಕವಾಗಿ ಹಿಂದುಳಿದವರು.

### ಕೋಷ್ಟಕ ೧೪

## ಕೈದಿಗಳ ಶೈಕ್ಷಣಿಕ ವಿವರ

(ಅಪರಾಧ ಗೈಯುವುದಕ್ಕಿಂತ ಮೊದಲಿನ ವಿವರ)

| ಶಿಕ್ಷಣದ ವಿವರ | ಪುರುಷ ಕೈದಿಗಳು | ಮಹಿಳಾ ಕೈದಿಗಳು | ಒಟ್ಟು | ಶೇಕಡಾವಾರು |
|---|---|---|---|---|
| ಅನಕ್ಷರಸ್ಥರು | ೧೨ | ೦೩ | ೧೫ | ೧೧.೫ |
| ಪ್ರಾಥಮಿಕ ಶಿಕ್ಷಣ (ಸಾಕ್ಷರತಾ ಶಿಕ್ಷಣ ಪಡೆದವರನ್ನು ಒಳಗೊಂಡಂತೆ) | ೫೯ | ೦೨ | ೬೧ | ೪.೭ |
| ಪ್ರೌಢ ಶಿಕ್ಷಣ | ೧೬ | ೦೪ | ೨೦ | ೧೫.೪ |
| ಎಸ್.ಎಸ್.ಎಲ್.ಸಿ, ಮುಗಿಸಿದವರು | ೧೬ | - | ೧೬ | ೧೨.೩ |
| ಪಿ.ಯು.ಸಿ, ಮುಗಿಸಿದವರು | ೦೬ | - | ೦೬ | ೪.೭ |
| ಟಿ.ಸಿ.ಎಚ್, ಮುಗಿಸಿದವರು | ೦೩ | ೦೧ | ೦೪ | ೩ |
| ಪದವಿ ಮುಗಿಸಿಲ್ಲದವರು | ೦೪ | - | ೦೪ | ೩ |
| ಪದವಿ ಮುಗಿಸಿದವರು | ೦೩ | - | ೦೩ | ೨.೩ |
| ವೃತ್ತಿ ಶಿಕ್ಷಣ (M.E.) | ೦೧ | - | ೦೧ | ೦.೮ |
| ಒಟ್ಟು | ೧೨೦ | ೧೦ | ೧೩೦ | ೧೦೦ |

ಹೆಣ್ಣು - ಹೊನ್ನಿನ ವಿಚಾರದಲ್ಲಿ ಅಪರಾಧ ಲೋಕಕ್ಕೆ ಕಾಲಿಟ್ಟ ಜೀವಾವಧಿ ಕೈದಿಗಳಲ್ಲಿ ಬಹಳಷ್ಟು ಮಂದಿ ಹಳ್ಳಿಮೂಲದವರು, ಶಿಕ್ಷಣವಿಲ್ಲದವರು. ಆರ್ಥಿಕವಾಗಿ ಹಿಂದುಳಿದವರು. ಅನೈತಿಕ ಸಂಬಂಧ ಹಾಗೂ ದಂಪತಿಗಳ ಮಧ್ಯೆ ಸಂಶಯದ ಎಳೆ ಹಾದು ಬಂದಿದ್ದೇ ಇಲ್ಲಿನ ಬಹಳಷ್ಟು ಅಪರಾಧ (ಕೊಲೆ) ಗಳಿಗೆ ಕಾರಣ. ಈ ಸಂಶಯ ಸಂದೇಹ ಎಂಬುದು ವಿದ್ಯಾವಂತರನ್ನೂ ಬಿಟ್ಟಿಲ್ಲ. ಶಿಕ್ಷಕ ವೃತ್ತಿ - ಸರಕಾರಿ ವೃತ್ತಿಯಲ್ಲಿದ್ದ ಹಲವರು ಇದೇ ಅಪರಾಧಕ್ಕಾಗಿ ಶಿಕ್ಷೆ ಅನುಭವಿಸುತ್ತಿದ್ದಾರೆ. ಮಹಿಳಾ ಕೈದಿಗಳಲ್ಲೂ ಕೆಲವರು ಇದೇ ವಿಚಾರಕ್ಕೆ ಅಪರಾಧಿಗಳೆನಿಸಿದ್ದಾರೆ (ಕೋಷ್ಟಕ ೧೪ ಮತ್ತು ೧೫). ಮಹಿಳಾ ಕೈದಿಗಳಲ್ಲಿ - ಗಂಡನ ಅನೈತಿಕ ಸಂಬಂಧದ ಬಗ್ಗೆ ಕುಪಿತರಾಗಿ ಅಪರಾಧಗೈದವರು ಕೆಲವರಾದರೆ, ತಮ್ಮ ಅನೈತಿಕ ಸಂಬಂಧದಲ್ಲಿ ಗಂಡನ ಅಡ್ಡಿಯನ್ನು ತಡೆಯಲು ಪ್ರಿಯಕರನೊಂದಿಗೆ ಸೇರಿ ಗಂಡನ ಕೊಲೆ ಮಾಡಿದ ಅಪರಾಧವುಳ್ಳವರು ಇನ್ನಷ್ಟು ಮಂದಿ. ಹೊನ್ನಿನ ವಿಚಾರದಲ್ಲಿ ಕೊಲೆ ಅಪರಾಧಗೈದವರಲ್ಲಿ, ದರೋಡೆಯ ಅಪರಾಧವುಳ್ಳವರು ಕೆಲವೇ ಕೆಲವು ಮಂದಿಯಾದರೆ, ವರದಕ್ಷಿಣೆ ಕಾರಣಕ್ಕಾಗಿಯೇ ಕೊಲೆ ಅಪರಾಧಿಗಳಾಗಿರುವವರು ಬಹಳಷ್ಟು ಮಂದಿ. ಇದರಲ್ಲಿ ಮಹಿಳೆಯರದ್ದೇ ಮೇಲುಗೈ.

## ಕೋಷ್ಟಕ ೧೫

## ಕೈದಿಗಳ ವಯಸ್ಸು

| ವಯಸ್ಸು | ಪುರುಷ ಕೈದಿಗಳು | ಮಹಿಳಾ ಕೈದಿಗಳು | ಒಟ್ಟು | ಶೇಕಡಾವಾರು |
|---|---|---|---|---|
| ೩೦ ವರ್ಷದ ಒಳಗಿನವರು | ೩೨ | ೦೩ | ೩೫ | ೨೭ |
| ೩೦ - ೪೦ ರ ನಡುವಿನವರು | ೩೬ | ೦೨ | ೩೮ | ೨೯ |
| ೪೦ - ೫೦ ರ ನಡುವಿನವರು | ೨೯ | ೦೪ | ೩೩ | ೨೫ |
| ೫೦ - ೫೫ ರ ನಡುವಿನವರು | ೧೬ | ೦೧ | ೧೭ | ೧೩ |
| ೫೫ ರ ನಂತರದವರು | ೦೮ | - | ೦೮ | ೩೬ |
| ಒಟ್ಟು | ೧೨೦ | ೧೦ | ೧೩೦ | ೧೦೦ |

ವರದಕ್ಷಿಣೆ - ಭೂಮಿತಗಾದೆ - ರಾಜಕೀಯದ ಕಾರಣದಿಂದ ಕೊಲೆ ಅಪರಾಧವನ್ನು ಹೊತ್ತವರಲ್ಲಿ, ಒಂದೇ ಕೇಸಿಗೆ ಸಂಬಂಧಪಟ್ಟ ಒಂದೇ ಕುಟುಂಬ ಅಥವ ಒಂದೇ ಹಳ್ಳಿಯ ೫ - ೬ ಮಂದಿಯುಳ್ಳ ಗುಂಪು ಒಂದೆಡೆಯ ಶಿಕ್ಷೆ ಅನುಭವಿಸುತ್ತಿರುವುದನ್ನು ವಿಶೇಷವಾಗಿ ಗಮನಿಸಲಾಗಿದೆ. ಕುಟುಂಬಕ್ಕೆ ಆರ್ಥಿಕ ಆಧಾರವಾಗುಳ್ಳ ತಾವೆಲ್ಲರೂ (ತಂದೆ - ತಾಯಿ - ತಮ್ಮ - ಅಣ್ಣ) ಇಲ್ಲಿ ಶಿಕ್ಷೆ ಅನುಭವಿಸುತ್ತಿದ್ದರೆ ಊರಲ್ಲಿರುವ ಹೊಲಗದ್ದೆ (ಇದ್ದಲ್ಲಿ) ಮನೆ ಮಂದಿಯ ಕಥೆ - ವ್ಯಥೆಯೇನು? ಎಂಬ ಬಗ್ಗೆ ಚಿಂತಿಸಿ ಕೊರಗುವ ಗುಂಪು ಕೆಲವಾದರೆ, ಮತ್ತೆ ಕೆಲವು ಗುಂಪುಗಳಲ್ಲಿರುವ ಕೈದಿಗಳು ಬಂದಿಖಾನೆಯ ಏಕತಾನತೆಯನ್ನು ಹೊಡೆದಟ್ಟಲು, ನಿರಂತರ ಕಾಡುತ್ತಿರುವ ಮನೆ ಮಂದಿಯ ಚಿಂತೆಯನ್ನು ಮರೆಯಲು ಒಂದೇ ಹಳ್ಳಿಯ - ಒಂದೇ ಕುಟುಂಬದ ಕೆಲವರಾದರೂ ಇಲ್ಲಿರುವುದರಿಂದ ಸಾಧ್ಯವಾಗಿದೆ ಎಂದು ಪ್ರತಿಕ್ರಿಯಿಸುತ್ತಾರೆ.

## ಕೋಷ್ಟಕ ೧೬

## ಕೈದಿಗಳ ಆರ್ಥಿಕ ಸ್ಥಿತಿಯನ್ನು ಪ್ರತಿಬಿಂಬಿಸುವ ಪೂರ್ವಾಶ್ರಮದ ವೃತ್ತಿ ವಿವರ

| ಕ್ರ. ಸಂ. | ವೃತ್ತಿ | ಪುರುಷ ಕೈದಿಗಳು | ಮಹಿಳಾ ಕೈದಿಗಳು | ಒಟ್ಟು | ಶೇಕಡಾವಾರು |
|---|---|---|---|---|---|
| ೧. | ವ್ಯಾಪಾರ (ಕಿರಾಣಿ, ಗೂಡಂಗಡಿ, ಗುಜರಿ) | ೦೮ | ೦೧ (ಗೂಡಂಗಡಿ) | ೦೯ | ೭ |
| ೨. | ಗ್ಯಾರೇಜ್, ಕಾರ್ಖಾನೆಗಳ ಕಾರ್ಮಿಕರು | ೦೬ | - | ೦೬ | ೪.೬ |
| ೩. | ಟ್ಯಾಕ್ಸಿ - ಆಟೋ - ರಿಕ್ಷಾ, ಟ್ರಕ್ - ಚಾಲಕರು | ೦೪ | - | ೦೪ | ೩.೦ |
| ೪. | ಸ್ವಂತ ಜಮೀನಿನಲ್ಲಿ ರೈತಾಪಿ ಕೆಲಸ | ೩೦ | ೦೧ | ೩೧ | ೨೩.೮೪ |
| ೫. | ಇತರರ ಹೊಲದಲ್ಲಿ ದುಡಿಯುವವರು | ೪೨ | ೦೨ | ೪೪ | ೩೩.೮೪ |
| ೬. | ಹೈನುಗಾರಿಕೆ (ಸಣ್ಣಪ್ರಮಾಣದ) | ೦೩ | - | ೦೩ | ೨.೩೦ |
| ೭. | ಟೈಲರ್ | ೦೨ | - | ೦೨ | ೧.೫೩ |
| ೮. | ಇತರ ಕೂಲಿಕೆಲಸ | ೧೦ | ೦೨ | ೧೨ | ೯.೨೩ |
| ೯. | ಶಿಕ್ಷಕರು, ಕಛೇರಿಗಳಲ್ಲಿ ಕೆಲಸ ಮಾಡುವವರು | ೦೬ | ೦೧ | ೦೭ | ೫.೩೮ |
| ೧೦. | ತಾಂತ್ರಿಕ ವಿಷಯ ಬೋಧಕರು (ಪ್ರಿನ್ಸಿಪಾಲ್) | ೦೧ | - | ೦೧ | ೦.೭೬ |
| ೧೧. | ಬಡಗಿ | ೦೩ | - | ೦೩ | ೨.೩೦ |
| ೧೨. | ನೇಕಾರಿಕೆ | ೦೧ | - | ೦೧ | ೦.೭೬ |
| ೧೩. | ನಿರುದ್ಯೋಗಿಗಳು | ೦೪ | ೦೩ (ಗೃಹಣಿಯರು) | ೦೭ | ೫.೩೮ |
| | ಒಟ್ಟು | ೧೨೦ | ೧೦ | ೧೩೦ | ೧೦೦ |

ಕೈದಿಗಳ ಶೈಕ್ಷಣಿಕ, ಆರ್ಥಿಕ (ಔದ್ಯೋಗಿಕ), ಸಾಮಾಜಿಕ, ವೈವಾಹಿಕ ವಿವರಗಳ ಅಧ್ಯಯನಕ್ಕಾಗಿ ಮಾದರಿಯಾಗಿ ಆಯ್ದುಕೊಂಡ ೧೩೦ ಮಂದಿ ಜೀವಾವಧಿ ಕೈದಿಗಳನ್ನು (೧೨೦ ಪುರುಷರು + ೧೦ ಮಹಿಳೆಯರು) ಹೀಗೆ ವಿಂಗಡಿಸಲಾಗಿದೆ.

## ಕೋಷ್ಟಕ ೧೭

## ಕೈದಿಗಳ ವೈವಾಹಿಕ ವಿವರ

| ಕ್ರ. ಸಂ. | ವೈವಾಹಿಕ ವಿವರ | ಪುರುಷ ಕೈದಿಗಳು | ಮಹಿಳಾ ಕೈದಿಗಳು | ಒಟ್ಟು | ಶೇಕಡಾವಾರು |
|---|---|---|---|---|---|
| ೧. | ವಿವಾಹಿತರು | ೮೬ | ೦೫ | ೯೧ | ೭೦ |
| ೨. | ಅವಿವಾಹಿತರು | ೧೦ | ೦೧ | ೧೧ | ೮.೫ |
| ೩. | ವಿಚ್ಛೇದಿತರು (ಕಾನೂನು ಬದ್ಧವಾಗಿ ಅಲ್ಲ) | ೦೨ | ೦೨ | ೦೪ | ೩ |
| ೪. | ವಿಧುರರು/ವಿಧವೆಯರು | ೨೨ | ೦೨ | ೨೪ | ೧೮.೫ |
| | ಒಟ್ಟು | ೧೨೦ | ೧೦ | ೧೩೦ | ೧೦೦ |

ಕ್ಷೇತ್ರಕಾರ್ಯದ ಸಂದರ್ಭ, ೧೩೦ ಮಂದಿ ಕೊಲೆ ಅಪರಾಧದ ಜೀವಾವಧಿ ಕೈದಿಗಳನ್ನು ಅವರಲ್ಲಾಗಿರುವ ಮನ ಪರಿವರ್ತನೆಯನ್ನು ಗಮನದಲ್ಲಿಟ್ಟುಕೊಂಡು ಸಂದರ್ಶಿಸಿದಾಗ, ವಿಶಿಷ್ಟ ಹಾಗೂ ವಿಲಕ್ಷಣ ವ್ಯಕ್ತಿತ್ವ ಅನಿಸಿದವರನ್ನು ಇಲ್ಲಿ ದಾಖಲಿಸಲಾಗಿದೆ (ಕೈದಿಗಳ ಹಾಗೂ ಅಧಿಕಾರಿಗಳ ಮನವಿ ಮೇರೆಗೆ ಊರು, ಹೆಸರುಗಳನ್ನು ಬದಲಾಯಿಸಲಾಗಿದೆ).

೧. **ಪರಪ್ಪ :** ೫೩ ವರ್ಷದಾತ. ಓದು ಎರಡನೇ ತರಗತಿ. ತತ್ತ್ವಪದ ಹಾಡುಗಾರ. ೧೧ ವರುಷದಿಂದ ಜೀವಾವಧಿ ಶಿಕ್ಷೆ ಅನುಭವಿಸುತ್ತಿದ್ದಾನೆ. ಸೌಮ್ಯ ಸ್ವಭಾವದನೆಂದು ಅಧಿಕಾರಿಗಳ ಮೆಚ್ಚುಗೆಗೆ ಪಾತ್ರನಾದವ. ಚಿತ್ರದುರ್ಗ ಜಿಲ್ಲೆಯಲ್ಲಿ ಕಾರ್ಮಿಕನಾಗಿದ್ದವ. ಹೆಂಡತಿಯ ಅನೈತಿಕ ಸಂಬಂಧವನ್ನು ಕಂಡು ಆಕೆಯೊಡನೆ ಜಗಳವಾಡಿ, ಆವೇಶಕ್ಕೊಳಗಾಗಿ ಆಕೆಯನ್ನು ದೂಡಿದ್ದೇ 'ಕೊಲೆಗೆ' ಹೇತುವಾಯಿತು. ದೂಡಿದ ರಭಸಕ್ಕೆ ಆಕೆ ರುಬ್ಬುಗುಂಡಿನ ಮೇಲೆ ಬಿದ್ದು ಸಾವನ್ನಪಿದ್ದಾಳೆ. ನಂತರ ಈತನಿಗೆ ಜೀವಾವಧಿ ಶಿಕ್ಷೆ.

'ಯಾಕೆ ಹಾಗ್ಮಾಡಿದ್ರಿ ಈಗ ಪಶ್ಚಾತ್ತಾಪ ಅನಿಸ್ತಾ ಇಲ್ವಾ?' ಎಂಬ ಪ್ರಶ್ನೆಗೆ ಉತ್ತರ : 'ಆಗ ಈ ಜ್ಞಾನದ ಕಣ್ಣು ಮುಚ್ಚಿತ್ತು ತಾಯಿ. ಈಗ ಎರಡೂ ಕಣ್ಣಿವೆ, ತೆರೆದಿವೆ. ಅವು ಇದ್ದೂ ಪ್ರಯೋಜನವಿಲ್ಲ.... ಆಕೆಯ ಸಾವಿಗೆ ನಾನೇ ಕಾರಣ. ಆಕೆ ಎಲ್ಲಾದ್ರೂ ಬದುಕಿರ್ತಿದ್ರು... ನನ್ನ ಮಕ್ಳಿಗೆ ತಾಯಾಗಿರ್ತಿದ್ಲು... ಅವೂ ಅನಾಥವಾಗಿವೆ... ನನ್ನನ್ನೇ ದ್ವೇಷಿಸ್ತವೆ.'

'ಬಿಡುಗಡೆ ಆದ್ಮೇಲೆ ಏನು ಮಾಡ್ಬೇಕೂಂತ ಇದ್ದೀರಿ?' ಎಂಬ ಪ್ರಶ್ನೆಗೆ ಉತ್ತರ : 'ಊರಿಗೆ ಹೋಗಲ್ಲ. ಆ ಮಕ್ಳಿಗೆ (ತಾಯಿಯ ತವರಲ್ಲಿವೆ) ಮುಖ ತೋರ್ಸಲ್ಲ. ನೇರ ಧರ್ಮಸ್ಥಳಕ್ಕೆ ಹೋಗಿ... ಸನ್ಯಾಸಿಯಾಗ್ತೀನಿ... ಬಿಕ್ಷೆ ಬೇಡ್ತೀನಿ?' ತಕ್ಷಣವೇ ಒಂದು ವೈರಾಗ್ಯ ಭಾವದ ಹಾಡು:

'ತನ್ನ ಶಿಲುಬೆಯ ತಾನೆ ಹೊತ್ತನಲ ಅಂದ ಗುರು ಏಸು |
ನಿನ್ನ ಕರ್ಮದ ಹೊರೆಯ ಬಿಡದೆ ಹೊರು ನೀನು |
ಖಿನ್ನನಾಗದೆ ತುಟಿಯ ಬಿಗಿದು ಶವಭಾರವನು |
ಬೆನ್ನಿನಲೆ ಹೊತ್ತು ನಡೆ | ಹೊತ್ತು ನಡೆ |

ನಿನ್ನ ಹೆಣವನು ನೀನೇ ಹೊತ್ತು ಸಾಗಿಸಬೇಕೋ |
ಅಣ್ಣ ಬಾ ತಮ್ಮ ಬಾ ಎಂದಳುವುದೇಕೋ?
ನಿನ್ನೊಡಲೆ ಚಿತೆ, ಜಗದ ತಂಟೆಗಳೆ ಸವುದೆಯುರಿ |
ಮಣ್ಣೆ ತರ್ಪಣ ನಿನಗೆ ಮಂಕುತಿಮ್ಮಣ್ಣ |

ಈತ ಅತ್ಯಂತ ಪಶ್ಚಾತ್ತಾಪ ಪಡುತ್ತಾ ನೋವನುಭವಿಸುವುದನ್ನು ಕಂಡು ಬಂದಿಖಾನೆ ಅಧಿಕಾರಿಗಳು ಅನೇಕ ಬಾರಿ ಈತನನ್ನು ಸಮಧಾನಿಸಿದ್ದಿದೆ.

೨. ಗಂಗಾ ಬಾಯಿ : ೨೯ ರ ಹರೆಯದ ವಿವಾಹಿತೆ. ಓದು ಎರಡನೆ ತರಗತಿ. ದಾವಣಗೆರೆ ಜಿಲ್ಲೆಯ ಕೆಳವರ್ಗದ ಮಹಿಳೆ. ಗಂಡ ಕಾರ್ಮಿಕ. ಈಕೆ ಗೂಡಂಗಡಿ ಇಟ್ಟುಕೊಂಡವಳು. ವ್ಯಾಪಾರಕ್ಕಾಗಿ ತನ್ನಂಗಡಿಗೆ ಬರುತ್ತಿದ್ದ ತನ್ನದೇ ವರ್ಗದ ವ್ಯಕ್ತಿಯೊಡನೆ ಸ್ನೇಹವಾಯಿತು. ಸಂಬಂಧ ಬೆಳೆಯಿತು. ಅನೈತಿಕ ಸಂಬಂಧದ ಬಗ್ಗೆ ಗಂಡನಿಗೆ ತಿಳಿದು ಅದನ್ನಾತ ಪ್ರತಿಭಟಿಸಿದ. ಗಂಡನ ಅಡ್ಡಿ ಆಕೆಗೆ ಹಿತವೆನಿಸಲಿಲ್ಲ. ಪ್ರಿಯಕರನ ಜತೆ ಸೇರಿ ತನ್ನ ಮನೆಯಲ್ಲೇ ಆತನನ್ನು ಇರಿದು ಕೊಂದಳು. ಹೆಣವನ್ನು ತಾವು ಮಲಗುವ ಕೋಣೆಯಲ್ಲೇ ಗುಳಿ ತೋಡಿ ಹೂತು ಹಾಕಿ, ಹೂತ ಜಾಗ ಕಾಣಿಸದಂತೆ ಒಪ್ಪ ಓರಣ ಮಾಡಿ, ಅದರ ಮೇಲೆ ಮಂಚ ಹಾಕಿ ಪ್ರಿಯಕರನ ಜತೆ ಹೊಸ ಬದುಕು ಆರಂಭಿಸಿದಳು. ಮೂರು ತಿಂಗಳವರೆಗೆ ಕೊಲೆಯ ಸುದ್ದಿ ಹೊರಬರಲಿಲ್ಲ. ನಿಧಾನಕ್ಕೆ ವಿಷಯ ಗುಲ್ಲಾಯ್ತು. ಸತ್ಯ ಹೊರಬಂತು. ಪ್ರಿಯಕರನ ಜತೆ ಈಕೆಗೂ ಜೀವಾವಧಿ ಶಿಕ್ಷೆಯಾಯ್ತು. ಒಂದೇ ಬಂದಿಖಾನೆಯೊಳಗೆ ಇವರಿಬ್ಬರೂ ಶಿಕ್ಷೆ ಅನುಭವಿಸುತ್ತಿದ್ದಾರೆ. ಈಕೆಯ ಇಬ್ಬರು ಪುಟ್ಟ ಮಕ್ಕಳು ಈಕೆಯೊಂದಿಗೆ ಬಂದಿಖಾನೆಯೊಳಗಿದ್ದಾರೆ.

ನನ್ನ ಪ್ರಶ್ನೆ : 'ಬಿಡುಗಡೆಯಾದ ನಂತರ ಎಲ್ಹೋಗ್ತೀರಿ? ತಾಯಿ ಮನೆಗಾ... ನಿಮ್ಮೂರಿಗಾ...'?

'ಇಲ್ಲ ಬಿಡುಗಡೆ ಆದ್ ಕೂಡ್ಲೆ ಇಬ್ರೂ ಮದ್ವೆ ಆಗ್ತೀವಿ. (ಪ್ರಿಯಕರ) ಇಬ್ರೂ ಸೇರಿ ಏನಾದ್ರೂ ಅಂಗ್ಡಿ ಇಡ್ಬೇಕೂಂತ ಅಂದ್ಕೊಂಡಿವಿ.

'ಮಕ್ಳನ್ನ ಏನ್ಮಾಡ್ತೀರಾ...?'

'ಆಶ್ರಮಕ್ಕ ಸೇರಿಸ್ತೀವಿ...'.

(ಇನ್ನೊಂದು ಬಾರಿ ಅದೇ ಬಂದಿಖಾನೆಗೆ ಕ್ಷೇತ್ರ ಕಾರ್ಯಕ್ಕೆ ಹೋದಾಗ, ಈಕೆ ದಿನಾ ತನ್ನ ಬ್ಯಾರಕ್ಕಿಗೆ ಊಟ ತರುವ ಬೇರೆ ಪುರುಷ ಕೈದಿಯೊಬ್ಬನ ಜತೆ ಪ್ರೇಮ ವ್ಯವಹಾರ ನಡೆಸಿ ಪರಾರಿಯಾಗುವ ಹುನ್ನಾರ ನಡೆಸಿದ್ದಕ್ಕಾಗಿ ಆಕೆಯನ್ನು ಕಠಿಣ ದುಡಿಮೆಗೆ ಹಚ್ಚಲಾಗಿದೆ ಎಂಬ ಮಾಹಿತಿ ಸಿಕ್ಕಿತು.)

೩. ಶಿವಪ್ಪ ಆಚಾರಿ : ೫೫ ವರುಷದಾತ. ಚಿಕ್ಕಮಗಳೂರಿನವ. ೧೦ ವರುಷದಿಂದ ಜೀವಾವಧಿ ಶಿಕ್ಷೆ ಅನುಭವಿಸುತ್ತಿರುವವ. ಬಂದಿಖಾನೆಯಲ್ಲಿ ತನ್ನ ನಡವಳಿಕೆಯಿಂದ, ಎಲ್ಲರಿಗೂ ಪ್ರಿಯನಾದವ. ವೃತ್ತಿಯಲ್ಲಿ ಬಡಗಿ. ಮರದ ಕೆತ್ತನೆಯಲ್ಲಿ ಎತ್ತಿದ ಕೈ. ಬಂದಿಖಾನೆಯಲ್ಲೂ ಅದೇ ದುಡಿಮೆ. ಹೆಂಡತಿಯ ಅನೈತಿಕ ಸಂಬಂಧವನ್ನು ಕಂಡು ಸಿಟ್ಟಿನಿಂದ ಆಕೆಯನ್ನು ಹೊಡೆದು ಆಕೆಯ ಸಾವಿಗೆ ಕಾರಣವಾದುದನ್ನು ಆತ ಒಪ್ಪಿಕೊಳ್ಳುತ್ತಾನೆ. ಆದರೆ ಪಶ್ಚಾತ್ತಾಪದಿಂದ ಮುದುರಿ ಬಿಡುತ್ತಾನೆ. ಕೊಲೆ ಮಾಡಿ ಏನನ್ನು ಸಾಧಿಸಿದೆ ಎಂಬ ಪ್ರಶ್ನೆ ನಿರಂತರ ಆತನನ್ನು ಕಾಡುತ್ತಿದೆಯಂತೆ. ಕೊಲೆ ಮಾಡಿ ಶೂನ್ಯವನ್ನು ಕೈಯಲ್ಲಿ ಬಾಚಿದ್ದು ಅಷ್ಟೆ - ಎಂದನ್ನುತ್ತಾನೆ ಆತ. ಮಕ್ಕಳು ಆತನ ಮೇಲೆ ಜೀವವಿಟ್ಟಿದ್ದಾರಂತೆ, ಬಿಡುಗಡೆಯಾದೊಡನೆ ಅವರ ಮದ್ವೆ ಮುಗಿಸಿ, ನಂತರ ಇದೇ ವೃತ್ತಿ ಮುಂದುವರಿಸುವ ಇಚ್ಛೆ ಆತನಿಗೆ.

'ತಾಯಿಯನ್ನು ಕೊಲೆಮಾಡಿದ್ದಾರೆ ಎಂಬ ಸಿಟ್ಟಿಲ್ವೆ ಮಕ್ಕಳಿಗೆ' ಎಂಬ ನನ್ನ ಪ್ರಶ್ನೆಗೆ ಉತ್ತರ :

'ಕದಿಯಲಿಲ್ಲವೋ... ನಾನು ಕದಿಯಲಿಲ್ಲವೋ...

ಕಳ್ಳನಲ್ಲ... ಚೋರನಲ್ಲ...

ಜಾತಿಕುಲದ ಅರಸು ನಾನು... ಕದಿಯಲಿಲ್ಲವೋ...

ನಾನು ಕದಿಯಲಿಲ್ಲವೋ...'

ಇದು ಕೈದಿಗಳ ಅಭಿನಯದ 'ಮಾರನಾಯಕ' ಎಂಬ ನಾಟಕದ ಹಾಡಿನ ತುಣುಕು. ಈ ತುಣುಕು ಆತನನ್ನು ನಿರಂತರ ದಹಿಸುತ್ತಿದೆಯಂತೆ. ಪಾಪ ಮಾಡಿದ 'ಮಾರನಾಯಕ' ಪ್ರಾಯಶ್ಚಿತ್ತಕ್ಕಾಗಿ ಅರಣ್ಯವನ್ನಲೆಯುವಾಗ, ನಾಟಕದ ಒಂದು ಪಾತ್ರ 'ಕಥೆಗಾರ' ಕೇಳುತ್ತಾನೆ, 'ಅವನಿಗೆ ಪ್ರಾಯಶ್ಚಿತ್ತವೇ ಇಲ್ಲವೇ?'. ಉತ್ತರವಾಗಿ ಮತ್ತೊಬ್ಬ 'ಕಥೆಗಾರ' ಹೇಳುತ್ತಾನೆ 'ಪಾಪದ ಅರಿವು ಆತನಿಗೆ ಬಂದಾಗ, ಪಾಪಕ್ಕೆ ಪಶ್ಚಾತ್ತಾಪ ಪಟ್ಟಾಗ ಅದೇ ಪ್ರಾಯಶ್ಚಿತ್ತ'. ಈ ನಾಟಕದ ನಾಯಕನಂತೆ, ನನಗೂ ನನ್ನ ಪಾಪದ ಬಗ್ಗೆ ಪಶ್ಚಾತ್ತಾಪವಿದೆ. ಅದೇ ನನಗೆ ಪ್ರಾಯಶ್ಚಿತ್ತ. ನನ್ನ ಮಕ್ಕಳಿಗೂ ಗೊತ್ತು - ನಾನು ನಿಜ ಕೊಲೆಗಾರನಲ್ಲ - ಪರಿಸ್ಥಿತಿ ನನ್ನನ್ನು ಕೊಲೆಗಾರನನ್ನಾಗಿ ಮಾಡಿದ್ದು' ಎಂದು. ಈತ ಅತ್ಯದ್ಭುತವಾದ ಶಿಲ್ಪಿ. ಈತನ ಕಾಷ್ಠಶಿಲ್ಪಗಳು ಬಂದಿಖಾನೆ ತುಂಬ ಕುಣಿದಾಡುತ್ತಿವೆ.

**೪. ವೆಂಕಟೇಶ್ :** ೩೫ ವರುಷದ ತರುಣ. ಎಸ್.ಎಸ್.ಎಲ್.ಸಿ, ಮುಗಿದಿದೆ. ಒಳ್ಳೆಯ ಹಾಡುಗಾರ. ಬೆಂಗಳೂರು ಗ್ರಾಮಾಂತರ ಜಿಲ್ಲೆಯವ. ಬೆಂಗಳೂರಿನ ಪ್ಯಾಕ್ಟರಿಯಲ್ಲಿ ಕೆಲಸದಲ್ಲಿದ್ದವ. ಹೆಂಡತಿಯ ಅನೈತಿಕ ವ್ಯವಹಾರವನ್ನು ಕಂಡು ಆಕೆಗೆ ಅನೇಕ ಬಾರಿ ಬುದ್ಧಿ ಹೇಳಿದ್ದ. ಆಕೆಯ ಪ್ರಿಯಕರನಿಗೂ ಎಚ್ಚರಿಕೆ ನೀಡಿದ್ದ. ಹೆಂಡತಿಯ ಮೇಲೆ ವಿಪರೀತ ಪ್ರೀತಿ - ಆಕೆಯ ಮೇಲೆ ಕೈ ಎತ್ತಲಾರದಷ್ಟು, ಹೊಡೆದು ನೋಯಿಸದಷ್ಟು. ಒಂದು ದಿನ, ಕಾಖಾನೆಯಿಂದ ಕರ್ತವ್ಯದ ನಡುವೆಯೇ ಮನೆಗೆ ಬಂದಾಗ ಹೆಂಡತಿ ಆ ಪ್ರಿಯಕರನ ಜೊತೆಗಿದ್ದಳು. ಹೆಂಡತಿ ಮೇಲಿನ ಮೋಹ - ಪ್ರಿಯಕರನ ಮೇಲಿನ ರೋಷ - ಆತನನ್ನೇ ಮುಗಿಸಿ ಬಿಟ್ಟ. ಜೀವಾವಧಿ ಶಿಕ್ಷೆಯಾಯಿತು.

ಬಂದಿಖಾನೆಯಲ್ಲಿ ಈತನ ಉತ್ತಮ ನಡವಳಿಕೆಗೆ ಅಧಿಕಾರಿಗಳ ಪ್ರಶಂಸೆಯಿದೆ. ನಡೆ ನುಡಿ - ಮಾತಿನಲ್ಲೂ ಸಭ್ಯತೆ ಕಾಣುವುದರಿಂದ ಆತ ಎಲ್ಲರಿಗೂ ಇಷ್ಟದಾತ. ಆತನಲ್ಲಿ ಈ ಪ್ರಶ್ನೆ ಕೇಳಲಾಯಿತು:

ಬಿಡುಗಡೆ (ಸದ್ಯದಲ್ಲೇ) ಆದನಂತರ ಹೆಂಡ್ತಿಯನ್ನು ಮನೆಗೆ ಕರೆತರ್ತೀರಾ...?

ಉತ್ತರ : ಮತ್ತೆ ಆಕೆ ನನ್ನ ಹೆಂಡತಿ ಅಲ್ವೆ...? ನನ್ನ ಮಕ್ಕಳ ತಾಯಿಯಲ್ವೆ? ಆಕೆ ಮತ್ತೆ ತನ್ನ ಹಳೆ ಚಾಳಿ ಆರಂಭಿಸಿದ್ರೆ... ಆಕೆಯನ್ನ ಏನೂ ಮಾಡಲ್ಲ... ಆತನನ್ನು ಮುಗಿಸಿ ಮತ್ತೆ ಬರ್ತೀನಿ - ಈ ಜೈಲಿನ ಅನ್ನ ಉಣ್ಣೋದಕ್ಕೆ.

ಪ್ರಶ್ನೆ : ಈಗೆಲ್ಲಿದ್ದಾಳೆ ಆಕೆ?

ಉತ್ತರ : ನಮ್ಮಪ್ಪನ ಮನೆ (ಆಂಧ್ರ)ಯಲ್ಲಿ ಇರಿಸಿದ್ದೇನೆ. ಬಿಡುಗಡೆಯಾದೊಡನೆ ಮತ್ತೆ ಇಲ್ಲಿಗೆ (ಬೆಂಗಳೂರಿಗೆ) ಕರೆತಂದು ಬಾಳುವೆ ಮಾಡ್ತೀನಿ.

೫. ಸುಬ್ರಮಣಿ : ಬೆಂಗಳೂರು ಕೊಳಗೇರಿಯ ತರುಣ. ೨೭ರ ಹರೆಯ. ಜೀವಾವಧಿ ಕೈದಿ ಕಳೆದ ೫ ವರ್ಷದಿಂದ. ತಮಿಳುನಾಡಿನ ಮೂಲದವ. ಅಪ್ಪ ಬೆಂಗಳೂರಿಗೆ ಬಂದು ನೌಕರಿ ಸೇರಿದ ನಂತರ ಈತ ಹುಟ್ಟಿದವ. ಐದನೇ ತರಗತಿ ವರೆಗೆ ಓದು. ಈತ ಹಿರಿಯವ. ಈತನ ನಂತರ ಮೂರು ಮಕ್ಕಳಾದೊಡನೆ ಅಪ್ಪ ಇವರನ್ನೆಲ್ಲ ತೊರೆದು ಎರಡನೇ ಮದುವೆಯಾದ. ತಾಯಿ ಮಕ್ಕಳನ್ನು ಕೂಲಿನಾಲಿ ಮಾಡಿ ಸಾಕಿ ಬೆಳೆಸುತ್ತಿದ್ದಾಗಲೇ ಟಿ.ಬಿ. ರೋಗ ಬಂದು ಸಾವನ್ನಪ್ಪಿದಳು. ತಮ್ಮ - ತಂಗಿಯರನ್ನು ಸಾಕುವ ಜವಾಬ್ದಾರಿ ಸುಬ್ರಮಣಿದ್ದಾಯಿತು. ಬೆಂಗಳೂರಿನ ಕೊಳಗೇರಿಯಲ್ಲಿ ಮನೆಮಾಡಿ, ಗ್ಯಾರೇಜ್‌ನಲ್ಲಿ ಕೆಲಸಮಾಡಿ ಏನೋ ಸಾಹಸ ಮಾಡಿ ತಮ್ಮ - ತಂಗಿಯರನ್ನು ಸಾಕುತ್ತಿದ್ದ. ಅಪ್ಪ ಬಳ್ಳಾರಿಯಲ್ಲಿರುವ ಸುದ್ದಿ ತಲಪಿ ಸ್ವಂತ ಗ್ಯಾರೇಜ್ ಮಾಡಲು ಆರ್ಥಿಕ ಸಹಾಯ ಕೇಳಲೆಂದು ಬಳ್ಳಾರಿಗೆ ಹೊರಟ. ಅಪ್ಪ 'ನೀನು ನನ್ನ ಮಗನೇ ಅಲ್ಲವೆಂದ. ನನ್ನ ಹೆಂಡತಿ - ಮಕ್ಕಳು ಇವರೇ' ಎಂದು ತನ್ನ ಎರಡನೇ ಸಂಸಾರದತ್ತ ಬೆಟ್ಟು ಮಾಡಿದ. ಸುಬ್ರಮಣಿ ಹಿಂದೆ ಮುಂದೆ ನೋಡದೆ, ಒಳಗೆ ಅದುಮಿಟ್ಟಿದ್ದ ರೋಷ - ನೋವನ್ನೆಲ್ಲ ಚಾಕುವಿನಿಂದ ಇರಿಯುವ ಮೂಲಕ ಕಾರಿಕೊಂಡ. ಅಪ್ಪನ ಕೊಲೆಯನ್ನು ಒಪ್ಪಿದ - ಜೀವಾವಧಿ ಶಿಕ್ಷೆಯಾಯಿತು.

ಈತನಿಗೆ ಅಪ್ಪನನ್ನು ಕೊಲೆ ಮಾಡಿದ್ದಕ್ಕೆ ಎಳ್ಳಷ್ಟೂ ಪಶ್ಚಾತ್ತಾಪವಿಲ್ಲ. ಇಂಥ ಅಪ್ಪಂದಿರು ಬದುಕಿರಲೇ ಬಾರದು ಎಂದವನ ಅಭಿಪ್ರಾಯ.

'ನಿಮ್ಮ ತಮ್ಮ - ತಂಗಿಯರ ಗತಿಯೇನು...' ಎಂದು ಕೇಳಿದರೆ 'ನಾನು ಬಿಕ್ಷೆ ಬೇಡಿದಂತೆ ಅವರೂ ಬೇಡ್ತಾರೆ... ಬಿಡಿ.' ಎಂದು ಹೇಳುತ್ತಾ ಒಳಗೇ ನೋವುಣ್ಣುತ್ತಾನೆ. 'ಬಿಡುಗಡೆ ಆದ ನಂತ್ರ ಅಪ್ಪನ ಆಸ್ತಿಪಾಲಿಗಾಗಿ ಚಿಕ್ಕಮ್ಮನನ್ನು ಕೇಳ್ತೀರಾ?' ಎಂದು ಕೇಳಿದರೆ 'ಚಿಕ್ಕಮ್ಮನಿಗೆ ಎರಡು ಹೆಣ್ಣುಮಕ್ಕಳಿವೆ. ಆಕೆಗೆ ಯಾರು ಗತಿ? ನನ್ನಪ್ಪ ಅಷ್ಟಾದರೂ ಆಕೆಗೆ ಮಾಡಿಟ್ಟನಲ್ಲ. ದೇವರು ದೊಡ್ಡವ. ನನಗೇನೂ ಬೇಡ. ನಾನೇ ಆಕೆಗೆ ಸಹಾಯ ಮಾಡಬೇಕಾಗುತ್ತೆ. ಮುಂದೆ ಆಕೆಯ (ತಂಗಿಯರು) ಮಕ್ಕಳನ್ನು ಸಾಕುತ್ತೇನೆ' ಎನ್ನುವ ಔದಾರ್ಯದ ಮಾತುಗಳು ಕೊಲೆಪಾತಕನಾದ ಆತನಲ್ಲಿವೆ.

೬. ಚೆಲುವೇಗೌಡ : ತುಮಕೂರು ಜಿಲ್ಲೆಯ ೩೩ ರ ಹರೆಯದ ವಿವಾಹಿತ ಯುವಕ, ಕೃಷಿಕನಾಗಿದ್ದವ. ಜೀವಾವಧಿ ಶಿಕ್ಷೆಯಾಗಿ ೧೦ ವರುಷಗಳಾದವು. ಪಿ.ಯು.ಸಿ. ವರೆಗೆ ಓದು. ಅಣ್ಣನ ಮಗುವನ್ನು ಕೊಂದ ಕಾರಣದಲ್ಲಿ ಜೀವಾವಧಿ ಸೆರೆವಾಸದ ಶಿಕ್ಷೆ.

ಇವರು ಇಬ್ಬರೇ ಅಣ್ಣ ತಮ್ಮಂದಿರು. ಅಣ್ಣ ಕಾಯಿಲೆ ಬಂದು ತೀರಿಕೊಂಡ ನಂತರ ಕೃಷಿಯ ಕೆಲಸ ಈತನದಾಯಿತು. ಅಣ್ಣನಿಗೆ ಒಂದೇ ಮಗು. ಮೂರು ವರ್ಷದ ಪ್ರಾಯ. ಈತನೆಂದರೆ ಆ ಮಗುವಿಗೆ ಪ್ರಾಣ - ಈತನಿಗೂ. ಒಂದು ದಿನ ಈತ ತೋಟಕ್ಕೆ ನೀರು ಹಾಯಿಸಲೆಂದು ಹೊರಟಾಗ, ಅಣ್ಣನ ಮಗು ಆತನನ್ನು ಹಿಂಬಾಲಿಸಿತು. ಈತ ನೀರಿನ ತೋಡು ದಾಟಿ ಅತ್ತ ನಡೆದ. ಮಗೂ ತೋಡು ದಾಟಲು ಯತ್ನಿಸಿತು. ತೋಡಿನ ನೀರಲ್ಲಿ ಮುಳುಗಿ ಹೋಯ್ತು. ಅಣ್ಣನ ಆಸ್ತಿ ಲಪಟಾಯಿಸಲು ಮಗುವನ್ನು ಕೊಲೆಮಾಡಿದನೆಂದು ಅತ್ತಿಗೆಯ ತವರು ಮನೆಯವರು ಕೋರ್ಟು ಮೆಟ್ಟಿಲು ಏರಿದರು. ಈತನಿಗೆ ಜೀವಾವಧಿ ಶಿಕ್ಷೆಯಾಯಿತು.

ಬಂದಿಖಾನೆಯಲ್ಲಿ ಆತನದ್ದು ಸಭ್ಯ ನಡವಳಿಕೆ. ಮಿತ ಮಾತು. ಎಲ್ಲ ಅಧಿಕಾರಿಗಳಿಗೂ ಇಷ್ಟ. ಕೈದಿಗಳಿಗೂ. ಎರಡು ಬಾರಿ ಆತನನ್ನು ಪೆರೋಲ್ ಮೇಲೆ ಊರಿಗೆ ಕಳುಹಿಸಲಾಯ್ತು. ಒಂದು ಬಾರಿ ಊರಿಗೆ ಹೋದಾಗ - ಅತ್ತಿಗೆಯನ್ನು ಕಾಣಲು ಹೋದ. ಅತ್ತಿಗೆ, ತವರು ಮನೆಯ ಅನಾದರವನ್ನು ವಿವರಿಸಿ ಅತ್ತಳು. ತಕ್ಷಣ ಆಕೆಯನ್ನು ತನ್ನ ತಂದೆ ತಾಯಿ ಮನೆಗೆ ಕರೆತಂದು ಬಿಟ್ಟ. ಆತನ ಹೆಂಡತಿ - ತಂದೆ ತಾಯಿ 'ನಿನಗೆ ಜೀವಾವಧಿ ಶಿಕ್ಷೆಗೆ ಕಾರಣಳಾದವಳನ್ನು ಯಾಕೆ ಕರೆತಂದಿ' ಎಂದು ರಂಪ ಮಾಡಿದರು. ಈತ ಕೇಳಲಿಲ್ಲ. ಆಕೆ ವಿಧವೆ, ಮಗುವನ್ನು ಗಂಡನನ್ನು ಕಳಕೊಂಡವಳು. ಆಕೆಗೆ ಏನೂ ಅನ್ನಕೂಡದು. ಆಸ್ತಿಯಲ್ಲಿ ಆಕೆಗೂ ಅರ್ಧ ಪಾಲಿದೆ - ಎಂದು ಹೇಳಿ ಎರಡನೇ ಬಾರಿ ಊರಿಗೆ ಹೋದಾಗ ಆಕೆಗೆ ಪಾಲು ಕೊಡಿಸಿ ಮರಳಿ ಬಂದ.

'ಯಾಕೆ ಆಕೆ ನಿಮ್ಮ ಮೇಲೆ ಕೊಲೆ ಆಪಾದನೆ ಹೊರಿಸಿದಳೆಂಬ ಸಿಟ್ಟಿಲ್ಲವೇ?' ಎಂದು ಪ್ರಶ್ನಿಸಿದರೆ, 'ಆಕೆಗೆ ಮಗುವನ್ನು ಗಂಡನನ್ನು ಕಳಕೊಂಡ ಸಂಕಟ; ಜತೆಗೆ ಆಕೆಯ ತವರುಮನೆಯವರ ಒತ್ತಾಯ ಬೇರೆ. ಈಗ ಆಕೆಗೆ ತಿಳಿದಿದೆ - ತವರುಮನೆಯವರ ಬಣ್ಣ. ನಾನು ಆಕೆಗಿಂತ ೧೨ ವರ್ಷ ಸಣ್ಣಾತ. ಆದರೂ ಆಕೆ ನನಗೆ ತುಂಬಾ ಗೌರವ ಕೊಡ್ತಾರೆ. ಮುಂದೆ ಆಕೆಯನ್ನು ಸಾಕಬೇಕಾದವರು ನಾನು - ನನ್ನ ಹೆಂಡ್ತಿ!

'ನೀವು ಯಾಕಾಗಿ ಆಸ್ತಿ ಪಾಲು ಮಾಡಿದ್ರಿ. ಆಕೆ ನಂತ್ರ ಅದೂ ನಿಮಗೇ ಸಿಗೋದಲ್ವಾ' ಎಂಬ ಪ್ರಶ್ನೆಗೆ,

"ಆಕೆ ಯಾರಿಗಾದ್ರೂ ಕೊಡಬಹುದು. ಆಕೆಯ ಗಂಡನ ಸ್ವಅರ್ಜಿತ ಆಸ್ತೀನೂ ಇದೆ. ಯಾಕೆ ಮೇಡಂ - ಒಂದು ಕೊಡ ಸಮುದ್ರಕ್ಕೆ ಹೋದರೂ ಅದು ತರುವುದು ಅದು ಹಿಡಿಸುವಷ್ಟು ನೀರು ಮಾತ್ರ. ಎಷ್ಟೇ ಆಸ್ತಿ ಇರ್ಲಿ ಅದನ್ನು ನಾವು ಪೂರ್ತಿ ಅನುಭವಿಸ್ಲಿಕ್ಕೆ ಆಗಲ್ಲ. ನಾನು ಆಸ್ತಿ ಇದ್ದೂ, ಯಾವುದೇ ಅಪರಾಧ ಮಾಡದೆಯೂ ಅನುಭವಿಸಿದ್ದು ಎಷ್ಟು...! ಆಸ್ತಿಯನ್ನು ಅನುಭವಿಸ್ಲಿಲ್ಲ... ಶಿಕ್ಷೆಯನ್ನು ಮಾತ್ರ. ಬಿಡುಗಡೆಯ ನಂತರ ಮತ್ತೆ ನನ್ನ ಮೇಲೆ ಏನಾದರೂ ಅಪರಾಧ ಬಂದು ಮತ್ತೆ ನಾನು ಇದೇ ಶಿಕ್ಷೆ ಅನುಭವಿಸುವ ಭಾಗ್ಯವೂ ಬರಬಹುದು..."

**೭. ಮಂಜು ನ್ಯಾಕ :** ೨೮ ವರ್ಷದ ವಿವಾಹಿತ ತರುಣ. ದಾವಣಗೆರೆ ಜಿಲ್ಲೆಯ ಚೆನ್ನಗಿರಿಯ ಪರಿಶಿಷ್ಟಜಾತಿಯಾತ. ಎತ್ತಿನ ಗಾಡಿ ಹೊಡೆಯುವ ಕೆಲಸ. ಅರೆ ಕಿವುಡತನದ ಜತೆಗೆ ವಿಪರೀತ ಮುಗ್ಧತನದಿಂದ ಬಂದಿಖಾನೆಯಲ್ಲೆಲ್ಲ ಕೈದಿ - ಅಧಿಕಾರಿಗಳ ಗಮನಸೆಳೆದವ. ಸ್ವಲ್ಪ ಮನೋರೋಗವೂ ಇದ್ದಂತಿದೆ. ಈತನಿಗೆ ತಾನು ಯಾರನ್ನು - ಯಾಕಾಗಿ ಕೊಲೆಮಾಡಿದನೆಂಬುದೇ ತಿಳಿದಿಲ್ಲ. ಮಂಡಲ ಪಂಚಾಯತು ರಾಜಕೀಯದಲ್ಲಿ ಈತನ ಅಪ್ಪ - ಯಾರದೋ ಕೈಯಿಂದ ಹಣ ಪಡೆದು ಯಾರದೋ ಪಾರ್ಟಿಗೆ ದುಡಿದನೆಂಬ ಸಿಟ್ಟಿಗೆ, ಎದುರು ಪಾರ್ಟಿಯವರು ಕೊಟ್ಟ ಹೊಡೆತಕ್ಕೆ ಸತ್ತು ಹೋದ. ಹೆಣ ತಂದು ಇವರ ಗುಡಿಸಲಿಗೆ ಹಾಕಿ ಹೋಗುವಾಗ ಈತ ಹೆಂಡತಿಯ ಮನೆಯಲ್ಲಿದ್ದ. 'ಹೆಂಡತಿ ಹೆರಿಗೆಗೆ ಹೋದವಳು ಅಲ್ಲೇ ಇದ್ದಾಳೆ... ಇನ್ನೂ ಯಾಕೆ ಕರೆ ತರುತ್ತಿಲ್ಲ' ಎಂದು ಈತ ಎಷ್ಟೋ ತಿಂಗಳಿಂದ ಅಪ್ಪನ ಜತೆಗೆ ಆಗಾಗ್ಗೆ ಜಗಳವಾಡುತ್ತಿರುವದು - ಓಣಿಯ ಎಲ್ಲರಿಗೂ ತಿಳಿದಿದೆ. ಅಪ್ಪನ ಸಾವಿನ ಹಿಂದಿನ ದಿನ ರಾತ್ರಿ ಅಪ್ಪನ ಜತೆ ಜಗಳವಾಡಿ, ಅಪ್ಪ ಹೋಗಬೇಡವೆಂದರೂ ಹೆಂಡತಿಯ ತವರು ಮನೆಗೆ ಆಕೆಯ ಹೆರಿಗೆ ನಂತರ ಎರಡನೇ ಬಾರಿಗೆ ಹೋದ ಈತ, ಮರಳಿ ಬರುವಾಗ ಕಂಡಿದ್ದು ಅಪ್ಪನ ಹೆಣವನ್ನು. ಈತನೆ ಕೊಲೆಮಾಡಿ ಹೆಂಡತಿ ಮನೆಗೆ ಓಡಿದ್ದಾನೆ ಎಂಬ ಕೊಲೆ ಆಪಾದನೆ ಹೊತ್ತು ಕೊನೆಗೂ

ಜೀವಾವಧಿ ಶಿಕ್ಷೆಯಾಗಿ ಬಂದಿಖಾನೆ ಸೇರಿದ್ದಾನೆ. 'ಈಗ ನೀನು ಒಪ್ಕೋ... ಮತ್ತೆ ನಾವು ಸರಿಮಾಡ್ತೇವೆ' ಎಂದು ಊರ ಮುಖಂಡರು ಹೇಳಿದ್ರಂತಾ ಒಪ್ಪಿದೆ. ನಾಲ್ಕು ದಿನ ಹಣ ಕೊಟ್ರು ಮತ್ತೆ ಕೊಡ್ಲಿಲ್ಲ - ಬರ್ಲಿಲ್ಲ' ಅಂತಾ ಗೊಣಗಾಡುತ್ತಿರುತ್ತಾನೆ ಈತ ಆಗಾಗ.

ಬಲು ದಿನದ ಬೇಡಿಕೆಯಂತೆ ಬಂದಿಖಾನೆ ಆಡಳಿತ ಈತನಿಗೆ ಲೇಖಕ್ ನೋಟ್ ಬುಕ್ ಒಂದನ್ನು ನೀಡಿದೆ. ಮೂರನೇ ತರಗತಿವರೆಗೆ ಕಲಿತಿರುವ ಈತ - ಹೆಂಡತಿಯನ್ನು ಮಗುವನ್ನು ನೆನಪಿಸಿಕೊಂಡು, ತನ್ನ ನೆನಪನ್ನು, ತನ್ನ ಆ ಕ್ಷಣದ ಭಾವನೆಯನ್ನು ಅದರಲ್ಲಿ ಬರೆದಿಡುತ್ತಿದ್ದಾನೆ. ತನ್ನ ಪ್ರೀತಿಯ ಗೋಗರೆತ - ಮಗುವನ್ನು ಮಾತನಾಡಿಸುವುದು - ಅನೈತಿಕ ಸಂಬಂಧದ ಕೆಡುಕು - ತಾನು ಬಿಡುಗಡೆಯಾಗಿ (ಶಿಕ್ಷೆಯಾಗಿ ಒಂದೇ ವರ್ಷವಾಗಿದೆ - ಬಿಡುಗಡೆಗೆ ಇನ್ನೂ ೧೩ ವರ್ಷಗಳಿವೆ) ಬಂದರೆ ಹೆಂಡತಿ ಮಗುವನ್ನು ನೋಡಿಕೊಳ್ಳುವ ರೀತಿ - ಎಲ್ಲವನ್ನು ಅದರಲ್ಲಿ ಬರೆಯಲಾಗಿದೆ. ಆತನಿಗೆ ತನ್ನ ಹೆಂಡತಿಯ ಬಗ್ಗೆ ವಿಪರೀತ ಆತಂಕವಿದೆ. ಆಕೆ ಎಲ್ಲಿ ತನ್ನನ್ನು ಮರೆತು, ಅನೈತಿಕ ಸಂಬಂಧದಿಂದ ಕೈ ತಪ್ಪಿ ಹೋಗುತ್ತಾಳೋ ಎಂಬ ಭಯದಿಂದ - ನೋವಿನಿಂದ ಆತ ತತ್ತರಿಸುತ್ತಾನೆ.

ಕ್ಷೇತ್ರ ಕಾರ್ಯದ ವೇಳೆ ನನ್ನನ್ನು ಪರಿಚಯಮಾಡಿಕೊಂಡ ಆತ, ಆ ತನ್ನ ಸಂಗಾತಿ ಲೇಖಕ್ ಪುಸ್ತಕವನ್ನು ನನ್ನ ಕೈಗೆ ಕೊಟ್ಟು ಎಲ್ಲವನ್ನು ಓದಿಸಿದ. ತಾನು ಓದಿರುವ ಕತೆ - ಕಾದಂಬರಿ, ತರಂಗ, ಸುಧಾ, ಮಯೂರಗಳಿಂದ ಅನೈತಿಕತೆ ಮತ್ತು ಪ್ರೀತಿಗೆ ಸಂಬಂಧಪಟ್ಟ ಎಲ್ಲಾ ಸಾಲು - ಮಾತುಗಳನ್ನು ತೆಗೆದು ತನ್ನ ಆ ಪುಸ್ತಕದಲ್ಲಿ ದಾಖಲು ಮಾಡಿ, ರಾತ್ರಿ ಹೆಂಡತಿಗೆ ಬರೆಯುವ ಪತ್ರಕ್ಕೆ ಅದನ್ನು ಭಟ್ಟಿಯಿಳಿಸುತ್ತಿರುತ್ತಾನಂತೆ. (ವಾರಕ್ಕೆ ಕನಿಷ್ಠ ಮೂರು ಪತ್ರ) ಓದು ಬರಹವಿಲ್ಲದ ಆತನ ಹೆಂಡತಿ ಈ ಪತ್ರದ ಕಾಟ ತಡೆಯಲಾರದೆ - ತನ್ನ ಅಕ್ಕನಿಂದ ಪತ್ರ ಬರೆಸಿದ್ದಾಳೆ (ನನ್ನಿಂದಲೇ ಓದಿಸಿದ್ದ). 'ಹೀಗೆಲ್ಲ ಪತ್ರ ಬರೆಯಬೇಡ - ಓದಲು ಕಷ್ಟವಾಗುತ್ತದೆ. ಇಲ್ಲಿ ತವರು ಮನೆಯಲ್ಲಿ ಊಟಕ್ಕೆ ತತ್ವಾರ. ನೀನು ಬಿಡುಗಡೆಯಾಗಿ ಬಂದ ನಂತರ ಜತೆಯಾಗಿ - ಸುಖವಾಗಿರುವ' ಎಂದು. ಬಂದಿಖಾನೆ ಅಧಿಕಾರಿಗಳ ಮನವಿಯ ಮೇರೆಗೆ (ಆತನ ಮಾನಸಿಕ ಒತ್ತಡವನ್ನು ತಣಿಸುವುದಕ್ಕಾಗಿ) ನಾನು ಆತನ ಮಡದಿಯ ವಿಳಾಸ ಪಡೆದೆ. 'ಆಕೆಯನ್ನು ಕಂಡು - ನಿನ್ನ ಗಂಡ ನಿನಗಾಗಿ ಎಷ್ಟು ಕಾಳಜಿ ತೋರುತ್ತಿದ್ದಾನೆ. ಆತನಿಗೆ ನಿನ್ನದೇ ನೆನಪು - ಆದಷ್ಟು ಬೇಗ ಬರುತ್ತಾನೆ...' ಎಂದು ಆಕೆಯಲ್ಲಿ ಹೇಳುವೆ ಎಂದಾಗ, ನನ್ನ ಕೈಗೆ ಮಡದಿಗೆ ಬರೆದ ಪ್ರೇಮ ಪತ್ರವೊಂದನ್ನು ತುರುಕಿ ಸಾಷ್ಟಾಂಗ ಅಡ್ಡ ಬಿದ್ದು ಬಿಕ್ಕಿ ಬಿಕ್ಕಿ ಅತ್ತ.

ಆತ ಕೇಳಿದ ಕೊನೆಯ ಪ್ರಶ್ನೆ : 'ನಾನು ಇನ್ನು ಎಷ್ಟು ತಿಂಗಳು ಇಲ್ಲಿ ಇರಬಹುದು... ಬಾಯಾರೇ...'. ಜೀವಾವಧಿ ಶಿಕ್ಷೆ ಎಂದರೇನು ಎಂಬ ಕಲ್ಪನೆಯೇ ಆತನಿಗಿಲ್ಲ. ಆತ ಮುಗಿಸಿದ ಶಿಕ್ಷೆ ಕೇವಲ ಒಂದು ವರ್ಷ. ನಮ್ಮ ನ್ಯಾಯಾಂಗದ ಕಣ್ಣು ಎಷ್ಟು ಸಣ್ಣದಿದೆ.

೮. ಶ್ರೀ ರಾಜು ತಮ್ಮಣ್ಣ ರಾವುತ : ೨೭ ವಯಸ್ಸಿನ ತರುಣ. ಟ್ರಕ್ ಡ್ರೈವರ್ ಆಗಿದ್ದವ. ಶಿಕ್ಷೆಯಾಗಿ ಆರುವರ್ಷವಾಯ್ತು. ಕೊಲ್ಲಾಪುರ ಜಿಲ್ಲೆಯ, ತೆರಣ ಎಂಬ ಊರಿನವ. ಮನೆಮಾತು ಮರಾಠಿ. ಓದಿದ್ದು ಪಿಯುಸಿ ವರೆಗೆ ಮರಾಠಿಯಲ್ಲಿ. ಭೂಮಿ ವಿಚಾರಕ್ಕೆ ಕೊಲೆ ಮಾಡಿ ಜೀವಾವಧಿ ಶಿಕ್ಷೆ ಅನುಭವಿಸುತ್ತಿರುವವ.

ಈತನಿಗೆ ಶಿಕ್ಷೆ ಆದ ಕಾಲದಲ್ಲಿ ಕನ್ನಡ ಭಾಷೆ ಎಂಬುದು ಅಪರಿಚಿತ. ಬಂದಿಖಾನೆಗೆ ಬಂದೊಡನೆ ಈತ ಕನ್ನಡ - ಕಲಿತು ಓದಲಾರಂಭಿಸಿದ. ಬರೆಯಲಾರಂಭಿಸಿದ. ಕನ್ನಡ ಕಾದಂಬರಿ ಓದುತ್ತಿದ್ದಂತೆ ಈತನಿಗೆ ತಾನೂ ಕಾದಂಬರಿ ಬರೆಯಬೇಕೆಂಬ ಆಸೆ ಮೊಳೆಯತೊಡಗಿತು. ದಿನಂಪ್ರತಿ ರಾತ್ರಿ ಈತನಿಗೆ ಇದೇ ಕೆಲಸ. ಇದರ ಜೊತೆಗೆ ಇಂಗ್ಲೀಷ್ ದಿನಪತ್ರಿಕೆಗಳನ್ನು ಓದಿ, ಕೈದಿಗಳಿಗೆಲ್ಲ 'ಇಂಗ್ಲೀಷ್' ಸುದ್ದಿ ತಲುಪಿಸುವುದೆಂದರೆ ಈತನಿಗೆ ಬಹಳ ಇಷ್ಟ.

ನನ್ನ ಪರಿಚಯವಾದೊಡನೆ ತನ್ನ ಕಾದಂಬರಿಯ ಕೈ ಬರವಣಿಗೆಯ ನಾಲ್ಕು ಪುಟಗಳನ್ನು ನನಗಾಗಿ ನೆರಳಚ್ಚು ಮಾಡಿಸಿಕೊಟ್ಟ. (ಅನುಬಂಧ ೬). 'ಕನ್ನಡ ಕಲಿತು ಇಷ್ಟು ಬರೆಯುವುದೆಂದರೆ, Grate' ಎಂದ ಕೂಡಲೇ ನನ್ನ ವಿಳಾಸಕ್ಕೆ ಇಡೀಯ ಕಾದಂಬರಿ ಕಳುಹಿಸುತ್ತೇನೆಂದ. 'ಬೇಡ ಈಗ ಕಾದಂಬರಿಯ ವಸ್ತು ಹೇಳು - ನಾನು ಪ್ರಕಟವಾದ ನಂತರ ಓದುವೆ' ಎಂದಾಗ, ತಟ್ಟನೆ ವಸ್ತು ಹೇಳಿದ. 'ಆತನ ಕೊಲೆಕೇಸಿನ ಹಿಂದಿರುವ ಮುಖ್ಯ ಕಾರಣ ಒಂದು ಹೆಣ್ಣು. ಆತನಿಗಿಂತ ಹಿರಿಯ ಹೆಣ್ಣು. ಭೂಮಿಯ ತಗಾದೆಯಲ್ಲಿ ತನ್ನನ್ನು ಸಿಲುಕಿಸಿ - ತಾನು ತಪ್ಪಿಸಿಕೊಂಡಳು' ಎಂಬುದೇ ಕಥಾವಸ್ತು. ಸೆರೆಮನೆಯಲ್ಲಿ ಕರ್ನಾಟಕದ ಅನ್ನ ಉಂಡು - ಕನ್ನಡದ ಜನತೆಗೆ ಅಷ್ಟಾದರೂ ಕೊಡದಿದ್ದರೆ ಹೇಗೆ - ಎಂಬ ಒಳ್ಳೆಯ ಮನಸ್ಸು ಈ ಕೈದಿಗಿದೆ. ತಾನು ಇನ್ನೂ ಏನೇನೋ ಕನ್ನಡದಲ್ಲಿ ಬರೆಯಲಿರುವೆ - ಎಂದೂ ನನ್ನಲ್ಲಿ ಹೇಳುವಾಗ ಆತ ಕೈದಿಯಂತಿರಲಿಲ್ಲ. ಕನ್ನಡ ಬೆಳೆಸುವ ಕನ್ನಡದ ಕುವರನಂತಿದ್ದ.

೮. ಲಘುಮಣ್ಣ ಸಿದ್ದಪ್ಪ ಪರಸಣ್ಣವರ : (೨೭ ವಯಸ್ಸು), ಬಸವರಾಜ (೨೯ ವಯಸ್ಸು), ನಾಗಪ್ಪ ಸಿದ್ದಪ್ಪ ಪರಸಣ್ಣವರ (೩೧ ವಯಸ್ಸು) ಮತ್ತು ಶಿವಾನಂದ ಕಿರಿಯಪ್ಪ ಮರಿಯಪ್ಪ (೩೧ ವಯಸ್ಸು) - ಈ ನಾಲ್ವರು ಒಂದೇ ಭೂಮಿ ಕೇಸಲ್ಲಿ ಅಪರಾಧಿಗಳೆನಿಸಿ ಜೀವಾವಧಿ ಶಿಕ್ಷೆಯಾಗಿ ಒಂದೇ ಬಂದಿಖಾನೆಯಲ್ಲಿರುವವರು. ಯಾರೂ ಎರಡನೇ ಇಯತ್ತೆಗಿಂತ ಮುಂದೆ ಓದಿಲ್ಲ. ಇವರೆಲ್ಲರ ಊರು ನೇಸರ್ಗಿ. ತಮ್ಮ ಕೊಲೆಯ ಬಗ್ಗೆ ಕಿಂಚಿತ್ತು ಪಶ್ಚಾತ್ತಾಪವಿಲ್ಲ. ಈ ಕೊಲೆಯಿಂದ ಲೋಕ ಕಲ್ಯಾಣವಾದಂತಾಗಿದೆ - ಎಂಬುದು ಇವರ ಅಭಿಪ್ರಾಯ. ಎಲ್ಲರೂ ಅವಿಭಕ್ತ ಕುಟುಂಬದಿಂದ ಬಂದವರಾದ್ದರಿಂದ (ಇಬ್ಬರು ಅಣ್ಣ ತಮ್ಮಂದಿರು) ತಮ್ಮ ತಮ್ಮ ಹೆಂಡ್ರು ಮಕ್ಕಳ ಬಗ್ಗೆ ಅಷ್ಟೊಂದು ತಲೆಬೇನೆ ಇವರಿಗಿಲ್ಲ. ತಮಗೆ ವಹಿಸಿದ ದುಡಿಮೆಯನ್ನು ನಿರ್ವಂಚನೆಯಿಂದ ಮಾಡುತ್ತ ಧಾರ್ಮಿಕ ಪುಸ್ತಕಗಳನ್ನು ಓದುವುದು - ಓದಿಸಿಕೊಳ್ಳುವುದು ಇವರಿಗಿಷ್ಟ.

'ಯಾಕೆ ಧಾರ್ಮಿಕ ಪುಸ್ತಕಗಳನ್ನು ಓದ್ತೀರಿ' ಎಂದು ಪ್ರಶ್ನಿಸಿದರೆ, 'ಧರ್ಮದ ಬಗ್ಗೆ, ದೇವರ ಬಗ್ಗೆ ತಿಳಿದುಕೊಂಡರೆ ಮಾಡಿದ ಪಾಪ ಪರಿಹಾರ ಆಗ್ತದೆ - ಮನಸ್ಸಿಗೆ ನೆಮ್ಮದಿ ಬರ್ತದೆ' ಎನ್ನುವ ಉತ್ತರ. ಏನು ಪಾಪ ಮಾಡಿದ್ದೀರಿ - ಎಂದು ಕೇಳಿದರೆ, 'ನಾವು ಮಾಡಿದ್ದೇನು ಪಾಪ ಅಲ್ರೀ, ಆದ್ರ ಸತ್ರವ್ನ ಹೆಂಡ್ತಿ ಮಕ್ಕು ಶಾಪ ಹಾಕ್ತಾರ, ದುಃಖ ಪಡ್ತಾರೆ ನೋಡ್ರೀ... ಅದೇ ಮನಸ್ಸಿಗೆ ಒಂಥರಾ ಬ್ಯಾಸ್ರ'. 'ಪಾಪ ಕಳೆಯೋದಕ್ಕೆ ಬೇರೇನೂ ಮಾಡ್ತಾ ಇದ್ದೀರಿ' ಎಂದು ಕೇಳಿದರೆ, 'ಪ್ರತಿ ಶನಿವಾರ ಒಪ್ಪೊತ್ತು ಮಾಡ್ತೀವ್ರಿ' ಎನ್ನುವ ಉತ್ತರ.

ಇವರೆಲ್ಲರಿಗೂ ಟಿ.ವಿ.ಯಲ್ಲಿ ಭವಿಷ್ಯ ನೋಡುವುದು, ದಿನಪತ್ರಿಕೆ - ನಿಯತಕಾಲಿಕೆಗಳಲ್ಲಿ ಭವಿಷ್ಯವನ್ನು ಮಾತ್ರ ಓದುವುದೆಂದರೆ ತುಂಬಾ ಇಷ್ಟ. ಸ್ವಲ್ಪ ಅಕ್ಷರ ಜ್ಞಾನವಿತ್ತೆ ವಿನಾ ಓದಲು ಬಾರದ ಈ 'ಭವಿಷ್ಯ' ಚಿಂತಕರು

ಭವಿಷ್ಯ ಓದುವುದಕ್ಕಾಗಿಯೇ ಬಂದಿಖಾನೆಯಲ್ಲಿ ಓದು ಕಲಿತರಂತೆ. ಯಾಕೆ ಭವಿಷ್ಯ ಇಷ್ಟಪಡುತ್ತೀರಿ ಎಂದು ಕೇಳಿದರೆ 'ಭವಿಷ್ಯದಲ್ಲಿ, ಮಳೆ ಬೆಳೆ ವೃದ್ಧಿ - ಸಂಸಾರಕ್ಕೆ ನೆಮ್ಮದಿ, ಸಂತೋಷ ಅಂತ ಬಂದ್ರ ನಮಗೂ ಸಂತೋಷ. ನಮ್ಮ ಬಿಡುಗಡೆ ಬಗ್ಗೆ (ಶೀಘ್ರ ಕಷ್ಟ ನಿವಾರಣೆ) ಭವಿಷ್ಯದಲ್ಲಿ ಏನಾದ್ರೂ ಬಂದ್ರೂ ನಮ್ಗ ತುಂಬಾ ಸಂತೋಷವಾಗುತ್ತೆ'. 'ಭವಿಷ್ಯ'ದಲ್ಲಿ ಬಿಡುಗಡೆ ಅಂತಾ ಬಂದ್ರೆ ನಿಮ್ಗೆ ಬಿಡುಗಡೆ ಆಗಿ ಬಿಡುತ್ತಾ? ಜೀವಾವಧಿ ಶಿಕ್ಷೆಯಲ್ಲಿ ಈಗ ೫ ವರ್ಷವಷ್ಟೇ ಮುಗಿಸಿದ್ದೀರಿ ಇನ್ನು ಬಾಳ ವರ್ಷದ ಸಜೆ ಇದೆಯಲ್ವಾ' ಅಂತಾ ಕೇಳಿದ್ರೆ 'ಕೆಲವೊಮ್ಮೆ ಸರಕಾರಕ್ಕೆ ಬಿಡ್ಬೇಕು ಅಂತಾ ಅನಿಸಿದ್ರೆ ಬಿಟ್ಟು ಬಿಡುತ್ತೆ. ಜೀವಾವಧಿಯಾದವರನ್ನು ಒಮ್ಮೆ ೭ ವರ್ಷಕ್ಕೇ ಬಿಟ್ರಂತೆ'. ಇವರು ತಮಗೆ ವಿಧಿಸಿದ ಜೀವಾವಧಿ ಶಿಕ್ಷೆಯನ್ನು ತೀರಾ ಸಹಜವಾದ ಮನೋಭಾವದಲ್ಲಿ ಯಾವುದೇ ಆತಂಕವಿಲ್ಲದೆ ಕೃಷಿ ಕೆಲಸದಲ್ಲಿ ಕಳೆಯುತ್ತಿದ್ದಾರೆ.

**೯. ಶೇಷಗಿರಿ :** ೫೦ ರ ವಯಸ್ಸಿನ ಜೀವಾವಧಿ ಕೈದಿ. ವಿವಾಹಿತ - ಎರಡು ಮಕ್ಕಳ ತಂದೆ. ಗಟ್ಟದ ಮೇಲಿನ ಜಿಲ್ಲೆಯಾತ. ಮೇಲ್ವರ್ಗ ಕುಟುಂಬದಿಂದ ಬಂದ ಈತ ಅಂತರ್ಮುಖಿ. ಮಿತಭಾಷಿ ಜತೆಗೆ ಮಹಾ ಪ್ರತಿಭಾವಂತ ಕೂಡಾ. ತನ್ನ ಊರಿಗೆ ಸಮೀಪವಿರುವ ನಗರವೊಂದರ ಪಾಲಿಟೆಕ್ನಿಕ್‌ನಲ್ಲಿ ಪ್ರಾಂಶುಪಾಲನಾಗಿದ್ದಾತ. ಮಿಲಿಟ್ರಿಯಲ್ಲಿದ್ದ ಅಪ್ಪನಿಂದ ಆತ ಪಡೆದದ್ದು ಶಿಸ್ತು ಮತ್ತು ನೇರ ನಡವಳಿಕೆ. ಜೀವಾವಧಿ ಶಿಕ್ಷೆ ಅನುಭವಿಸಿ ೧೦ ವರ್ಷ ಕಳೆದಿದೆ. ಬಂದಿಖಾನೆಯಲ್ಲಿ ಕೈದಿಗಳ ಪತ್ರವ್ಯವಹಾರ, ಅರ್ಜಿ ಬರೆಯುವಿಕೆಗೆ ಈತನ ಇಂಗ್ಲೀಷ್ ಭಾಷೆ, ಬುದ್ಧಿವಂತಿಕೆ - ಪ್ರತಿಭೆಗಳೆಲ್ಲ ಮುಲಾಜಿಲ್ಲದೆ ಬಳಕೆಯಾಗುತ್ತಿದೆ.

ತವರಿಗೆ ಹೋದ ಮಡದಿ ತಿಳಿಸಿದ ಸಮಯಕ್ಕೆ ಹಿಂದಿರುಗಲಿಲ್ಲವೆಂಬ ಸಿಟ್ಟಿಗೆ, ತಾನೇ ಸ್ವತಃ ಆಕೆಯನ್ನು ಕರೆತರಲು ಹೋದಾಗ ಗಂಡ - ಹೆಂಡಿರ ಮಧ್ಯೆ ಮಾತಿಗೆ ಮಾತು ಬೆಳೆಯಿತು. ಇವರಿಬ್ಬರ ಮಧ್ಯೆ ಸಂಧಾನಕ್ಕೆಂದು ಬಂದ ಅತ್ತೆಯನ್ನು ಈತ ಆವೇಶದಿಂದ ದೂಡಿಬಿಟ್ಟ. ಅರೆಯುವ ಕಲ್ಲಿನ ಮೇಲೆ ಬಿದ್ದ ಅತ್ತೆ ಮೇಲೇಳಲಿಲ್ಲ. ಅತ್ತೆಯನ್ನು ಕೊಂದ ತಪ್ಪಿಗೆ ಅಳಿಯನಿಗೆ ನ್ಯಾಯಾಂಗ, ಜೀವಾವಧಿ ಶಿಕ್ಷೆ ವಿಧಿಸಿತು. ಬಂದಿಖಾನೆಗೆ ಕಾಲಿಟ್ಟಗಿನಿಂದ ಈತನ ಮನದೊಳಗೆ ಒಂದು ವಿಚಾರದ ಮಂಥನ ನಡೆಯುತ್ತಿದೆ. 'ಇದು ಉದ್ದೇಶಪೂರಕವಾದ ಕೊಲೆಯಲ್ಲ - ತಾನು ಆಕೆಯ ಸಾವಿಗೆ ಕಾರಣನಷ್ಟೇ. ನ್ಯಾಯಾಂಗ ಇದನ್ನು ಪರಿಗಣಿಸದೆ ಕೊಲೆಗಾರನೆಂದೇ ಪಟ್ಟ ಕಟ್ಟಿ ಜೀವಾವಧಿ ಶಿಕ್ಷೆ ನೀಡಿತು ನಿಜ. ಆದರೆ ಇದೇ ನ್ಯಾಯಾಂಗ, ಉದ್ದೇಶಪೂರ್ವಕವಾಗಿ ಕೊಲೆ ಮಾಡುವ ಪಾತಕಿಗಳನ್ನು, ಸರಿಯಾದ ಸಾಕ್ಷಿ ಇಲ್ಲವೆಂಬ ಕಾರಣ ಹೇಳಿ ಬಿಟ್ಟು ಬಿಡುತ್ತದಲ್ಲ! ನ್ಯಾಯಾಧೀಶನಿಗೂ ತಿಳಿದಿರುತ್ತದೆ - ಆತ ಪಾತಕಿ ಎಂದು. ಆದರೆ ಸಾಕ್ಷಿ ಇಲ್ಲ ಎಂಬ ಕಾರಣಕ್ಕೆ ಕೇಸು ಖುಲಾಸೆಯಾಗಿರುತ್ತದೆ. ನ್ಯಾಯಾಂಗ ಎಲ್ಲರನ್ನು - ಎಲ್ಲ 'ಅಪರಾಧಿ'ಗಳನ್ನು ಒಂದೇ ತಕ್ಕಡಿಯಲ್ಲಿಟ್ಟು ಯಾಕೆ ತೂಗುತ್ತಿಲ್ಲ? ಯಾಕೆ ಕನಿಷ್ಠ ಶಿಕ್ಷೆಯನ್ನಾದರೂ ಕೊಡುತ್ತಿಲ್ಲ. ಭಾರತೀಯ ದಂಡ ಸಂಹಿತೆಯಲ್ಲಿ ಬದಲಾವಣೆ ತರಲೇಬೇಕಾಗಿದೆ ಎಂಬ ವಿಚಾರವನ್ನು ಈತ ನಿರಂತರ ಚಿಂತಿಸಿ ಮೂಳೆಚಕ್ಕಳವಷ್ಟೇ ಈತನ ದೇಹದ ಆಸ್ತಿಯಾಗಿದೆ. ಎಲ್ಲರಲ್ಲೂ ಅದೇ ವಿಚಾರವನ್ನು ಪ್ರಸ್ತಾಪಿಸಿ ಉತ್ತರ ಸಿಗದೆ ಸುಸ್ತಾಗಿದ್ದಾನೆ.

ಈತ ಬಂದಿಖಾನೆಯ ಆಸ್ಪತ್ರೆಯಲ್ಲಿ ಕೈದಿ ಕೌಂಪೌಡರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾನೆ. ವೈದ್ಯರಿಗೆ

ಈತನೆಂದರೆ ಅಚ್ಚು - ಮೆಚ್ಚು. ವೈದ್ಯರಿಲ್ಲದ ದಿನ ಈತನೇ 'ವೈದ್ಯ'. ವೈದ್ಯರಲ್ಲೂ ತನ್ನನ್ನು ಕಾಡುವ ವಿಚಾರವನ್ನು ಹೇಳಿ, ಅವರಿಂದ ವಿವರಣೆ ಕೇಳಿ ಅವರನ್ನು ಸುಸ್ತುಗೊಳಿಸಿದ್ದಾನೆ. ಸದ್ಯಕ್ಕೆ ಇಂಗ್ಲೀಷ್ ಕಾದಂಬರಿಗಳನ್ನು ಮಾತ್ರವೇ ಓದುತ್ತಿದ್ದು, ಇನ್ನಷ್ಟು ಇಂಗ್ಲೀಷ್ ಕಾದಂಬರಿಗಳು ತನ್ನ ಬಂದಿಖಾನೆಗೆ ಬೇಕೆಂದು ಅಧಿಕಾರಿಗಳಲ್ಲಿ ಬೇಡಿಕೆ ಇಟ್ಟಿದ್ದಾನೆ. ಇಂಗ್ಲೀಷ್ ಕಾದಂಬರಿಗಳು, ಯಂಡಮೂರಿಯ ಕನ್ನಡ ಅನುವಾದಿತ ಕಾದಂಬರಿಗಳು, ಒಂದಷ್ಟು ಬೀಡಿ ಹಾಗೂ ಆತನನ್ನು ದಹಿಸುತ್ತಿರುವ ವಿಚಾರ - ಚಿಂತೆಗಳೇ ಆತನ ಆಸ್ತಿಯಾಗಿವೆ.

ಮಿತ ಭಾಷಿಯಾಗಿ ನೀಡಿದ ಕೆಲಸವನ್ನು ಶಿಸ್ತಾಗಿ ಮಾಡುವ, ಸಭ್ಯ ನಡತೆಯುಳ್ಳ ಈತನೆಂದರೆ ಬಂದಿಖಾನೆಯಲ್ಲಿ ಅಧಿಕಾರಿ ಸಹಿತರಾಗಿ ಎಲ್ಲರಿಗೂ ಅಚ್ಚುಮೆಚ್ಚು. ತನ್ನಲ್ಲಿರುವ ವಿದ್ಯೆಯನ್ನು ಕೈದಿಗಳ ಕಲ್ಯಾಣಕ್ಕಾಗಿ ಬಳಸುತ್ತೇನೆಂಬ ಪಣ ತೊಟ್ಟಂತೆ ಸದಾ ವಕೀಲರಿಗೆ ಸಲಹೆ ಕೊಡುವುದು, ಮನವಿ ಪತ್ರ - ಬರೆಯುವುದೂ ಈತನ ಇಷ್ಟದ ಕೆಲಸ.

ನಿಮ್ಮ ಎಂ.ಇ. ಡಿಗ್ರಿ ಹೀಗೆ ಬಳಕೆಯಾಗುತ್ತಲ್ಲಾ ಎಂದು ಕೇಳಿದರೆ, 'ಕನಸ ಕಾನನದಿ ಬೆಳಕು ಎಷ್ಟಿದ್ದರೇನು

ಬೆಳಗುವುದೇ ಅದು ನನ್ನ ಮುಖವ !' ಎಂಬ ಉತ್ತರ.

ತನ್ನಲ್ಲಿ ಆ ವಿದ್ಯೆ ಇದ್ದೂ ಏನು ಪ್ರಯೋಜನವಾಯಿತು ಎಂಬ ಅರ್ಥವಿದ್ದಿರಬಹುದು.

**೧೦. ವಾಣಿ :** ಆಂಧ್ರದ ನಂದ್ಯಾಲದವಳು. ೨೮ರ ವಯಸ್ಸು. ಸುಂದರಿ ಜತೆಗೆ ಶ್ರೀಮಂತ ಮನೆತನದವಳು. ಗಂಡನನ್ನು ಕೊಲೆಮಾಡಿದ ಅಪರಾಧಕ್ಕೆ ಈಗ ಜೀವಾವಧಿ ಶಿಕ್ಷೆ. ಇಲ್ಲಿಗೆ ಶಿಕ್ಷೆ ಅನುಭವಿಸಲು ಬಂದಂದಿನಿಂದ, ತನಗೆ ಶಿಕ್ಷೆಯಾಗಿದೆ - ಅದೂ ಜೀವಾವಧಿ ಶಿಕ್ಷೆ ಎಂಬ ಬಗ್ಗೆ ಕಿಂಚಿತ್ತೂ ನೋವಿಲ್ಲದೆ ಚಿಗರೆಯಂತೆ ಕುಣಿಯುತ್ತಿರುತ್ತಾಳೆ. ಈಕೆಯ ಈ ಗುಣಕ್ಕಾಗಿ ಈಕೆಯ ಮೇಲೆ ವಾರ್ಡನ್ (ಮಹಿಳೆಯರು)ಗಳ ಕಣ್ಣು ದೃಷ್ಟಿ ಸ್ವಲ್ಪ ಹೆಚ್ಚೆ ಇದ್ದ ಹಾಗಿದೆ. ಬಂದಿಖಾನೆಯ ಎಲ್ಲ ಪುರುಷ ಅಧಿಕಾರಿಗಳನ್ನು ಅವಕಾಶ ಸಿಕ್ಕಾಗಲೆಲ್ಲ ಗೌರವಪೂರ್ವಕವಾಗಿ ಆದರೆ ತೀರಾ ಸಲುಗೆಯಿಂದ ಮಾತನಾಡಿಸುತ್ತಾಳೆ. ವಿದ್ಯಾವಂತೆ, ಜೊತೆಗೆ ಶ್ರೀಮಂತರ ಹುಡುಗಿ ಎಂಬ ಕಾರಣಕ್ಕಾಗಿ ಅಧಿಕಾರಿಗಳೂ ಆಕೆಯನ್ನು ನಿರ್ಲಕ್ಷ್ಯದಿಂದ ಮಾತನಾಡಿಸುತ್ತಿಲ್ಲ.

ಈಕೆ ಕಾಲೇಜು ಮೆಟ್ಟಲು ಹತ್ತುವಷ್ಟರಲ್ಲಿ ರಜೆಗೆಂದು ಊರಿಗೆ ಬಂದ ಸೇನಾಧಿಕಾರಿಯೊಬ್ಬನ ಪರಿಚಯವಾಯ್ತು. ಪರಿಚಯ ಪರಿಣಯಕ್ಕೆ ತಿರುಗಿತು. ಎರಡೂ ಮನೆಯವರ ಮಧ್ಯಸ್ಥಿಕೆಯಿಂದ ಮದುವೆ ನಡೆದು, ವಾರವೊಂದರಲ್ಲೆ ಸೇನಾಧಿಕಾರಿ ಸೇನೆಗೆ ವಾಪಸಾದ. ತಾನು ಬೆಂಗಳೂರಿಗೆ ವರ್ಗಮಾಡಿಸಿಕೊಂಡು ಬರುವೆನೆಂದು, ವಾಣಿಯನ್ನು ದೂರದೂರಿಗೆ ಆತ ಕರೆದೊಯ್ಯಲಿಲ್ಲ. ವಾಣಿ ಕಾಲೇಜು ಶಿಕ್ಷಣ ಮುಂದುವರಿಸಿದ್ದಳು. ಎರಡು ವರುಷ ಕಳೆದರೂ ಗಂಡನ ಆಗಮನವಿಲ್ಲ. ಈ ಅವಧಿಯಲ್ಲಿ ವಾಣಿಯ ಸ್ನೇಹವನ್ನು ಮತ್ತೊಬ್ಬ ಪುರುಷ ಸಂಪಾದಿಸಿದ್ದ. ಆ ಸ್ನೇಹ - ಸಲಿಗೆ ಬಲಿಯಿತು. ಕೋಟೆ ಸೂರೆ ಹೋದ ಮೇಲೆ ದಿಡ್ಡಿ ಬಾಗಿಲು ಹಾಕಿದರೆನ್ನುವಂತೆ ವಾಣಿಯ ಗಂಡ ಮೂರು ವರುಷದ ನಂತರ ಬೆಂಗಳೂರಿಗೆ ವರ್ಗಾವಣೆ ಪಡೆದು ಬಂದು ಆಂಧ್ರದಿಂದ ವಾಣಿಯನ್ನು ಕರೆತಂದ. ಇಬ್ಬರೂ ಬೆಂಗಳೂರಲ್ಲಿ ವಾರವೊಂದು ಕಳೆದಿರಬೇಕಷ್ಟೆ. ಒಂದು ದಿನ ಮುಂಜಾನೆ ವಾಕಿಂಗ್ ಮುಗಿಸಿ

ಮನೆಗೆ ಬಂದ ಸೇನಾಧಿಕಾರಿಯ ಕೊಲೆಯಾಯ್ತು. ಆ ಕೊಲೆ ಮಾಡಿದಾತ ಬೇರೆ ಯಾರೂ ಅಲ್ಲ. ವಾಣಿಯ ಗೆಳೆಯ. ವಾಣಿಯ ನಿರ್ದೇಶನದ ಮೇಲೆ ಆ ಕೊಲೆ ನಡೆದಿದೆಯೆಂದು ಸೇನಾಧಿಕಾರಿಯ ಕುಟುಂಬದವರು ಕೊಲೆನಡೆದ ಎರಡು ತಿಂಗಳ ನಂತರ ವಾಣಿಯ ಮೇಲೆ ಅಪಾದನೆ ಹೊರಿಸಿ ಕೋರ್ಟು ಮೆಟ್ಟಿಲು ಹತ್ತಿಸಿದರು. ವಾಣಿಯ ಗೆಳೆಯ ಶಿಕ್ಷೆಯಿಂದ ತಪ್ಪಿಸಿಕೊಂಡ. ವಾಣಿಗೆ ಸೆಷ್ಯನ್ ನ್ಯಾಯಾಲಯ ಜೀವಾವಧಿ ಶಿಕ್ಷೆ ವಿಧಿಸಿತು. ಆದರೆ ವಾಣಿಯ ಕುಟುಂಬವೂ ಶ್ರೀಮಂತ ಕುಟುಂಬವೇ. ಅವರು ಹೈಕೋರ್ಟ್‌ನ ಮೆಟ್ಟಿಲೇರಿದರು. ಜೀವಾವಧಿ ಶಿಕ್ಷೆಗೊಳಗಾದ ವಾಣಿಗೆ ಆಕೆಯ ಅಣ್ಣಂದಿರು ವಚನವಿತ್ತರು - ಹೈಕೋರ್ಟ್‌ಲ್ಲಿ ಹೇಗಾದರೂ ಮಾಡಿ 'ನ್ಯಾಯ'ವನ್ನು ಹಣಕೊಟ್ಟು ಪಡೆಯುತ್ತೇವೆ; ನ್ಯಾಯ ಗೆದ್ದರೆ ನಿನ್ನ ಗಂಡನ ಪಾಲಿನ (ಆಕೆಯ ಗಂಡನ ಮನೆಯವರು ಭಾರೀ ಶ್ರೀಮಂತರು) ಆಸ್ತಿ ನಿನ್ನದೇ ಎಂದು ಸಮಜಾಯಿಷಿ ಹೇಳಿ ಆಕೆಯನ್ನು ಸೆರೆಮನೆಯ ಶಿಕ್ಷೆಗಾಗಿ ದುಃಖಿತರಾಗಿಯೆ ಕಳುಹಿಸಿಕೊಟ್ಟರು.

ವಾಣಿ ಶಿಕ್ಷೆಗಾಗಿ ಜೈಲಿಗೆ ಬಂದವಳೆಂಬಂತೆ ವರ್ತಿಸದೆ, ನೆಂಟರ ಮನೆಗೆ ಬಂದವಳಂತೆ ವರ್ತಿಸುವುದು ಇಡೀಯ ಸಿಬ್ಬಂದಿವರ್ಗಕ್ಕೆ ಅಚ್ಚರಿಯ ವಿಷಯ. ಬಂದಿಖಾನೆಯಲ್ಲಿ ಲಭ್ಯವಿರುವ ಸೌಲಭ್ಯದಲ್ಲೇ ಅತ್ಯಂತ ನೀಟಾಗಿ ಸುಂದರವಾಗಿ ಕಾಣಿಸಲು ಯತ್ನಿಸುವುದು, ಮನೆಯವರಿಂದ ಸೌಂದರ್ಯ ಸಾಧನಗಳನ್ನು ತರಿಸಿ ಮೇಕಪ್ ಮಾಡಿಕೊಳ್ಳುವುದು.... ಒಟ್ಟಿನಲ್ಲಿ ಸಂತೋಷದಿಂದಿರಲು ಪ್ರಯತ್ನಿಸುವ ಆಕೆಯ ಮನಸ್ಥಿತಿ ಎಲ್ಲರಿಗೂ ಸೋಜಿಗದ ಸಂಗತಿ. ಹದಿನೈದು ದಿನಗಳಿಗೊಮ್ಮೆ ಹುಬ್ಬು ತಿದ್ದುವುದು (ಹೈಬ್ರೊ ಪ್ಲಕ್ಕಿಂಗ್) , ದಿನಾ ಕಣ್ಣಿಗೆ ಮಸ್ಕರಾ ಹಾಕುವುದು, ಫೌಂಡೇಶನ್ ಕ್ರೀಂ, ನೈಲ್ ಪಾಲೀಶ್ ಹಾಕುವುದನ್ನು ಮಾಡುವುದಲ್ಲದೆ, ಇತರ ಮಹಿಳೆಯರಿಗೂ ಸೌಂದರ್ಯವರ್ಧನೆ ಬಗ್ಗೆ ಮಾಹಿತಿ ನೀಡುತ್ತಾಳೆ. ಬಂದಿಖಾನೆಯಲ್ಲಿ ಅಪರಾಧಿಗಳಿಗೆ ನೀಡುವ ಬಿಳಿ ಸೀರೆ ಮತ್ತು ರವಿಕೆಗೆ ಸ್ವಲ್ಪ ಹೆಚ್ಚು 'ಉಜಾಲಾ' ನೀಲಿ ಹಾಕಿ ಅದನ್ನು ನಸು ನೇರಳೆ ಅಥವ ನಸು ಗುಲಾಬಿ ಬಣ್ಣಕ್ಕೆ ತಿರುಗಿಸಿ, ಸೀರೆಯ ರಂಗು ಬದಲಿಸಿ ಉಡುವುದನ್ನು ಆಕೆ ಇತರರಿಗೂ ಕಲಿಸುತ್ತಿದ್ದಾಳೆ. ಭವಿಷ್ಯದ ಜೀವನದ ಬಗ್ಗೆ ಅತ್ಯಂತ ಪ್ರೀತಿ ಇರಿಸಿಕೊಂಡ ರಾಜ್ಯದ ಬಂದಿಖಾನೆಗಳಲ್ಲಿರುವ ಏಕೈಕ ಮಹಿಳಾ ಕೈದಿಯೆಂದರೆ ಈಕೆಯೊಬ್ಬಳೇ ಎಂದೆನಿಸುತ್ತದೆ (ಕ್ಷೇತ್ರಕಾರ್ಯದ ಅನುಭವದಂತೆ).

ಆಕೆಯ ಕೊಲೆ ಅಪರಾಧದ ಬಗ್ಗೆ ಪ್ರಶ್ನಿಸಿದರೆ 'ನಿಮಗೆ ಅದನ್ನು ಕಟ್ಟಿಕೊಂಡು ಏನಾಗಬೇಕಿದೆ? ನಾನು ಕೊಲೆ ಮಾಡಿಲ್ಲವಾದರೂ ನನಗೆ ಶಿಕ್ಷೆಯಾಗಿದೆ, ನೀವು ಈ ಕಥೆ ಕೇಳಿ ಆ ಶಿಕ್ಷೆ ರದ್ದುಪಡಿಸ್ತೀರಾ....?' ನಾನು ವಾಣಿಯ ಆ ಕೋಪಕ್ಕೆ ಕಾರಣ ಕೆದಕಿದರೆ, ಅಧಿಕಾರಿಗಳು ಅಂದರು - 'ಕಳೆದ ವಾರ ನಮ್ಮ ವಾರಪತ್ರಿಕೆಯೊಂದು ಈಕೆಯ ಬಗ್ಗೆ ತುಂಬಾ ಕೆಟ್ಟದ್ದಾಗಿ ಬರೆದಿದೆ. ಅದಕ್ಕಾಗಿ ವ್ಯಗ್ರಗೊಂಡಿದ್ದಾಳೆ. ನೀವು ಪೇಪರಿನವರು ಎಂದು ಆಕೆ ತಪ್ಪು ತಿಳಿದುಕೊಂಡಿದ್ದಾಳೆ ಎಂದು ಹೇಳಿ ವಾಣಿಗೆ ಸಮಜಾಯಿಷಿ ಹೇಳಿದರು. ಗಂಡನ ಆಸ್ತಿ ನನಗೆ ಸಿಗಬಾರದು ಎನ್ನುವ ಕಾರಣಕ್ಕೆ ನನ್ನ ಗಂಡನ ಮನೆಯವರು ಕೊಲೆ ನಡೆದ ಎಷ್ಟೋ ದಿನಗಳ ನಂತರ ಬಹಳ ಯೋಚಿಸಿ ಕೋರ್ಟು ಮೆಟ್ಟಲು ಹತ್ತಿಸಿ ನನಗೆ ಈ ಶಿಕ್ಷೆ ಕೊಡಿಸಿದ್ದಾರೆ ಎಂದು ಹೇಳುವಾಗ ಆಕೆಗೆ ಅಳು ಉಕ್ಕಿ ಬರುತ್ತದೆ. ಬಿಡುಗಡೆಯಾದ ನಂತರ ಶಿಕ್ಷಣ ಮುಂದುವರಿಸ್ತೀರಾ, ಮತ್ತೆ ಮದುವೆಯಾಗ್ತೀರಾ ಎಂಬ ಪ್ರಶ್ನೆಗೆ ಉತ್ತರ : ಮದುವೆಯಾಗಲ್ಲ...., ಶಿಕ್ಷಣವನ್ನೂ ಮುಂದುವರೆಸಲ್ಲ. ಗಂಡನ ಮನೆಯವರಿಂದ ಪಡೆಯುವ ಆಸ್ತಿಯಿಂದ ಒಂದು ಶಾಲೆ ಪ್ರಾರಂಭಿಸಿ, ಅದರ ಮ್ಯಾನೇಜ್‌ಮೆಂಟ್ ನಡೆಸುತ್ತೇನೆ.

ನಿಮ್ಮ ಜೀವಾವಧಿ ಶಿಕ್ಷೆ ಮುಗಿಯುವುದಕ್ಕೆ ಇನ್ನೆಷ್ಟು ವರ್ಷ ಬಾಕಿ ಇದೆ? ಎಂಬ ನನ್ನ ಪ್ರಶ್ನೆಗೆ ಉತ್ತರ: 'ಇಲ್ಲಿಗೆ ನಾನು ಬಂದು ಎರಡು ವರ್ಷ ಕಳೆದಿದೆಯಷ್ಟೆ. ಹೈಕೋರ್ಟಿನಲ್ಲಿ ನನ್ನ ಪರ ವಾದ ಮಾಡಲು ವೆರಿ ಸ್ಟ್ರಾಂಗ್ ವಕೀಲರನ್ನಿಟ್ಟಿದ್ದೇವೆ. ಆ ವಕೀಲರು ಇನ್ನೆರಡು ತಿಂಗಳಲ್ಲೇ ಇಲ್ಲಿಂದ ನನ್ನ ಜಾಗ ಖಾಲಿ ಮಾಡಿಸ್ತಾರಂತೆ'.

ವಾಣಿಯ ನಿರೀಕ್ಷೆಯಂತೆ ಆಕೆಯ ವಕೀಲರು ಎರಡು ತಿಂಗಳಲ್ಲೇ ಹೈಕೋರ್ಟ್ ಕೇಸು ಗೆದ್ದುಬಿಟ್ಟರು. ನಾನು ಮತ್ತೊಮ್ಮೆ ಕ್ಷೇತ್ರಕಾರ್ಯಕ್ಕೆ ಹೋದಾಗ ವಾಣಿ ಅಲ್ಲಿರಲಿಲ್ಲ. ಬಿಡುಗಡೆಯಾಗಿದ್ದಳು. ವಾಣಿ ಈಗ ಪುಟ್ಟ ಮಕ್ಕಳ ಶಾಲೆ ನಡೆಸುತ್ತ ತಾನೇ ಟೀಚರ್ ಆಗಿ ಮಕ್ಕಳ ಲೋಕದಲ್ಲಿ ನೆಮ್ಮದಿಯಾಗಿದ್ದಾಳಂತೆ.

❑ ❑

# ೮

# ಸಮಾರೋಪ

ಸೆರೆವಾಸ ಶಿಕ್ಷೆಯಾಗಿ ಬಂದಿಖಾನೆಗೆ ತಳ್ಳಲ್ಪಟ್ಟ ಅಪರಾಧಿಗಳಿಗೆ ಅಲ್ಲಿ 'ಕೈದಿ ಬದುಕ'ನ್ನು ಉಳಿಸುವುದರ ಜೊತೆಗೆ ಅವರೊಳಗಿನ ಅಪರಾಧ ಮನೋಭಾವವನ್ನು ತಿದ್ದಿ, ಅವರನ್ನು ಸಮಾಜದ ಸತ್ಪ್ರಜೆಗಳನ್ನಾಗಿ ರೂಪಿಸುವ ಹಾಗೂ ಬಿಡುಗಡೆಯ ನಂತರದಲ್ಲಿ ಅವರಿಗೆ ಮರುನೆಲೆಯನ್ನು ಕಲ್ಪಿಸಿಕೊಡುವ ನಿಟ್ಟಿನಲ್ಲಿ ರಾಜ್ಯ ಬಂದಿಖಾನೆ ಇಲಾಖೆ ಹತ್ತು ಹಲವು ಯೋಜನೆ - ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದೆ. ಕೈದಿಗಳ ವ್ಯಕ್ತಿತ್ವ ವಿಕಸನ ಅಥವಾ ಮನಪರಿವರ್ತನೆಯಂತಹ ಮಹಾಸಾಧನೆಗಾಗಿ ರಾಜ್ಯ ಬಂದಿಖಾನೆ ಇಲಾಖೆ ಆಯ್ದುಕೊಂಡ ಪ್ರಮುಖ ಯೋಜನೆಯೆಂದರೆ ವಿವಿಧ ಜ್ಞಾನಸಂವಹನ ಮಾಧ್ಯಮಗಳನ್ನು ಕೈದಿಗಳ ಬಳಕೆಗೆ ಒದಗಿಸುವುದು. ಸದ್ಯ ರಾಜ್ಯದ ಬಂದಿಖಾನೆಗಳಲ್ಲಿ ಲಭ್ಯವಿರುವ ಜ್ಞಾನಸಂವಹನ ಮಾಧ್ಯಮಗಳು, ತಮ್ಮ ಉದ್ದೇಶಿತ ಗುರಿಸಾಧನೆಗಾಗಿ ಹೇಗೆ... ಎಷ್ಟು ಪರಿಣಾಮಕಾರಿಯಾಗಿ ಕಾರ್ಯನಿರ್ವಹಿಸುತ್ತಿವೆ. ಈ ಕಾರ್ಯನಿರ್ವಹಣೆಯ ಹಾದಿಯಲ್ಲಿ ಎದ್ದುಕೂತಿರುವ ಲೋಪದೋಷಗಳು ಯಾವುವು? ಅವುಗಳನ್ನು ಬಗೆಹರಿಸಿ... ಗುರಿ ಮುಟ್ಟುವ ಪರಿ ಹೇಗೆ - ಎಂಬ ಅಂಶಗಳನ್ನು ಮಾನವೀಯ ನೆಲೆಯಲ್ಲೂ ಗ್ರಹಿಸಿಕೊಂಡು ಅಧ್ಯಯನ ನಡೆಸುವುದು ತುಂಬಾ ಆಸಕ್ತಿಪೂರ್ಣವಾದುದು.

ಪ್ರಸ್ತುತ ಅಧ್ಯಯನದಲ್ಲಿ ಕರ್ನಾಟಕದ ಬಂದಿಖಾನೆಗಳಲ್ಲಿ ಕೈದಿಗಳ ಮನಪರಿವರ್ತನೆಗಾಗಿ ಕಾರ್ಯಪ್ರವೃತ್ತವಾಗಿರುವ ಎಲ್ಲ ಜ್ಞಾನಸಂವಹನ ಮಾಧ್ಯಮಗಳು ಅವುಗಳ ಸಂವಹನಾ ಸಾಮರ್ಥ್ಯ, ಶ್ರೇಷ್ಠತೆ ಹಾಗೂ ಜ್ಞಾನಸಂವಹನಾ ದಾರಿಯಲ್ಲಿರುವ ಅಡ್ಡಿ ಆತಂಕ, ಲೋಪ ದೋಷಗಳು, ಮನಪರಿವರ್ತನಾ ಪ್ರಕ್ರಿಯೆಗೆ ಎಲ್ಲಿ ಹೇಗೆ ತಡೆಯುಂಟು ಮಾಡುತ್ತವೆ ಎಂಬುದನ್ನು ವಿವರವಾಗಿ ಚರ್ಚಿಸಲಾಗಿದೆ. ಹಾಗು ಈ ಅಧ್ಯಯನದಲ್ಲಿ ಕಂಡುಕೊಂಡ ಪ್ರಮುಖ ಫಲಿತಗಳನ್ನು ಸಾರಾಂಶ ರೂಪದಲ್ಲಿ ಪ್ರಸಕ್ತ ಅಧ್ಯಾಯದಲ್ಲಿ ನೀಡಲಾಗಿದೆ.

೧. ಬಂದಿಖಾನೆಯೊಳಗೆ ಕೈದಿಗಳ ಮನಪರಿವರ್ತನಾ ಕಾರ್ಯದಲ್ಲಿ ಬಳಸಿಕೊಳ್ಳಲಾಗುತ್ತಿರುವ - ಗ್ರಂಥಾಲಯ, ಸಾಂಪ್ರದಾಯಿಕ ಶಿಕ್ಷಣ, ವೃತ್ತಿ ಶಿಕ್ಷಣ, ವೃತ್ತಿ ತರಬೇತಿ ಮತ್ತು ಉದ್ಯಮಗಳು, ನಾಟಕ,

